# ಸಮಗ್ರ ದಾಸ ಸಾಹಿತ್ಯ

ಸಂಪುಟ : ೭



ಗಲಗಲಿ ಅವ್ವನವರ ಕೀರ್ತನೆಗಳು

ಸಮಗ್ರ ದಾಸ ಸಾಹಿತ್ಯ

ಸಂಪುಟ : ೭

# ಗಲಗಲಿ ಅವ್ವನವರ ಕೀರ್ತನೆಗಳು


*ಸಂಪಾದಕರು*

**ಹಣಮಂತ ತಾಸಗಾಂವಕರ**



ಕರ್ನಾಟಕ ಸರ್ಕಾರ

**ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ**

ಬೆಂಗಳೂರು

**SAMAGRA DASA SAHITYA SAMPUTA - 7** :
*Gala Gali Avvanavara Keerthanegalu,* Edited by Shri. Hanamantha Tasagaonkar and Published by Sri. Y. K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : **44 + ೩೬೦**
© ಕರ್ನಾಟಕ ಸರ್ಕಾರ

ಪ್ರಥಮ ಮುದ್ರಣ : ೨೦೦೩
ಪ್ರತಿ : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :
ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
ನಂ. ೩೬, ಕನ್ನಿಂಗ್‌ಹ್ಯಾಂ ರಸ್ತೆ
ಬೆಂಗಳೂರು – ೫೬೦ ೦೫೨

ಮುದ್ರಕರು :
ಮೆ. ಡಾಟ್ಸ್,
# ೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ


## ಸಂಪಾದಕ ಮಂಡಳಿ

### ಕಾರ್ಯನಿರ್ವಾಹಕ ಸಂಪಾದಕರು

ಡಾ. ಶ್ರೀನಿವಾಸ ಹಾವನೂರ

ಡಾ . ಟಿ ಎನ್ ನಾಗರತ್ನ

ಪ್ರೊ. ವಸಂತ ಕುಷ್ಟಗಿ

### ಸದಸ್ಯರು

ಡಾ. ಎಂ ಎಂ ಕಲಬುರ್ಗಿ

ಪ್ರೊ. ಎಂ. ರಾಜಗೋಪಾಲಾಚಾರ್ಯ (ಫೆಬ್ರವರಿ '೯೮ ರವರೆಗೆ)

ಡಾ. ಕೃಷ್ಣಕೊಲ್ಹಾರಕುಲಕರ್ಣಿ

ಡಾ. ಮಂದಾಕಿನಿ

ಪ್ರೊ. ಸುಧಾಕರ

ಡಾ. ಬಸವರಾಜ ಸಬರದ

### ಸದಸ್ಯ ಕಾರ್ಯದರ್ಶಿ

ನಿರ್ದೇಶಕರು

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

ಎಸ್. ಎಂ. ಕೃಷ್ಣ
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳು ಸಾಹಿತ್ಯದ ಮುದ್ರೆಯನ್ನು ಪಡೆದ ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟವರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು ; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿಡಿ ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ

ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ, ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿಡಿ ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

ಸಿ. ಎಸ್. ಕೇದಾರ್
ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಂಯೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮುವ್ವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟನೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಡಾ. ಎಂ. ಎಂ. ಕಲಬುರ್ಗಿ, ಸದಸ್ಯರಾದ ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣಕೊಲ್ಹಾರಕುಲಕರ್ಣಿ, ದಿವಂಗತ ಡಾ. ಮಂದಾಕಿನಿ, ಹಾಗೂ ದಿವಂಗತ ಪ್ರೊ. ಎಂ. ರಾಜಗೋಪಾಲಾಚಾರ್ಯ ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ–ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೇಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ಸುಬ್ರಮಣ್ಯಂ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಸಂಗಿತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ ಪಾಮರರನ್ನು ಏಕ ಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟನೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

ವೈ. ಕೆ. ಮುದ್ದುಕೃಷ್ಣ
ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಓದಲಾರದ ಕನ್ನಡ ಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ–ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ), ನಾಲ್ಕುನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೩ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಆನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ

ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ' ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯವು ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರ ಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದು ಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯ ವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದ ವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದು, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದು ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು*, ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿ ಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ–ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು ಕೆಳಗೆ ' ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ–ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿ ಕೊಡಬೇಕು – ಎಂಬುದಾಗಿ ನಿರ್ಧರಿಸಿತು.

---

* ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ ಎಂದು ಘೋಷಿಸಿದರು.

ಅದರಂತೆ ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಸಮಿತಿಯು ಪ್ರೊ. ವಸಂತ ಕುಷ್ಟಗಿ ಅವರನ್ನು ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ. ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಶ್ರೀ ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಬಿ. ಆರ್. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯು ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್ ಹಾಗೂ ಶ್ರೀ ಹನುಮನಗೌಡ ಮಾಲ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿದೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ-ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

## ಗಲಗಲಿ ಅವ್ವನವರ ಜೀವನ ವಿಚಾರ

ಕನ್ನಡ ಸಾಹಿತ್ಯಕ್ಕೆ, ಅದರಲ್ಲೂ ಮಾಧ್ವವಾಙ್ಮಯಕ್ಕೆ ಮಹಿಳೆಯರ ಕೊಡುಗೆಯೂ ಗಣನೀಯವಾಗಿದೆ. ಶ್ರೀ ಪುರಂದರದಾಸರ ಪತ್ನಿ-ಪುತ್ರಿಯರು, ಶ್ರೀ ರಾಘವೇಂದ್ರಸ್ವಾಮಿಗಳ ತಾಯಿಯವರು ಕಾವ್ಯರಚಿಸಿದ್ದರೆಂಬ ಮಾತಿದ್ದರೂ ಈಗ ಉಪಲಬ್ದವಿರುವ ಮಹಿಳಾ ಕೀರ್ತನಕಾರರಲ್ಲಿ ಗಲಗಲಿಯ ಅವ್ವನವರೇ ಮೊದಲಿಗರೆಂದು ಹೇಳಬಹುದು. ಗಲಗಲಿ ಮನೆತನ ಹಿಂದಿನಿಂದಲೂ ಶೌರ್ಯ, ಪಾಂಡಿತ್ಯಗಳಿಗೆ ಹೆಸರುವಾಸಿ. ಆದಿಲಶಾಹಿ, ನಿಜಾಮರು, ಪೇಶ್ವೆ, ರಾಣಿಸರಕಾರ, ಮೈಸೂರು ಅರಸರು ಹಾಗೂ ಇದೀಗ ಭಾರತ ಸರಕಾರದಿಂದಲೂ ಮಾನ-ಸಮ್ಮಾನಗಳನ್ನು ಪಡೆದ ಪ್ರಾಜ್ಞರು ಈ ಮನೆತನದವರು. ಇಂದು ರಾಷ್ಟ್ರಮಟ್ಟದ ಮನ್ನಣೆಗಳಿಸಿರುವ, ಸಂಸ್ಕೃತ-ಕನ್ನಡ ಉಭಯ ಭಾಷಾಪ್ರವೀಣ ಗಲಗಲಿ ಆಚಾರ್ಯರ ವಂಶದ ಹಿರಿಯರು, ಗಲಗಲಿಯ ಅವ್ವನವರು. ಈಕೆ ಗಲಗಲಿ ಆಚಾರ್ಯರ ವಂಶದ, ಮಹರ್ಷಿಗಳ ಮನೆತನದವರೆಂದೇ ಪ್ರಸಿದ್ಧರಾಗಿದ್ದ ಶ್ರೀ ಮುದ್ಗಲಾಚಾರ್ಯರ ಧರ್ಮಪತ್ನಿ, ಹೆಸರು ರಮಾ. ಗಲಗಲಿ ವಂಶಸ್ತರು 'ಅಪ್ಪನವರು - ಅವ್ವನವರು' - ಎಂದು ಮುದ್ಗಲಾ ಚಾರ್ಯರು ಮತ್ತು ರಮಾ ದಂಪತಿಗಳನ್ನು ಗೌರವಿಸಿ ಪೂಜಿಸುತ್ತಾರೆ. ಕ್ರಿ.ಶ.೧೯೨೭ರ 'ಬಾಲಬೋಧ' (ಬೆಳಗಾವಿಯ ಶ್ರೀ ರಾಮತತ್ವ ಪ್ರಕಾಶನದವರು ಪ್ರಕಟಿಸಿದ ಪುಸ್ತಕ) ಪುಸ್ತಕದ ಪ್ರಸ್ತಾವನೆಯನ್ನು ಬರೆದಿರುವ ಗಲಗಲಿ ಮಧ್ವಮುನಿ ಆಚಾರ್ಯರು' ಅನುಸರಿಸಿ ಬರೆದ ಸಂಕ್ಷಿಪ್ತ ಚರಿತ್ರೆ'ಯಿಂದ ತಾವು ವಿಷಯ ಗ್ರಹಣ ಮಾಡಿರುವುದಾಗಿ ಸೂಚಿಸಿದ್ದಾರೆ. ಅದರಲ್ಲಿ ರಮಾ ಹಾಗೂ ಮುದ್ಗಲಾಚಾರ್ಯರ ಪಾಣಿಗ್ರಹಣ

ಸಂದರ್ಭದ ಉಲ್ಲೇಖವಿದೆ. (ಭೋಗಾಪುರ ಗ್ರಾಮದ ಶ್ಯಾನುಭೋಗರ ಮಗಳಾದ ಈಕೆಯನ್ನು ಶ್ರೀ ಮುದ್ಗಲಾಚಾರ್ಯರು ಶಾಸ್ತ್ರ ಸಂಪನ್ನರಾದ ತಮ್ಮ ಮಕ್ಕಳೆಲ್ಲರ ಅನುಮತಿಪಡೆದು, ಕನ್ಯೆಯ ಮಾತಾಪಿತೃಗಳ ಸಮ್ಮತಿಯೊಂದಿಗೇ ವಿವಾಹವಾದರೆಂದು ಹೇಳಿದೆ.) ವಿವಾಹದ ವಿಚಾರವೂ ತುಂಬ ಕುತೂಹಲಕಾರಿಯಾದದ್ದೇ. ಒಮ್ಮೆ ಬಾಗಲಕೋಟ ಜಿಲ್ಲೆಯ ಗಲಗಲಿಯ ಪಂಡಿತ ಮುದ್ಗಲಾಚಾರ್ಯರು ತಮ್ಮ ಐದುಜನ ವಿದ್ವಾಂಸ ಪುತ್ರರೊಂದಿಗೆ ಮೈಸೂರಿನ ರಾಜಾಸ್ಥಾನಕ್ಕೆ ಹೋಗಿದ್ದರಂತೆ. ಅಲ್ಲಿಯ ವಿದ್ವಾಂಸರನ್ನು ವಾದದಲ್ಲಿ, ಪಾಂಡಿತ್ಯದಲ್ಲಿ ಸೋಲಿಸಿ, ಮಾನ-ಮರ್ಯಾದೆಯೊಂದಿಗೆ ಹಿಂತಿರುಗಿ ಬರುವಾಗ ಭೋಗಾಪುರ ಗ್ರಾಮದ ಭೋಗಾಪುರೇಶ ದೇವಸ್ಥಾನದಲ್ಲಿ ತಂಗಿದ್ದರು. ಅಲ್ಲಿ ಓಡಾಡಿಕೊಂಡಿದ್ದ ಅವಿವಾಹಿತೆ ಶ್ಯಾನುಭೋಗರ ಮಗಳು ಹನ್ನೆರಡರ ಬಾಲೆಯನ್ನು ಕಂಡು, ಅವಳನ್ನೆ ಮದುವೆಯಾಗಲು ನಿರ್ಧರಿಸಿದರು. ಮೊದಲು ಮಕ್ಕಳ ಒಪ್ಪಿಗೆ ಪಡೆದು ಬಳಿಕ ಶ್ಯಾನುಭೋಗರಿಗೆ ಸಾವಿರದ ಇನ್ನೂರು ರೂ. ತೆರಕೊಟ್ಟು, ತೊಂಬತ್ತು ವಯಸ್ಸಿನ ವಯೋವೃದ್ಧ ಮುದ್ಗಲಾಚಾರ್ಯರು, ಈ ಕನ್ಯೆಯನ್ನು ಮದುವೆ ಮಾಡಿಕೊಂಡರು; ಮದುವೆಯಾದ ಎಂಟೇ ದಿನಗಳಲ್ಲಿ ಪರಲೋಕ ಯಾತ್ರೆ ಮಾಡಿದರು. ಸಾಯುವಾಗ ಮಕ್ಕಳನ್ನು ಬಳಿಗೆ ಕರೆದು, ತಮ್ಮ ವಿಧವೆ ಹೆಂಡತಿಗೆ ನೀವೇ ವಿದ್ಯಾಭ್ಯಾಸ ಮಾಡಿಸಬೇಕೆಂದು ಹೇಳಿದ್ದರಿಂದ ಮಕ್ಕಳೇ ಅವ್ವನಿಗೆ ವಿದ್ಯಾಗುರುಗಳೂ ಆದರು. ಕ್ರಮೇಣ ಅವ್ವನವರು ನ್ಯಾಯಶಾಸ್ತ್ರದಲ್ಲಿ ವಿಶೇಷ ಪರಿಣಿತಿಯನ್ನು ಪಡೆದದ್ದಲ್ಲದೆ ಪುಣೆಯ ಪೇಶ್ವೆ ದರ್ಬಾರಿನಲ್ಲಿ, ಔತ್ತರೇಯ ವಿದ್ವಾಂಸರು ದಕ್ಷಿಣದ ವಿದ್ವಾಂಸರನ್ನೆಲ್ಲ ಸೋಲಿಸಿದೆವೆಂದು ಬೀಗುತ್ತಿದ್ದಾಗ ಮುದ್ಗಲಾಚಾರ್ಯರ ಮಕ್ಕಳಾದ ಪಂಡಿತ ಷಟ್ಕರು ಸೋಲುವ ಸ್ಥಿತಿ ಬಂತೆಂದೂ ಆಗ ಅವ್ವನವರ ಸಹಾಯ ಪಡೆದು ವಾದಮಾಡಿ ಗೆದ್ದರೆಂದೂ ಪ್ರತೀತಿ. ಈ ಮಾತಿಗೆ ಪೇಶವಾಯಿಯವರು ಅವ್ವನವರಿಗೆ ಬಾಗಲಕೋಟ ಜಿಲ್ಲೆಯ ಬೀಳಗಿ ಟ್ರೇಜರಿಯಲ್ಲಿ ವರ್ಷಾಶನ ಹಾಕಿಕೊಟ್ಟಿದ್ದುದೇ ಸಾಕ್ಷಿ.)

ಅಪ್ಪನವರ ಹಾಡುಗಳಲ್ಲಿ ದೊರೆಯುವ ಆಧಾರಗಳಿಂದ ಅವರ ಕಾಲವನ್ನು ಹೀಗೆ ಗುರ್ತಿಸಬಹುದು. ತಮ್ಮ ಮುಯ್ಯದ ಹಾಡಿನಲ್ಲಿ ಹಾಡು ಬರೆದು ಮುಗಿಸಿದ ದಿನವನ್ನು ಹೀಗೆ ಹೇಳಿದ್ದಾರೆ.

'ಜ್ಯೇಷ್ಠ ಬಹುಳ ಉತ್ಕೃಷ್ಠ ಪಂಚಮಿತಿಥಿ
ಶ್ರೇಷ್ಠವಾಗಿದ್ದ ಬುಧವಾರ। ಈ ಕವನ ಶ್ರೀ
ಕೃಷ್ಣಗರ್ಪಿಸಿದೆ ಹರುಷಾಗಿ
ಭಾವ (ಯುವ?) ಸಂವತ್ಸರದಿ ದೇವಾಧಿದೇವನ
ಪಾವನವಾದ ಚರಿತ್ರೆಯ ರಚಿಸಿದೆ'

ಈ ವಿವರಗಳು ಎಫಿಮೆರಿಸ್ ಪ್ರಕಾರ ೧೬೯೫ನೇ ಇಸವಿ ಮೇ ೨೨ನೇ ತಾರೀಕು ಬುಧವಾರ ಸರಿಯಾಗುತ್ತವೆ. ಉಳಿದಂತೆ ಕೆಲವು ಪೂರಕ ಅಂಶಗಳು ಹೀಗಿವೆ:

೧. ಒಮ್ಮೆ ಶ್ರೀ ಮುದ್ಗಲಾಚಾರ್ಯರು ಉತ್ತರಾದಿಮಠದ ಸ್ವಾಮಿಗಳಾಗಿದ್ದ ಶ್ರೀ ಸತ್ಯಪೂರ್ಣ ತೀರ್ಥರನ್ನು ಸುಧಾಮಂಗಳಕ್ಕೆಳ ಆಮಂತ್ರಿಸಿದಾಗ ಶ್ರೀಪಾದಂಗಳವರು ಒಂದು ನಿರೂಪ ಪತ್ರ ಬರೆದಿದ್ದು, ಅದರಲ್ಲಿ 'ಜಯ ಸಂವತ್ಸರದ ವೈಶಾಖ ಶುದ್ಧ ದಶಮಿ...' ಎಂಬ ಉಲ್ಲೇಖವಿದ್ದು, 'ಮಿಗಿಲಾದ ವರ್ತಮಾನ ವಿದ್ಯಾಧೀಶಾಚಾರ್ಯರು ಹೇಳಲಾಗಿ ಮನಸ್ಸಿಗೆ ಬಂದಿತು ಇತಿ ನಿರೂಪ' – ಎಂದಿರುವರು. ಅಂದರೆ, ಮುದ್ಗಲಾಚಾರ್ಯರು ತಮ್ಮ ಪುತ್ರ ವಿದ್ಯಾಧೀಶಾಚಾರ್ಯರೊಡನೆ ಶ್ರೀಗಳವರಿಗೆ ಹೇಳಿ ಕಳುಹಿಸಿದ್ದರೆಂಬ ವಿಚಾರ ಇಲ್ಲಿ ಸ್ಪಷ್ಟವಾಗಿದೆ. ಮಠಾಧೀಶರ ಮೂಲ ಪತ್ರದಿಂದ ಈ ವಿಚಾರ ತಿಳಿಯುತ್ತದೆ.

೨. ಪೇಶವೆ ದರ್ಬಾರಿನಲ್ಲಿ ಅಪ್ಪನವರು ತಮ್ಮ ವಿದ್ವತ್ತನ್ನು ಪ್ರದರ್ಶಿಸಿ ಜಯಗಳಿಸಿ ಕೊಟ್ಟಿದ್ದಕ್ಕಾಗಿ ವರ್ಷಾಶನ ಪಡೆದ ವಿಚಾರವನ್ನು ಪ್ರಸ್ತಾಪಿಸಲಾಗಿದೆಯಷ್ಟೆ. ಕ್ರಿ.ಶ.೧೭೪೦ರ ಅನಂತರ ಪೇಶವೆಗಳ ಆಳ್ವಿಕೆಯ

ಅವಸಾನ ಪ್ರಾರಂಭವಾಗುವುದರಿಂದ ಅದಕ್ಕೆ ಮುಂಚೆಯೇ ಅವ್ವನವರು ಈ ವರ್ಷಾಶನವನ್ನು ಪಡೆದಿರಬೇಕು.

೩. ಮೈಸೂರಿನ ಅರಸರಾಗಿದ್ದ ಶ್ರೀ ಕೃಷ್ಣರಾಜ ಒಡೆಯರಿಂದಲೂ ಅವ್ವನವರಿಗೆ ಸನ್ಮಾನದೊರಕಿದೆ. ಅರಸರು ಇವರಿಗೆ ಮೇಣೆ, ನಗನಾಣ್ಯ, ವಸ್ತ್ರಾಭರಣಗಳನ್ನಿತ್ತು ಗೌರವಿಸಿದ್ದರು. ಇವರ ವಿದ್ವತ್ತನ್ನು ಕಂಡು ಕೇಳಿದ್ದ ರಾಜರು ಸ್ವತಃ ಇವರನ್ನು ಪಲ್ಲಕ್ಕಿಯಲ್ಲಿ ಕೂರಿಸಿ ವೈಭವದಿಂದ ಅರಮನೆಗೆ ಕರೆದುಕೊಂಡು ಹೋಗಿದ್ದರೆನ್ನಲಾಗಿದೆ.

೪. ಬಾಗಲಕೋಟೆಯಲ್ಲಿ ಜನಿಸಿದ ಶ್ರೀ ಪ್ರಸನ್ನವೆಂಕಟದಾಸರು (ಕ್ರಿ.ಶ.೧೬೮೦/೧೭೫೨) ಈ ಮುದ್ಗಲಾಚಾರ್ಯರ ಶಿಷ್ಯರು. ಇವರಲ್ಲೇ ಶಾಸ್ತ್ರಾಭ್ಯಾಸ ಮಾಡಿದವರು. ಗುರುಗಳನ್ನು ಕುರಿತು 'ಭಜಿಸಿ ಬದುಕೆಲೋ ಮುದ್ಗಲಾರ್ಯರನು' ಎಂದು ಸ್ತುತಿಸಿರುವರು. ಅಲ್ಲದೆ 'ಸ್ವೀಯಪಾದ ನೀರಜಾನುರಕ್ತ ಮುದ್ಗಲಸ್ಯಮೇ। ಶ್ರೀಗುರೋರು ಮಾನಸಾಂಬು ಜಾಲಯೋದಯೋದಧಿ :'-ಎಂದಿದ್ದಾರೆ.

ಮೇಲಣ ಈ ಕೆಲವು ಆಧಾರಗಳಿಂದ ಅವ್ವನವರು ಕ್ರಿ.ಶ.೧೬೭೦ ರಿಂದ ೧೭೬೦ರ ಕಾಲದಲ್ಲಿ ಜೀವಿಸಿದ್ದರೆನ್ನ ಬಹುದು. ಅವರು ತಮ್ಮ ಕೊನೆಗಾಲವನ್ನು ತಮ್ಮ ಹಿರಿಯರು ಬಾಳಿ ಬದುಕಿದ್ದ ಶೂರ್ಪಾಲಿ ಗ್ರಾಮದಲ್ಲೇ ಕಳೆದು, ಅಲ್ಲಿಯೇ ಹರಿಪಾದವನ್ನು ಸೇರಿದರು.

ಇನ್ನೊಂದು ಸ್ವಾರಸ್ಯವಾದ ವಿಚಾರವೆಂದರೆ ಅವ್ವನವರು ತಮ್ಮ ಹಾಡಿನಲ್ಲಿ ಗುರುಪರಂಪರೆ ಹೇಳುತ್ತ ಕ್ರಿ.ಶ.೧೮೭೦ರಲ್ಲಿದ್ದ ಶ್ರೀ ಸತ್ಯಧರ್ಮ ತೀರ್ಥರನ್ನೂ ಸ್ತುತಿಸಿದ್ದಾರೆ ಬಹುಶಃ ಈ ಹೆಸರನ್ನು ಅಂದು ಹಾಡನ್ನು ಪ್ರತಿ ಮಾಡಿದವರು ಬರೆದು ಸೇರಿಸಿರಬೇಕು; ಅಥವಾ ಅವ್ವನವರು ದೀರ್ಘಾಯುಷಿಗಳಾಗಿದ್ದು ಸು.೧೨೫ ವರ್ಷಗಳ ಕಾಲ ಬಾಳಿ ಬದುಕಿದ್ದಿರಬೇಕು. ಹೀಗಾಗಿ ಅವ್ವನವರ ಕಾಲವನ್ನು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. ಅದಕ್ಕೆ ಇನ್ನೂ ಸಾಕಷ್ಟು ಸಂಶೋಧನೆ ನಡೆಯಬೇಕಿದೆ.

# ಕೀರ್ತನೆಗಳು

ಹದಿನೇಳನೆಯ ಶತಮಾನದ ಉತ್ತರಾರ್ಧ ಹಾಗೂ ಹದಿನೆಂಟನೆಯ ಶತಮಾನದ ಪೂರ್ವಾರ್ಧದಲ್ಲಿ ಜೀವಿಸಿದ್ದಿರಬಹುದಾದ ಅವ್ವನವರು ರಾಮೇಶ, ರಮಿಅರಸು, – ಇತ್ಯಾದಿ ಅಂಕಿತಗಳಿಂದ ಭಕ್ತಿಪ್ರದ ಮುಯ್ಯದ ಹಾಡುಗಳು, ಬೀಗರ ಹಾಡುಗಳು ಕೋಲು ಹಾಡುಗಳು, ಶೃಂಗಾರ ತಾರತಮ್ಯ ಮೋರೆಗೆ ನೀರುತಂದ ಹಾಡುಗಳು ಮೊದಲಾದ ಕೃತಿಗಳನ್ನು ರಚಿಸಿರುವುದಾಗಿ ತಿಳಿದುಬರುತ್ತದೆ ಆದರೆ ಈಗ ನಮಗೆದೊರೆತಿರುವುದು ಮುಯ್ಯದ ಹಾಡುಗಳು ಮಾತ್ರ. ಅಡಿಗೆ ಮಾಡುತ್ತ ಮಾಡುತ್ತಲೇ ಆಲಿಸುತ್ತ,ಮಾತ್ರ ಕೇವಲ ಶ್ರವಣ ಮಾತ್ರದಿಂದಲೇ ಮಕ್ಕಳಿಂದ ಶಾಸ್ತ್ರಾಭ್ಯಾಸಮಾಡಿ ಪಂಡಿತರಾದ ಅವ್ವನವರು, ' ಬಲ್ಲಿದ ಗುರುಗಳ ಎಲ್ಲ ಹಿರಿಯರ ದಯದಿ । ಬಲ್ಲಷ್ಟು ತತ್ವರಚಿಸಿದೆ' ಎಂದಿದ್ದಾರೆ.

'ಮುದ್ಗಲ್ಲವಾಸನ ಶುದ್ಧನಾಮದವರು
ಮುದ್ದುಪಾದಗಳ ಸ್ಮರಿಸುತ ರಚಿಸಿದ ಅ
ಪದ್ಧ ನೋಡದಲೆ ಹರಿಕೊಳ್ಳೊ'

ಮೂಢಳು ನಾನೊಂದು ಬೇಡಿ ಬಯಸಿಕೊಂಡೆ
ಮಾಡಿದೆ ರಚನಿ ಮನಉಬ್ಬಿ' – ಎಂದು ವಿನಯವನ್ನು ಮೆರೆದಿರುವರು.

ಕೊಂಗಬುದ್ಧಿಯನ್ನು ಅಷ್ಟಮದಗಳನ್ನು ತಂದೆ ರಾಮೇಶನ ಪಾದಕ್ಕೆ ಅರ್ಪಿಸಿ, ಜ್ಞಾನಸೂರ್ಯನ ಉದಯಮಾಡಿಸಬೇಕೆಂದು ಕೇಳುವ ಪರಿ ಹೀಗಿದೆ:

'ಅಷ್ಟಮದವು ತಮವುಎಂಬೊ
ಕುಟ್ಟಿ ಹಿಟ್ಟುಮಾಡಿಸಿ

ಸಿಟ್ಟು ಕೋಪವೆಂಬೊ ಬಣವಿ
ಒಟ್ಟಿ ಕೆಂಡ ಹೇರಿಸಿ'
ಸತ್ವ ರಜವು ತಮವು ಎಂಬೊ

ಕತ್ತಲಿಯ ಅಡಗಿಸಿ
ಮತ್ತೆ ಜ್ಞಾನ ಸೂರ್ಯನ ಪ್ರ
ಶಸ್ತ ಉದಯ ಮಾಡಿಸಿ...'

ಮುಯ್ಯದ ಹಾಡುಗಳು ಅವ್ವನವರ ವಿಶೇಷ ರಚನೆಗಳು. ಪುರಾಣದ ಹಿನ್ನೆಲೆಯಲ್ಲಿ ರಚಿತವಾಗಿರುವಂಥ ಹಾಡುಗಳವು. 'ಮುಯ್ಯಿ' ಕೊಡುವ ಮತ್ತು ಹಿಂತಿರುಗಿಸುವ ಸಂಪ್ರದಾಯದ ನೆವದಲ್ಲಿ ಭಾರತ ಭಾಗವತಾದಿ ಪುರಾಣ ಪಾತ್ರಗಳು, ಪುರಾಣ ಪ್ರಸಂಗಗಳು, ಅವುಗಳ ಮನೋಧರ್ಮ, ಬಗೆಬಗೆಯ ವರ್ಣನೆಗಳು ನಾಮುಂದು ತಾಮುಂದು ಎಂದು ಧುಮ್ಮಿಕ್ಕುತ್ತವೆ. ಪರಸ್ಪರ ಮಾತಿನ ಚಕಮಕಿ, ಹಾಸ್ಯ, ವಿಡಂಬನೆಗಳು ಮುಗಿಲು ಮುಟ್ಟುತ್ತವೆ, ಅವ್ವನವರ ಮುಯ್ಯದ ಹಾಡುಗಳನ್ನು 'ಮುಯ್ಯಕೊಟ್ಟಹಾಡು' ಮತ್ತು 'ಮುಯ್ಯ ಹಿಂತಿರುಗಿಸಿದ ಹಾಡು' – ಎಂದು ಎರಡು ನೆಲೆಗಳಲ್ಲಿ ಪರಿಭಾವಿಸಬಹುದು. ಈ ಹಾಡುಗಳಲ್ಲಿ ಉದ್ದಕ್ಕೂ ದ್ರೌಪದಿ, ಸುಭದ್ರೆ, ರುಕ್ಮಿಣಿ, ಸತ್ಯಭಾಮೆ, ಗಂಗೆ–ಗೌರಿ, ಕೃಷ್ಣ, ವಿಷ್ಣು–ಶಿವ ಈ ಎಲ್ಲ ಪಾತ್ರಗಳ ಸಡಗರ ಸಂಭ್ರಮಗಳೊಂದಿಗೆ ಶ್ರೀಹರಿಯ ದಿವ್ಯಲೀಲಾ ವಿಭೂತಿಗಳೂ ಕೋಡಿವರಿದಿವೆ.

ಸುಭದ್ರೆ ದ್ರೌಪದಿಯರು ತಮ್ಮ ಅಣ್ಣ ಶ್ರೀಕೃಷ್ಣನ ದರ್ಶನಾಕಾಂಕ್ಷಿಗಳಾಗಿ ಮುಯ್ಯದ ನೆಪ ಮಾಡಿಕೊಂಡು ದ್ವಾರಕೆಗೆ ಬರುವರು. ಕೃಷ್ಣನ ಹಾಗೂ ಅವನ ಪತ್ನಿಯರಾದ ರುಕ್ಮಿಣಿ ಸತ್ಯಭಾಮೆಯರನ್ನು ಮನಸೋಚ್ಛೆ ಸ್ತುತಿಸಿ ಅವರೊಂದಿಗೆ ವಾದ ಮಾಡಿದಂತೆ ನಟಿಸಿ ಧನ್ಯರಾಗುವರು. ತಾವು ಧನ್ಯರಾದುದಲ್ಲದೆ ಮುಂಬರುವ ಭಕ್ತರೂ ಈ ಪದ್ಧತಿಯುನ್ನನುಸರಿಸಿ ಧನ್ಯತೆಪಡೆಯಲಿ ಎಂದು ಆಶಿಸಿ, ಆಣೆಯಿಟ್ಟು ತಮ್ಮ ತಮ್ಮ ಮನೆಗಳಿಗೆ ಹಿಂತಿರುಗುವರು ಇದು ಸ್ಥೂಲವಾಗಿ ಮುಯ್ಯಕೊಟ್ಟ ಹಾಡಿನ ವಸ್ತು. ಅಂತೆಯೇ ತಮಗೆ ಪ್ರೀತಿಪಾತ್ರರೂ ಭಗವದ್ಭಕ್ತರೂ ಆದ ಪಾಂಡವರನ್ನು ಕಾಣಲು, ಪ್ರೀತಿಯಿಂದ ಆಲಿಂಗಿಸಲು ಬಯಸಿದ ಶ್ರೀಕೃಷ್ಣ ತನ್ನ ಪತ್ನಿಯರಿಂದಕೂಡಿ ವೈಭವದಿಂದ ಮುಯ್ಯ ಹಿಂತಿರುಗಿಸಲು ಹಸ್ತಿನಾವತಿಗೆ ಬರುತ್ತಾನೆ. ಪುನಃ

ಅಲ್ಲಿ ಪರಸ್ಪರರಿಗೆ ವಾಗ್ವಾದಗಳು, ಹಾಸ್ಯ, ವಿಡಂಬನೆ ಎಲ್ಲ ಸಾವಕಾಶವಾಗಿ ನಡೆದು ಎಲ್ಲರೂ ಸಂತೋಷ ಸಡಗರ ಸಂಭ್ರಮಗಳಿಂದ ಶುಭ ಹಾರೈಸುತ್ತ ಹಿಂತಿರುಗುವರು. –ಇದು ಮುಯ್ಯ ಹಿಂತಿರುಗಿಸಿದ ಹಾಡಿನ ವಸ್ತು.

ಅವ್ವ ವರ್ಣಿಸಿರುವ ದ್ವಾರಕೆಯ ಒಂದು ನೋಟ ಹೀಗಿದೆ :

ದಿಕ್ಕು ತುಂಬಿತು ಲೆಕ್ಕವಿಲ್ಲದೆ ಜನರು
ಕಾಶತುಂಬಿತು ಎಲ್ಲಕೋಶತುಂಬಿತು
ಆಶೆಬಡುತಲೆ ಜನರು ಸೋಸಿನ ಮುಯ್ಯಕ್ಕೆ
ಹಾದಿ ತುಂಬಿತು ಎಲ್ಲ ಬೀದಿ ತುಂಬಿತು
ಅಂಬರ ತುಂಬಿತು ಪಟ್ಟಣ ತುಂಬಿತು
ಒಂದಿಷ್ಟೂ ಬಿಡದಲೆ॥

ಮುಯ್ಯಕೊಡುವ ಮಂಗಳಕಾರ್ಯದಲ್ಲಿ ಪಾಂಡವರೊಡಗೂಡಿ ಸುಭದ್ರೆ ದ್ರೌಪದಿಯರು ಮಾತ್ರ ಭಾಗವಹಿಸಿರಲಿಲ್ಲ. ದೇವಾನುದೇವತೆಗಳು ತಾಳ ತಂಬೂರಿಯವರು, ತುಂಬುರ ನಾರದರು, ಸಿದ್ಧ ಸಾಧ್ಯರು, ಪ್ರಸಿದ್ಧ ನಾಟಕಕಾರರು ಎಲ್ಲರೂ ಕೂಡಿ ' ಕೋಟಿ ಸೂರ್ಯರ ಥಾಟಿ ತೋರೋ ಅಂಗಳದಿ । ಮುತ್ತಿನ ತೋರಣ ನವರತ್ನದ ಹಂದರ । ಪಚ್ಚದ ಪಾವಟಿಗೆ ರತ್ನ ಹಚ್ಚಿದ ಹೊಸ್ತಿಲ'ನ್ನು ದಾಟಿ ಒಳಗೆ ಪ್ರವೇಶಿಸಿದರಂತೆ! ಇದು ಕೃಷ್ಣನ ದ್ವಾರಕೆಯ ವೈಭವ. ಕೃಷ್ಣಾರ್ಜುನರ, ರುಕ್ಮಿಣಿ ಸತ್ಯಭಾಮೆ; ಸುಭದ್ರೆದ್ರೌಪದಿಯರ ಪರಿಹಾಸ್ಯಭರಿತ ಸಂಭಾಷಣೆಗಳು ರಸವತ್ತಾಗಿವೆ. (ಅವ್ವನವರ ಭಾಷೆ, ಉಪಮಾ–ರೂಪಕಾದಿ ಅಲಂಕಾರಗಳು, ನಾಣ್ಣುಡಿ, ಪದಪುಂಜಗಳು ನಿಜಕ್ಕೂ ಅಚ್ಚರಿಯುಂಟು ಮಾಡುತ್ತವೆ.)

'ನೇತ್ರವೆಂಬೊ ಕುಮುದ ಚಕ್ಕನರಳುತ'
'ಕಂದಗೆ ಸ್ತನವೊಂದುಬಿಂದು ಬಾಯೊಳಗಿಟ್ಟು'
'ತಾರಕ್ಕಿ ಹೊಳೆವಂತೆ ತೋರ ದೀವಿಗೆ ಎಷ್ಟ'–ಇವು

ಎಲ್ಲೋ ಒಂದೆರಡು ಉದಾಹರಣೆಗಳು. 'ಘಿಲಿ ಘಿಲಿ ಘಿಲಿಕೆಂದು ಗೆಜ್ಜೆ...ಘಿಲಕು ಎನ್ನುತಲಿ' -ಎಂದು ಆ ನರ್ತನ ಪ್ರಿಯ ಹರಿಯನ್ನು ಭಕ್ತಿಯಿಂದ ತಾಳಕ್ಕೆ ತಕ್ಕಂತೆ ಕುಣಿಸಿದ್ದಾರೆ, ಅವ್ವನವರು. ಸಜ್ಜನರ ಸಹವಾಸ ಹೇಗಿರುತ್ತದೆ ಎಂಬುದನ್ನು 'ಭಾವಜ್ಞರ ಸಂಗ ಶಾವಿಗೆ ಉಂಡಂತೆ' -ಎಂದು ಹೇಳಿರುವುದಲ್ಲದೆ' ಪಾಮರರ ಸಹವಾಸ ಬೇವಿನಹಾಲು ಕುಡಿದಂತೆ' -ಕಕ್ಕಟ್ಟೆ ಕಹಿ ಅನುಭವ ವೆಂಬುದನ್ನು ಹೇಳಿರುವರು ಹೀಗೆ ಅವ್ವನವರ ಕಾವ್ಯದ ರಸಾನುಭೂತಿ, ಭಕ್ತಿಯಕುಲುಮೆಯಲ್ಲಿ ಅನುಭವದ ಮೇಲೆ ಪುಟಗೊಂಡೇ ಪುಟಿಯುತ್ತದೆ. 'ಹಾಡುಗಳಲ್ಲಿ ಬರುವ ಪರಸ್ಪರ ಮಾತಿನ ಚಕಮಕಿಗಳು, ಮಾರ್ಮಿಕ ಉತ್ತರಗಳು, ಪ್ರಸಂಗಾವಧಾನದ ರೀತಿ ಲವಲವಿಕೆಯಿಂದ ಕೂಡಿದೆ' ಸುಭದ್ರೆ-ರುಕ್ಮಿಣಿ ಹಾಗೂ ರುಕ್ಮಿಣಿ-ದ್ರೌಪದಿಯರ ಮಾತುಗಳು ಈ ದೃಷ್ಟಿಯಿಂದ ಗಮನಾರ್ಹ.

'ಜೋಗುಳದಹಾಡು' ಅವ್ವನವರ ಇನ್ನೊಂದು ಕೃತಿ, ಇದೂ ಕೂಡ ಸರಳ ಮಾತುಗಳಲ್ಲಿ ಸುಲಭಧಾಟಿಯಲ್ಲಿ ನಿರೂಪಿತವಾಗಿದೆ. ೫೨ ನುಡಿಗಳಲ್ಲಿರುವ ಈ ಹಾಡಿನಲ್ಲಿ ಮಗು ಕೃಷ್ಣನನ್ನು ವಿಧಿವತ್ತಾಗಿ ತೊಟ್ಟಿಲಿನಲ್ಲಿ ಮಲಗಿಸಿ ಜೋಗುಳ ಹಾಡಿದ ಪ್ರಸ್ತಾಪವಿದೆ. ಕೃಷ್ಣ ಹುಟ್ಟಿದ ಕೂಡಲೇ ಕಂಸನ ಭಯದಿಂದ ವಸುದೇವ ಅವನನ್ನೆತ್ತಿಕೊಂಡು ಗೋಕುಲದಲ್ಲಿ ಯಶೋದೆಯ ಬಳಿಯಲ್ಲಿಟ್ಟು ಯಶೋದೆಯ ಮಡಿಲಿನ ಹೆಣ್ಣುಕೂಸನ್ನು ಒಯ್ದು ದೇವಕಿಯ ಬದಿಯಲ್ಲಿಟ್ಟನೆಂಬುದರಿಂದ ಕೀರ್ತನೆ ಪ್ರಾರಂಭವಾಗುತ್ತದೆ. ಕ್ರಮವಾಗಿ ಮಗುವಿಗೆ ಎರೆದು ಜಾತಕರ್ಮಮಾಡಿ, ತೊಟ್ಟಿಲಿಡುವ ಶಾಸ್ತ್ರವನ್ನು ಹಂತಹಂತವಾಗಿ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ಇನ್ನೊಂದು ಸೇತುಬಂಧನದ ಹಾಡು. ರಾಮಭಕ್ತ ಹನುಮ ಮತ್ತು ಕೃಷ್ಣ ಭಕ್ತ ಪಾರ್ಥರನಡುವೆ ರಾಮಹೆಚ್ಚು ಕೃಷ್ಣಹೆಚ್ಚು ಎನ್ನುವ ವಾಗ್ವಾದ ಪ್ರಾರಂಭವಾಗುತ್ತದೆ. ವಾಗ್ವಾದದ ನೆಪದಲ್ಲಿ ರಾಮ-ಕೃಷ್ಣರಿಬ್ಬರ ಮಹಿಮೆಗಳನ್ನೂ ಹೇಳುತ್ತ ಹೋಗುವ ತಂತ್ರ ಮೆಚ್ಚುವಂಥದ್ದು. ಕೊನೆಗೆ ಪಾರ್ಥ ಸೋತರೂ ಹನುಮ ಅವನ ಧ್ವಜದಲ್ಲಿ ನೆಲೆಸಿದನೆನ್ನುವಲ್ಲಿಗೆ ಕೀರ್ತನೆ ಮುಗಿದಿದೆ. ಮೇಲಿನ ಈ ಎರಡು ಕೀರ್ತನೆಗಳನ್ನೂ ಅವ್ವನವರವೆಂದು ಹಾಡುತ್ತಾರಾದರೂ, ಅವರವೇ ಎಂದು ಖಚಿತವಾಗಿ ಹೇಳುವುದು ಕಷ್ಟ ಆದ್ದರಿಂದ ಅವುಗಳನ್ನು ಅನುಬಂಧವಾಗಿ ಕೊಟ್ಟಿದೆ. (ನೋಡಿ : ಅನುಬಂಧ-೧)

ಅವ್ವನವರೊಂದಿಗೆ ಅವರ ಶಿಷ್ಯೆ ಭಾಗಮ್ಮ ಸದಾ ಇರುತ್ತಿದ್ದರೆನ್ನಲಾಗಿದೆ. ಪ್ರಯಾಗಮ್ಮ ಅಂಕಿತದಿಂದ ಪ್ರಸಿದ್ಧರಾಗಿದ್ದ ಇವರು ಅವ್ವನವರೊಂದಿಗೆ ಕಾಶಿಯಲ್ಲಿ ವಾಸಿಸುತ್ತಿದ್ದಾಗ ರೋಗಪೀಡಿತರಾಗಿದ್ದು ಅವ್ವನವರ ಆಜ್ಞಾನುಸಾರ ಭಾಗವತ ತೃತೀಯ ಸ್ಕಂಧವನ್ನು ಕನ್ನಡದಲ್ಲಿ ರಚಿಸಿ ರೋಗ ಮುಕ್ತರಾದರಂತೆ. 'ಏಸುಜನ್ಮದ ಪುಣ್ಯವಾಸವಾಯಿತೋ ವಿಷ್ಣುದಾಸರ ದಾಸಿ ನಾನಾದೆ'-ಎಂದು ಧನ್ಯತಾಭಾವವನ್ನು ಮೆರೆದಿರುವರು 'ಕಾಶಿ ಪಟ್ಟಣದಲ್ಲಿ ವಾಸಾದ ಭಾಗಮ್ಮನು ಕಟ್ಟಿದ ಪದ್ಯವನು ಭೂಸುರರೆಲ್ಲರು ಉದಾಸೀನ ಮಾಡದೆ ಲೇಸಾಗಿ ಪದ್ಯವ ತಿದ್ದುವದು' –ಎಂಬ ವಿನಯವನ್ನು ಮೆರೆದಿದ್ದಾರೆ, ಭಾಗಮ್ಮ.

ಒಟ್ಟಿನಲ್ಲಿ ಸಂಸ್ಕೃತ ವಿದ್ವಾಂಸರ, ಶಾಸ್ತ್ರಸಂಪನ್ನರ, ವೇದಪಾರಂಗತರ ಮನೆಯ ಹೆಣ್ಣು ಮಗಳೊಬ್ಬಳು ಕನ್ನಡದಲ್ಲಿ ಕೃತಿರಚನೆ ಮಾಡಿದ್ದಲ್ಲದೆ, ಅಂದಿನ ಸಾಮಾಜಿಕ ಪರಿಸರದಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯ ವಹಿಸಿದ್ದು ಹೆಗ್ಗಳಿಕೆಯೇ ಸರಿ. ಉತ್ತರ ಕರ್ನಾಟಕದ ಕೆಲವೆಡೆಗಳಲ್ಲಿ ಇಂದಿಗೂ ಅವ್ವನವರ ಮುಯ್ಯದ ಹಾಡು, ಸೇತುಬಂಧನದ ಹಾಡುಗಳನ್ನು ಹಬ್ಬ ಹರಿದಿನಗಳಲ್ಲಿ ಶ್ರದ್ಧೆ–ಭಕ್ತಿಗಳಿಂದ ಹಾಡುತ್ತಾರೆ.

ಹಸ್ತಪ್ರತಿ – ಸಂಪಾದನೆ

ಅವ್ವನವರ ಕೀರ್ತನೆಗಳು ಬಾಯಿಂದ ಬಾಯಿಗೆ ಸಾಗಿಬಂದಿದ್ದು, ಕೆಲವರು ಅವುಗಳನ್ನು ಬರೆದಿಟ್ಟುಕೊಳ್ಳುವ ಮನಸ್ಸು ಮಾಡಿದ್ದು ನಿಜಕ್ಕೂ ಸಂತಸದ ಸಂಗತಿ. ನನ್ನ ಮಾವಂದಿರಾದ ಪಂಡಿತ ಪ್ರಾಣನಾಥಾಚಾರ್ಯ ಕೂರ್ಮಾಚಾರ್ಯ ಗಲಗಲಿಯವರಲ್ಲಿದ್ದ ಅಂತಹ ಒಂದು ಹಸ್ತಪ್ರತಿ ನನಗೆ ದೊರೆಯಿತು. ೧೯೨೭ ರಲ್ಲಿ ಪ್ರಕಟಗೊಂಡ ಕೆಲ ಹಾಡುಗಳ ಮುದ್ರಿತ ಪ್ರತಿಯೊಂದು ದೊರೆಯಿತು. ಬಾಲಬೋಧ ಲಿಪಿಯ (ದೇವನಾಗರೀ ಲಿಪಿ) ಪುಸ್ತಕವದು. ಸುಮಾರು ಎರಡು ವರ್ಷಗಳ ಕಾಲ ಊರೂರು ಅಲೆದು ಅವ್ವನವರ ಕೀರ್ತನೆಗಳ ಹಸ್ತಪ್ರತಿಗಾಗಿ ಹುಡುಕಾಡಿದೆ. ಬಲ್ಲವರೊಡನೆ ಅವರ ಜೀವನ–ಕೃತಿಗಳನ್ನು ಕುರಿತು ಚರ್ಚೆ ಮಾಡಿ ಸಾಕಷ್ಟು ವಿಷಯ ಸಂಗ್ರಹಿಸಿದೆ. ಕೆಲವರಲ್ಲಿ ಅಲ್ಪಸ್ವಲ್ಪ ಮಾಹಿತಿ ಇದ್ದರೂ ಅವರು ಕೊಡಲು ಒಪ್ಪಲಿಲ್ಲ. ಅಂತಹ ಕೆಲವರ ಮನಸ್ಸು ಒಲಿಸಿ ಅವರನ್ನು

ಕಾಡಿಸಿ, ಪೀಡಿಸಿ ಅಲ್ಪಸ್ವಲ್ಪ ಸಂಗ್ರಹಿಸಲು ಸಾಧ್ಯವಾಯಿತು. ಆ ಪೈಕಿ ಗಲಗಲಿಯ ಕು.ಸೌ.ಶೀಲಾಬಾಯಿಗುಡಿ ಅವರಲ್ಲಿ ಹೆಚ್ಚಿನ ಹಾಡುಗಳು ದೊರೆತವು ಬೇರೆ ಬೇರೆ ಸ್ಥಳಗಳಲ್ಲಿ ಹೆಚ್ಚಿನ ಪ್ರತಿಗಳು ದೊರೆತರೂ ಅವೆಲ್ಲ ತದ್ರೂಪಿ ಪ್ರತಿಗಳೇ ಆಗಿದ್ದುವು. ಹೀಗೆ ಒಟ್ಟಾರೆ ದೊರೆತ ಹತ್ತು ಹಸ್ತಪ್ರತಿಗಳಲ್ಲಿ ಕು.ಸೌ.ಶೀಲಾಬಾಯಿಗುಡಿ ಮತ್ತು ಕು.ಸೌ.ಶಾಲಿನಿಯದುನಂದನ ಗಲಗಲಿ ಇವರಲ್ಲಿದ್ದ ಹಸ್ತ ಪ್ರತಿಗಳ ಸಹಾಯದಿಂದ ಪ್ರಸ್ತುತ ಸಂಪುಟವನ್ನು ಸಂಪಾದಿಸಲಾಗಿದೆ. ಹಸ್ತಪ್ರತಿಗಳಲ್ಲಿ ಸ್ಖಾಲಿತ್ಯಗಳು ಸಾಕಷ್ಟು ಸಂಖ್ಯೆಯಲ್ಲಿವೆ. ಗದ್ಯವನ್ನು ಬರೆಯುವ ಹಾಗೆ ಸಾಲುಗಳನ್ನು ಉದ್ದಕ್ಕೆ ಬರೆಯಲಾಗಿದೆ. ಕೇವಲ ಹಾಡುಗರ ಯಾ ಓದುಗರ ಶ್ರದ್ಧೆಯನ್ನು ಮಾತ್ರ ಆ ಕೀರ್ತನೆಗಳ ಬರವಣಿಗೆಯಲ್ಲಿ ಕಾಣುತ್ತೇವೆ. ಅಕ್ಷರಗಳೂ ಅಷ್ಟು ಸ್ಫುಟವಾಗಿಲ್ಲ. ಹಾಗಾಗಿ ಅನೇಕಬಾರಿ ಓದಿ, ತಿದ್ದಿಬರೆದು ಪ್ರಾಸಕ್ಕನುಗುಣವಾಗಿ ಸಾಲುಗಳನ್ನು ವಿಂಗಡಿಸುವುದು ಸಾಕಷ್ಟು ಶ್ರಮಸಾಧ್ಯವಾದ ಕೆಲಸವಾಯಿತು.

ಪ್ರಸ್ತುತ ಸಂಪುಟದ ಸಂಪಾದನೆಯ ಕೆಲಸವನ್ನು ಇದೀಗ ಮುಗಿಸಿ ನಿಮ್ಮ ಮುಂದಿಡುತ್ತಿದ್ದೇನೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಮಗ್ರದಾಸವಾಙ್ಮಯ ಪ್ರಕಟಣಾ ಯೋಜನೆಯನ್ನು ಹಮ್ಮಿಕೊಂಡಿರುವುದು. ಸ್ತುತ್ಯಾರ್ಹ. ಆ ಯೋಜನೆಯಡಿ 'ಗಲಗಲಿ ಅವ್ವನವರ ಕೀರ್ತನೆಗಳು' ಸಂಪುಟವನ್ನು ಸಿದ್ಧಪಡಿಸಲಾಗಿದೆ. ಈ ಸಂಪುಟದ ಕೆಲಸವನ್ನು ನನಗೆ ವಹಿಸಿಕೊಟ್ಟ ಇಲಾಖೆಯ ನಿರ್ದೇಶಕ ಶ್ರೀ ವೈ.ಕೆ.ಮುದ್ದುಕೃಷ್ಣ, ಹೆಜ್ಜೆ ಹೆಜ್ಜೆಗೂ ಸೂಕ್ತ ಸಲಹೆ ಸಹಕಾರಗಳನ್ನಿತ್ತು ಸಹಕರಿಸಿದ ಯೋಜನೆಯ ನಿರ್ವಾಹಕ ಸಂಪಾದಕರಲ್ಲೊಬ್ಬರಾದ ಡಾ.ಟಿ.ಎನ್.ನಾಗರತ್ನ ಅವರಿಗೂ, ಪ್ರೇರಣೆ ಪ್ರೋತ್ಸಾಹಗಳನ್ನಿತ್ತ ಮತ್ತೊಬ್ಬ ಸಂಪಾದಕ ಡಾ.ಶ್ರೀನಿವಾಸ ಹಾವನೂರರಿಗೂ ನನ್ನ ಕೃತಜ್ಞತಾಪೂರ್ವಕ ನಮಸ್ಕಾರಗಳು ಸಲ್ಲುತ್ತವೆ. ಓದುಗರ ಕ್ರಿಯಾತ್ಮಕ ಸಲಹೆ ಸೂಚನೆಗಳಿಗೆ ಸದಾ ಸ್ವಾಗತ.

ಹಣಮಂತ ತಾಸಗಾಂವಕರ

# ಕೀರ್ತನೆಗಳ ಕ್ರಮಸೂಚಿ

## ಅಪ್ಪನವರವೆಂದು ಪ್ರಚಲಿತವಿರುವ ಕೀರ್ತನೆಗಳು
## (ಅನುಬಂಧ ೩ರಲ್ಲಿದೆ)

೧

ಕೋಲೆನ್ನಿ ಕೋಮಲೆಯರು ಅಮ್ಮಯ್ಯ
ಮುಯ್ಯಿ ಮೇಲೆನ್ನಿ ಮೇಲೆನ್ನಿರಿ ಅಕ್ಕಯ್ಯ ಪ.

ಇಂದು ಗುರುಗಳಂಘ್ರಿಗೆರಗಿ ಅಮ್ಮಯ್ಯ
ಸುಭದ್ರೆ ತಂದ ಮುಯ್ಯಿ ರಚಿಪೆನಕ್ಕಯ್ಯ ೧

ನಿಷ್ಠಿಲೆ ಗುರುಗಳಿಗೆ ನಮಿಸಿ ಅಮ್ಮಯ್ಯ
ದ್ರೌಪದಿ ಕೊಟ್ಟ ಮುಯ್ಯುವ ರಚಿಪೆ ಅಕ್ಕಯ್ಯ ೨

ಅರ್ಚಿಸಿ ಗುರುಗಳ ಪಾದ ಅಮ್ಮಯ್ಯ
ಭಾವೆ ಚರ್ಚಾ ಮಾತುಗಳನ್ನೆ ರಚಿಸೆ ನಕ್ಕಯ್ಯ ೩

ಮುಖ್ಯ ಗುರುಗಳಂಘ್ರಿಗೆರಗಿ ಅಮ್ಮಯ್ಯ
ರುಕ್ಮಿಣಿ ನಕ್ಕುನುಡಿದ ನುಡಿಯ ರಚಿಪೆನಕ್ಕಯ್ಯ ೪

ನಮ್ಮ ಗುರುಗಳಂಘ್ರಿಗೆರಗಿ ಅಮ್ಮಯ್ಯ
ಪಾರ್ಥ ರಮಿಯರಸನ ಮಹಿಮೆ ರಚಿಪೆನಕ್ಕಯ್ಯ ೫

## ೨

ಮಂದಹಾಸನ ಮುಖವ ಸಖಿಯೆ ಎಂದು ಕಾಂಬೆನೆ
ಒಂದೊಂದು ನಿಮಿಷ ಯುಗವಾಗಿ
ರಂಗಯ್ಯ ಬಾರೊ ತಂಗಿ ನಾ ಹ್ಯಾಂಗಿರಬೇಕ ಪ.

ಒಂದಿನ ಸುಭದ್ರ ಮಂದಿರದೊಳು ಕುಳಿತು
ತಂದೆಯ ಭಾಗ್ಯ ಸ್ಮರಿಸುತ ಹಿಗ್ಗುತ
ತಂದೆ ಭಾಗ್ಯ ಸ್ಮರಿಸುತ ಹಿಗ್ಗುತ
ಇಂದಿರಾಪತಿ ನೆನೆದಾಳ ೧

ಹೆಣ್ಣು ಸುಭದ್ರ ತಮ್ಮ ಅಣ್ಣನ ಭಾಗ್ಯವ
ಬಣ್ಣ ಬಣ್ಣದಲೆ ಸ್ಮರಿಸುತ
ಬಣ್ಣ ಬಣ್ಣದಲೆ ಸ್ಮರಿಸುತ ಹಿಗ್ಗುತ ಕಣ್ಣು
ಮುಚ್ಚುತಲೆ ತೆರೆಯುತಲೆ ೨

ತಿಂಗಳಿಗೆ ಸುಭದ್ರಾ ಬಂದೆನ ನಿನ್ನ ನೋಡಲು
ಒಂದೇ ಮನದಿಂದ ಇರುಯೆಂದ
ಒಂದೆ ಮನದಿಂದ ಇರುಯೆಂದ ಕಳುಹಿದ
ಇಂದೆನ್ನ ಮನಸ್ಸು ಕಲಕಿತ ೩

ಕೈವಲ್ಯಪತಿಯ ದಯದಿಂದ ಸಲುಹಿದ
ವೈಭವದೊಳಗೆ ಮರೆತಾನ
ವೈಭವದೊಳಗೆ ಮರೆತಾನ ಮುಯ್ಯವ ಒಯ್ದರೆ
ನೋಡಿ ಬರಬೇಕ ೪

ಕೃಷ್ಣರಾಯರ ಮನೆಯ ಅಷ್ಟೈಶ್ವರ್ಯವ
ಎಷ್ಟು ವರ್ಣಿಸಲ್ವಶವಲ್ಲ
ಎಷ್ಟು ವರ್ಣಿಸಲ್ವಶವಲ್ಲ ಮುಯ್ಯವ
ಒಯ್ದರ ನೋಡಿ ಬರಬೇಕ ೫

ಗೊಲ್ಲಾಧೀಶನ ಭಾಗ್ಯ ಚಲುವಿ ಸುಭದ್ರ
ಸೊಲ್ಲುಸೊಲ್ಲಿಗೆ ನುತಿಸುತ ಹಿಗ್ಗುತ
ಸೊಲ್ಲುಸೊಲ್ಲಿಗೆ ನುತಿಸುತ ಹಿಗ್ಗುತ
ಎಲ್ಲರ ಮನಸ್ಸು ಎರಗೀತ ೬

ಗೋಕುಲೇಶ ರಾಮೇಶ ಯಾಕೆ ಮಥುರೆ ಬಿಟ್ಟ
ವಾಕ್ಕುಪೇಳೆಂದು ವನಿತೆಯರು
ವಾಕ್ಕುಪೇಳೆಂದು ವನಿತೆಯರು ನುಡಿಯಲು
ಸಾಕಲ್ಯದಿಂದ ತಿಳಿಸಿದಳು ೭

## ೩

ಜಾಣಿ ರಂಗಯ್ಯನ ಕಾಣದೆ ನಿಲ್ಲದು ಮನ
ವಾಣಿ ರಮಣನ ಪಿತನ
ವೇಣದಿ ಕರೆತಾರಮ್ಮ ಪ.

ಜರಿಯ ಸುತನು ತಾನು
ಜಗಳಕೆ ಬಾಹೋನೆಂದು
ಕರೆಸಿದ ವಿಶ್ವಕರ್ಮನ
ಕರೆಸಿದ ವಿಶ್ವಕರ್ಮನ ದ್ವಾರಕಾಪುರ
ನಿರ್ಮಿಸೆಂದ ಕ್ಷಣದಾಗೆ ಜಲದೊಳು ೧

ದ್ವಾರದ್ವಾರಂಗಳಿಗೆ ತಳಿರು ತೋರಣ
ನಿವಹ ಮೇರುವಿಗೆ ಪೊನ್ನ ಕಳಸ
ಮೇರುವಿಗೆ ಪೊನ್ನ ಕಳಸ ಕನ್ನಡಿ
ಮನೋಹರವಾಗಿದ್ದು ಸಟಿಯಿಲ್ಲ ೨

ದ್ವಾರಕಾಪುರದ ಶೃಂಗಾರ ವರ್ಣಿಸಲು
ಮೂರು ಕಣ್ಣವಗೆ ವಶವಲ್ಲ

ಮೂರು ಕಣ್ಣವಗೆ ವಶವಲ್ಲ ನಾಲ್ಕು
ಮುಖದವಗೆ ಬಲುಮಿಗಿಲು ೩

ಹದಿನಾರು ಸಾವಿರ ಚದುರೆಯರ ಮಂದಿರ
ಮದನನಯ್ಯನ ಮನೆಮಧ್ಯ
ಮದನನಯ್ಯನ ಮನೆಮಧ್ಯ ದ್ವಾರಕೆ
ಅದ್ಭುತವಾಗಿ ಬೆಳಗಿದೆ ೪

ಶಿಶುಪಾಲ ದಂತವಕ್ತ್ರ ಮೊದಲಾದ ಮಹಾ
ಅಸುರರನ್ನೆಲ್ಲ ಅಳುಹಿದ
ಅಸುರರನ್ನೆಲ್ಲ ಅಳಿದು ದ್ವಾರಕೆಯಲ್ಲಿ
ನಸು ನಗುತಿದ್ದ ನರಹರಿ ೫

ಸತ್ಯದಿ ರುಕ್ಮಿಣಿ ಸತ್ಯಭಾಮಾದೇವಿ
ವಾರಿಜ ಮುಖಿ ಷಣ್ಮಹಿಷೇರಸಹಿತಾಗಿ
ಷಣ್ಮಹಿಷೇರ ಸಹಿತಾಗಿ
ಕಾರುಣ್ಯಸಿಂಧು ರಾಮೇಶ ಕುಳಿತಿದ್ದ ೬

ಶ್ರೀ ರಮಾರಮಣನಾದ ಶ್ರೀ ಕೃಷ್ಣನ ಅರಮನೆಗೆ
ಸುಭಧ್ರೆ ಮುಯ್ಯ ತರುತಾಳೆ
ಸುಭಧ್ರೆ ಮುಯ್ಯ ತರುತಾಳೆ
ಹಸ್ತಿನಾವತಿಯ ಭೂಸುರರೆಲ್ಲ ಬರತಾರೆ ೭

## ೪

ಮುಯ್ಯ ಒಯ್ಯೋಣು ಬಾರೆ ಮಾನಿನಿಯರೆಲ್ಲರು ನೀರೆ
ಮೈ ಮರೆದೇನೆ ನಾರಿ ಮಾರನಯ್ಯನ ತೋರೆ ಪ.

ಹರದಿ ಸುಭದ್ರಾ ತಮ್ಮ ದೊರೆಗಳಿಗೆ ಅರುಹಲು
ಪರಮ ಹರುಷರಾಗಿ ಐವರು ಚಪಲಾಕ್ಷಿ

ಪರಮ ಹರುಷರಾಗಿ ಐವರು ಮುಯ್ಯಕ್ಕ
ದುರದಿಂದ ಭೇರಿ ಹೊಯ್ಸಿದರ ಚಪಲಾಕ್ಷಿ ೧

ಹಸ್ತಿನಾಪುರದರಸು ಮತ್ತೆ ಜೋಯಿಸರ ಕರೆಸಿ
ಮುತ್ತು ತುಂಬಿಡಿಸಿ ಮರದಾಗ ಚಪಲಾಕ್ಷಿ
ಮುತ್ತು ತುಂಬಿಡಿಸಿ ಮರದಾಗ ಮುಯ್ಯಕ್ಕ
ಉತ್ತಮ ತಿಥಿಯು ಬರಬೇಕು ಚಪಲಾಕ್ಷಿ ೨

ಧರ್ಮನ ಪ್ರಶ್ನೆಯ ಪ್ರೇಮದಿಂದಲೆ ಕೇಳಿ ಅಮ್ಮಯ್ಯ
ಶ್ರೀ ರಮಣನ ನೆನೆಯುತ ಚಪಾಲಾಕ್ಷಿ
ಶ್ರೀ ರಮಣನ ನೆನೆಯುತ ಬೃಹಸ್ಪತಿ
ಜಮ್ಮನೆ ತೆಗೆದಾ ಶುಭತಿಥಿಚಪಲಾಕ್ಷಿ ೩

ಈಗಿನ ವ್ಯಾಳ್ಯಕ್ಕ ಜಾಗು ಮಾಡದೆ ಕೃಷ್ಣಿ
ಹೋಗ ನೀಗೆದ್ದು ಬರತೀಯೆ ಚಪಲಾಕ್ಷಿ
ಹೋಗ ನೀಗೆದ್ದು ಬರತೀಯೆ ಎನುತಲೆ ಆಗ
ಬೃಹಸ್ಪತಿಯು ನುಡಿದಾನೆ ಚಪಲಾಕ್ಷಿ ೪

ಇಂದಿನ ದಿವಸಕ್ಕ ಸಂದೇಹ ಬ್ಯಾಡವ್ವಾ ತಂದೆ
ರಾಮೇಶನ ಮಡದೇರ ಚಪಲಾಕ್ಷಿ
ತಂದೆ ರಾಮೇಶನ ಮಡದೇರ ನಾಚಿಸಿ ಬಂದಿಯೆ
ಕೃಷ್ಣಿ ನಗುತಲೆ ಚಪಲಾಕ್ಷಿ ೫

## ೫

ಕೋಲೆಂದು ಪಾಡಿರೆ ಕೋಮಲೆಯರೆಲ್ಲಾ ಅಮ್ಮಯ್ಯ
ಗೋಪಾಲ ಕೃಷ್ಣಯ್ಯಗ ಶರಣೆಂದು ಕೋಲ ಪ.

ಮುದ್ದು ಸುಭದ್ರ ನೀನು ಗೆದ್ದುಬರುತಿಯೆಂದು
ಎದ್ದ ಬೃಹಸ್ಪತಿಯು ತವಕದಿ ಕೋಲ

ಎದ್ದ ಬೃಹಸ್ಪತಿಯು ತವಕದಿ ಅರ್ಜುನ
ಸಿದ್ಧ ಮಾಡೆಂದ ರಥಗಳ ಕೋಲ ೧

ಕೇಳಿರಿ ನಿಮಗೆಲ್ಲ ಭಾಳ ಬಲವದೆ
ಕಾಳಿ ಮೊದಲಾದ ಕೆಲದೆಯರು
ಕಾಳಿ ಮೊದಲಾದ ಕೆಲದೆಯರು ಹರುಷದಿ ಹೇಳಿ
ಬೃಹಸ್ಪತಿಯು ನುಡಿದಾನು ಕೋಲ ೨

ಪಾಂಡವರೆಲ್ಲರು ಉಂಡು ವೀಳ್ಯವನ್ಹಾಕಿ
ಪುಂಡರಿಕಾಕ್ಷನ ಅರಮನೆಗೆ ಕೋಲ
ಪುಂಡರಿಕಾಕ್ಷನ ಅರಮನೆಗೆ ಐವರು
ತಂಡ ತಂಡದಲೆ ನಡೆದಾರು ಕೋಲ ೩

ದ್ರೌಪದಿ ಸುಭದ್ರಾ ಇಬ್ಬರು ಒಂದಾಗಿ
ಅಗಣಿತ ಒನಿತೆಯರು ಕೋಲ
ಅಗಣಿತ ಒನಿತೆಯರು ಕೂಡಿಕೊಂಡು ತಾವು
ಪ್ರೇಮದಿಂದಲಿ ಬರುತಾರೆ ಕೋಲ ೪

ಅರಿಷಿಣ ಕುಂಕುಮ ಗಂಧಬೆರೆಸಿ ಪರಿಮಳದಿಂದ
ಸರಸಾದ ಸುರಭಿ ಕುಸುಮವ ಕೋಲ
ಸರಸಾದ ಸುರಭಿ ಕುಸುಮರಾಮೇಶನ
ಅರಸಿಯರಿಗೆ ಒಯ್ದೋ ಉಪಚಾರ ಕೋಲ ೫

## ೬

ಹಸ್ತಿನಾಪುರದಾಗ ಹಸ್ತಿ ಮಾದಲಾದ
ಉತ್ತಮ ರಥವು ಸಂದಣಿಸಿತು ಕೋಲ ಪ.

ಇಂದ್ರನು ತಾನೊಂದು ಗಜೇಂದ್ರನೇರಿಕೊಂಡು
ಮಂದಗಮನೆಯರ ಶಚಿ ಸಹಿತ ಕೋಲ

ಮಂದಗಮನೆಯರ ಶಚಿ ಸಹಿತ ವಜ್ರಾಯುಧ
ಉಪೇಂದ್ರನ ಮನೆಗೆ ಬರುತಾನೆ ಕೋಲ ೧

ಹುತಭುಕ್ತನು ತಾನುಸತಿ ಸ್ವಾಹಾದೇವಿಯ ಕೂಡಿ
ಅತಿಶಯವಾದ ಮೇಷವೇರಿ
ಅತಿಶಯವಾದ ಮೇಷವೇರಿ ಶಕ್ತಿಯ ಧರಿಸಿ
ಕ್ರತುಪತಿ ಮನೆಗೆ ಬರುತಾನೆ ಕೋಲ ೨

ಜಾಣ ಯಮನು ತಾನು ಕೋಣ ವೇರಿಕೊಂಡು
ರಾಣಿ ಶಾಮಲೆಯ ಸಹಿತಾಗಿ ಕೋಲ
ರಾಣಿ ಶಾಮಲೆಯ ಸಹಿತಾಗಿ ದಂಡವ ಧರಿಸಿ
ಪ್ರಾಣೇಶನ ಮನೆಗೆ ಬರುತಾನೆ ಕೋಲ ೩

ನಿರುತಿ ತಾನೊಂದು ನರನ ಪೆಗಲನೇರಿ
ತರುಣಿಯ ಸಹಿತ ಆಯುಧ ಧರಿಸಿ ಕೋಲ
ತರುಣಿಯ ಸಹಿತ ಆಯುಧ ಧರಿಸಿ
ನರಹರಿ ಮನೆಗೆ ಬರುತಾನೆ ಕೋಲ ೪

ವರುಣನು ತಾನೊಂದು ಮಕರ ಮೇಲೇರಿ
ಶ್ರೀ ಭಾಗೀರಥಿಯ ಒಡಗೂಡಿ ಕೋಲ
ಶ್ರೀ ಭಾಗೀರಥಿಯ ಒಡಗೂಡಿ ಪಾಶವ ಧರಿಸಿ
ದರಾಧರನ ಮನೆಗೆ ಬರುತಾನ ಕೋಲ ೫

ಮರುತನು ತಾನೊಂದು ಎರಳಿ ಮೇಲೇರಿ
ತರುಣಿ ಪ್ರವಹಿ ಒಡಗೂಡಿ ಕೋಲ
ತರುಣಿ ಪ್ರವಹಿ ಒಡಗೂಡಿ ಗದೆಯ ಧರಿಸಿ
ಮುರಹರನ ಮನೆಗೆ ಬರುತಾನ ಕೋಲ ೬

ವಿತ್ತಪನು ತಾನೊಂದು ಉತ್ತಮ ಹಯವೇರಿ
ಚಿತ್ತದೊಲ್ಲಭೆಯ ಒಡಗೊಡಿ ಕೋಲ

ಚಿತ್ತದೊಲ್ಲಭೆಯ ಒಡಗೊಡಿ ಖಡ್ಗವ ಧರಿಸಿ
ಪೃಥ್ವೀಶನ ಮನೆಗೆ ಬರುತಾನೆ ಕೋಲ ೭

ಈಶನು ತಾನೊಂದು ವೃಷಭನ ಮೇಲೇರಿ
ಶ್ರೀ ಸತಿದೇವಿ ಒಡಗೂಡಿಕೋಲ
ಶ್ರೀ ಸತಿದೇವಿ ಒಡಗೂಡಿ ತ್ರಿಶೂಲವ ಧರಿಸಿ
ನರಸಿಂಹನ ಮನೆಗೆ ಬರುತಾನೆ ಕೋಲ ೮

ಧರ್ಮ ಭೀಮಾರ್ಜುನ ನಕುಲ ಸಹದೇವರು
ಪ್ರೇಮದಿಂದಲೆ ಪೊರ ಹೊರಟು ಕೋಲ
ಪ್ರೇಮದಿಂದಲೆ ಪೊರ ಹೊರಟು ಬರುತಾರೆ
ರಮಿಯರಸನ ಅರಮನೆಗೆ ಕೋಲ ೯

## ೭

ಕೋಲನಾಡುತ ಬಂದ ಬಾಲೆಯರು ಕೈಮುಗಿದು
ನಿಂದು ಮೇಲುಗಿರಿ ವಾಸ ಗೆಲಿಸೆಂದು ಕೋಲ ಪ.

ಖಳರ ಬೆನ್ನಿನ ಚರ್ಮ ಸುಲಿದು ಭೇರಿಗೆ ಹಾಕಿ
ಅಲವ ಬೋಧರೆ ಜಗದ್ಗುರು ಕೋಲ
ಅಲವ ಬೋಧರೆ ಜಗದ್ಗುರು ವೆನುತಲೆ
ಛಲದಿಂದ ಭೇರಿ ಹೊಯ್ಸಿ ದರ ಕೋಲ ೧

ಹರಿಯೆ ಸರ್ವೋತ್ತಮ ಹರಿಯೆ ಪರದೈವ
ಹರಿದಾಸರೆಂಬೊ ಬಿರುದಿನ ಕೋಲ
ಹರಿದಾಸರೆಂಬೊ ಬಿರುದಿನ ಹೆಗ್ಗಾಳೆ
ಹೆಬ್ಬಾಗಿಲಲ್ಲೆ ಹೊಯಿಸುತ ಕೋಲ ೨

ವಿಷ್ಣು ಸರ್ವೋತ್ತಮ ವಿಷ್ಣುಪರದೈವ
ವಿಷ್ಣು ದಾಸರೆಂಬೊ ಬಿರುದಿನ ಕೋಲ

ವಿಷ್ಣು ದಾಸರೆಂಬೊ ಬಿರುದಿನ ಢಕ್ಕಿಯ
ಘಟ್ಯಾಗಿ ತಾವು ಹೊಯಿಸುತ ಕೋಲ ೩

ಒಬ್ಬನೆ ವಿಷ್ಣು ಇನ್ನೊಬ್ಬನಿಲ್ಲವೆಂದು ಅಬ್ಬರದಿಂದ
ನಾಗಸ್ವರ ಹೆಗ್ಗಾಳೆ ಕೋಲ
ಅಬ್ಬರದಿಂದ ನಾಗಸ್ವರ ಹೆಗ್ಗಾಳೆ
ಹೆಬ್ಬಾಗಿಲಲ್ಲೆ ಹೊಯಿಸುತ ಕೋಲ ೪

ಮತದೊಳು ಮಧ್ವಮತ ವ್ರತದೊಳು ಹರಿದಿನ
ಕಥೆಯೊಳು ಭಾಗವತ ವೆನ್ನಿಕೋಲ
ಕಥೆಯೊಳು ಭಾಗವತ ವೆನ್ನಿ ರಾಮೇಶನ
ಅತಿಭಕ್ತರ ನಡುವೆ ಪಥವೆನ್ನಿ ಕೋಲ ೫

## ೮

ಶ್ರೀ ಗಣರಾಯ ಶ್ರೀ ಗಣರಾಯ ಶ್ರೀ ಗಣರಾಯ
ವಂದಿಸುವೆನೀಗ ಶ್ರೀ ಗಣರಾಯ ಪ.

ಆಕಾಶಕಭಿಮಾನಿ ಶ್ರೀಕಂಠನ ವರಪುತ್ರ
ಏಕದಂತನೆ ವಿಘ್ನೇಶ
ಏಕದಂತನೆ ವಿಘ್ನೇಶ ನಿನ್ನ ಪಾದ ಏಕಚಿತ್ತದಲೆ
ಬಲಗೊಂಬೆ ವಂದಿಸುವೆ ಶ್ರೀ ಗಣರಾಯ ೧

ನೆನೆಯಕ್ಕಿ ನೆನಗಡಲೆ ಗೊನೆ ಬಾಳೆಹಣ್ಣು
ಘನವಾದ ಚಿಗಳಿ ತಂಬಿಟ್ಟು
ಘನವಾದ ಚಿಗಳಿ ತಂಬಿಟ್ಟು ತಂದಿಹೆ ಗಣಪತಿ
ಮತಿಯ ಕರುಣಿಸು ವಂದಿಸುವೆ ೨

ನಿತ್ಯ ಬ್ರಹ್ಮಚರ್ಯ ಉತ್ತಮ ವ್ರತವುಳ್ಳ
ಮತ್ತು ಪಾರ್ವತಿಯ ತನಯನೆ

ಮತ್ತು ಪಾರ್ವತಿಯ ತನಯನೆ ವಿಘ್ನೇಶನೆ
ಭಕ್ತಿಯಿಂದ ಮೊದಲೆ ಬಲಗೊಂಬೆ ೩

ಸುಲಭದಿ ರುಕ್ಮಿಣಿಯ ಗೆಲಿಯಬೇಕೆನುತಲೆ
ಹಲಧರನ ತಂಗಿ ಸುಭದ್ರೆ
ಹಲಧರನ ತಂಗಿ ಸುಭದ್ರೆ ಮೊದಲಿಗೆ ಚಲುವ
ಗಣಪತಿಯ ನೆನೆದಳು ೪

ಹಸ್ತಿಮೊಗದವನ ಮತ್ತಾರು ಪೂಜಿಸಿದರು
ಮತ್ತೆ ಪರೀಕ್ಷಿತ ಮೊದಲಾಗಿ
ಮತ್ತೆ ಪರೀಕ್ಷಿತ ಮೊದಲೆ ಪೂಜೆಯ ಮಾಡಿ
ಪ್ರತ್ಯಕ್ಷ ರಾಜ್ಯ ಪಡೆದನು ೫

ಆನೆಯ ಮುಖದವನ ಮತ್ತಾರು ಪೂಜಿಸಿದರು
ತಾನು ಮಾಂಧಾತರಾಯ ಮೊದಲಾಗಿ
ತಾನು ಮಾಂಧಾತರಾಯ ಮೊದಲು ಪೂಜೆಯ ಮಾಡಿ
ನಾನಾ ಸೌಭಾಗ್ಯ ಪಡೆದನು ೬

ಮುದ್ದು ರಾಮೇಶನ ಪೂಜಿಸಿ ರಾವಣನ ಗೆಲಿದನು
ಮ್ಯಾಲೆ ಪಾಂಡವರು ಮೊದಲಾಗಿ
ಮ್ಯಾಲೆ ಪಾಂಡವರು ಮೊದಲ ಪೂಜೆಯ ಮಾಡಿ
ಹೀನ ಕೌರವರ ಗೆಲಿದರು ೭

## ೬

ಪಾಲಿಸೆ ಸರಸ್ವತಿ ಪಾಲಿಸೆ
ಪಾಲಿಸೆ ನಿನ್ನಯ ಪಾರಿಗೆ ಬಂದೆನು
ಕಾಲಕಾಲಕೆ ನಿನ್ನಯ ಕಾಲಿಗೆರಗುವೆ ಪಾಲಿಸೆ ಪ.

ಆದಿ ಬ್ರಹ್ಮನರಾಣಿಯೆ ವೇದಕ್ಕ ಭಿಮಾನಿಯೆ
ಮೋದ ಗಾಯನ ಕುಶಲಳೆ
ಮೋದ ಗಾಯನ ಕುಶಲಳೆ ಸರಸ್ವತಿ
ನೀ ದಯಮಾಡಿ ಮತಿಯ ಕೊಡು ೧

ಹೊನ್ನವರೆ ಹೊಸ ಕಪ್ಪು ಬೆನ್ನಿನ ಮ್ಯಾಲಿನ ಹೆರಳು
ಕಿನ್ನರಿ ನಿನ್ನ ಬಲಗೈಯ
ಕಿನ್ನರಿ ನಿನ್ನ ಬಲಗೈಯ್ಯಲಿ ಹಿಡಕೊಂಡು
ಖನಿ ಬಾ ನಮ್ಮ ವಚನಕ್ಕೆ ೨

ಮಿತ್ರಿ ಸರಸ್ವತಿಗೆ ಮುತ್ತಿನ ಉಡಿಯಕ್ಕಿ
ಮತ್ತೆ ಮಲ್ಲಿಗೆಯ ನೆನೆದಂಡೆ
ಮತ್ತೆ ಮಲ್ಲಿಗೆಯ ನೆನೆದಂಡೆ ತಂದಿದ್ದೆ
ಪ್ರತ್ಯಕ್ಷವಾಗ ಸಭೆಯೊಳು ೩

ಹರದಿ ಸರಸ್ವತಿಗೆ ಮುತ್ತಿನ ಉಡಿಯಕ್ಕಿ
ಅರಳು ಮಲ್ಲಿಗೆ ನೆನೆದಂಡೆ
ಅರಳು ಮಲ್ಲಿಗೆ ನೆನೆದಂಡೆ ತಂದಿಹೆ
ತಡೆಯದೆ ನಮಗೆ ವರವ ಕೊಡು ೪

ಗುಜ್ಜಿ ಸರಸ್ವತಿಗೆ ಗೆಜ್ಜೆ ಸರಪಳಿಯಿಟ್ಟು
ವಜ್ರಮಾಣಿಕ್ಯ ದಾಭರಣ
ವಜ್ರಮಾಣಿಕ್ಯ ದಾಭರಣ ಭೂಷಿತಳಾಗಿ
ನಿರ್ಜರೊಳುತ್ತಮಳೆ ನಡೆ ಮುಂದೆ ೫

ಹರದಿ ಸರಸ್ವತಿ ಸರಿಗೆಸರಪಳಿಯಿಟ್ಟು
ಜರದ ಸೀರೆಯನೆ ನಿರಿದುಟ್ಟು
ಜರದ ಸೀರೆಯನೆ ನಿರಿದುಟ್ಟು ಬಾರಮ್ಮ
ದೊರೆ ರಾಮೇಶನ ಅರಮನೆಗೆ ೬

## ೧೦

ಎಲ್ಲರಿಗೊಂದಿಸಿ ಕರವ ಜೋಡಿಸಿ ಎಲ್ಲರಿಗೊಂದಿಸಿ ಪ.

ಎಲ್ಲರಿಗೊಂದಿಸಿ ಫುಲ್ಲನಾಭನ ಮುಖ್ಯವಲ್ಲಭೆಯರು
ನಾವು ಗೆಲ್ಲಬೇಕೆಂದು ಅ.ಪ.

ಮಡದಿ ಇಂದಿರಾದೇವಿ ಕಡೆಗಣ್ಣನೋಟದಿ ಪಡೆದಾಳು ಲೋಕ
ಬ್ರಹ್ಮರುದ್ರಾದಿ ಪಾದಂಗಳಿಗೆ ನೀವೆ ಮಹಾಲಕ್ಷ್ಮಿ
ಪಾದಂಗಳೆಗೆ ನೀವೆ ಮಹಾಲಕ್ಷ್ಮಿ ದೇವಿಯ
ಶುಭಾಂಗಿಯ ಮೊದಲೆ ಬಲಗೊಂಬೆ ೧

ಹದಿನಾಲ್ಕು ಲೋಕವ ಮುದದಿಂದ ಸೃಜಿಸಿದ
ಪದ್ಮ ಸಂಭವನೆ ಪರಮೇಷ್ಠಿ
ಪದ್ಮ ಸಂಭವನೆ ಪರಮೇಷ್ಠಿ ನಿನ್ನ ಪಾದ
ಪದ್ಮವನೆ ಮೊದಲೆ ಬಲಗೊಂಬೆ ೨

ವಾಣಿ ಅಜನ ಪಟ್ಟದರಾಣಿ ಪನ್ನಂಗ ವೇಣಿ
ಜಾಣಿ ಕೊಡು ಎಮಗೆ ಮತಿಗಳ
ಜಾಣಿ ಕೊಡು ಎಮಗೆ ಮತಿಗಳ ನಿನ್ನ
ಪಾದರೇಣುವ ಮೊದಲೆ ಬಲಗೊಂಬೆ ೩

ಹನುಮ ಭೀಮ ಮಧ್ವಮುನಿರಾಯ
ಮಾರುತ ಘನಮಹಿಮ
ಮಾರುತ ಘನಮಹಿಮ ಭಕ್ತ ವಿರಕ್ತ
ನಿನ್ನ ಪಾದ ವನಜವ ಮೊದಲೆ ಬಲಗೊಂಬೆ ೪

ಭಾರತಿ ನಿನ್ನ ಪಾದವಾರಿಜ ಚರಣವ
ಬಾರಿ ಬಾರಿಗೆ ಸ್ಮರಿಸುವೆ

ಬಾರಿ ಬಾರಿಗೆ ಸ್ಮರಿಸುವೆ ನಮಗಿನ್ನು
ತೋರೆ ಬೇಗ ಮತಿಗಳು ೫

ಇಂದ್ರನ ಗೆದ್ದು ಸುಧೆಯ ತಂದ
ಮಾತೆಯ ಬಂಧನ ಕಡೆದ ಬಲು ಧೀರ
ಬಂಧನ ಕಡೆದ ಬಲುಧೀರನಾದ
ಖಗೇಂದ್ರನ ಮೊದಲೆ ಬಲಗೊಂಬೆ ೬

ಸಾಸಿರ ಮುಖದಿಂದ ಶ್ರೀಶನ ಸ್ತುತಿಸಿದ
ವಾಸುದೇವಗೆ ಹಾಸಿಗೆ
ವಾಸುದೇವಗೆ ಹಾಸಿಗೆ ಯಾದ
ಶೇಷಗೆ ಮೊದಲೆ ಬಲಗೊಂಬೆ ೭

ಅಪಾರ ಮಹಿಮನೆ ತ್ರಿಪುರಸಂಹಾರಕ
ಚಂದ್ರ ಶೇಖರನೆ ಸರ್ವೇಶ
ಚಂದ್ರ ಶೇಖರನೆ ಸರ್ವೇಶ ನಿನ್ನ
ಪಾದದ್ವಂದ್ವವ ಮೊದಲೆ ಬಲಗೊಂಬೆ ೮

ಸೌಪರಣಿ ವಾರುಣಿ ಅಪರ್ಣಾದೇವಿಯರು
ಕರುಣಿಸಿನಮಗೆ ಕಾಲಕಾಲ
ಕರುಣಿಸಿನಮಗೆ ಕಾಲಕಾಲಕೆ
ರಾಮೇಶನ ತರುಣಿಯರೆ ಗೆದ್ದು ಬರಬೇಕ ೯

## ೧೧

ಪಾರ್ಥನರಸಿಯರು ಪ್ರಾರ್ಥಿಸಿ ಕೈಮುಗಿಯೆ
ತೀರ್ಥಯಾತ್ರೆಗಳೆಲ್ಲಾ ಕ್ಷೇತ್ರ ಮೂರ್ತಿಗಳು ಗೆಲಿಸಲಿ ಪ.

ರಾಮೇಶ್ವರ ಕಂಚಿ ಪ್ರೇಮದಿ ಕುಂಭಕೋಣ
ಸ್ವಾಮಿ ಶ್ರೀ ರಂಗ ತೋತಾದ್ರಿ

ಸ್ವಾಮಿ ಶ್ರೀ ರಂಗ ತೋತಾದ್ರಿ
ಬೇಲೂರು ಚೆನ್ನನ ಮೊದಲೆ ಬಲಗೊಂಬೆ ೧

ಅಹೋಬಲ ಮೊದಲಾದ ಆ ವೆಂಕಟಾದ್ರಿ
ಅಲ್ಲಿರೊ ಅನಂತ ಅಳಗಿರಿ
ಅಲ್ಲಿರೊ ಅನಂತ ಅಳಗಿರಿ ದರ್ಭಶಯನ
ದೇವರ ಮೊದಲೆ ಬಲಗೊಂಬೆ ೨

ದೇವ ಜನಾರ್ಧನ ಕಾಯೊ ಸಾರಂಗಪಾಣಿ
ಭಾವ ಭಕ್ತಿಲೆ ನಮಿಸೇವ
ಭಾವ ಭಕ್ತಿಯಲೆ ನಮಿಸೇವ ಚಕ್ರಪಾಣಿ
ಬೇಗ ಗೆಲಿಸೆಂದು ೩

ಅಕ್ಕ ಶ್ರೀಮುಷ್ಣಿವಾಸ ಮುಖ್ಯಚಲುವರಾಯ
ದೇವಕ್ಕಳಿಗೆ ವರವ ಕೊಡುವ್ರೋಳು
ದೇವಕ್ಕಳಿಗೆ ವರವ ಕೊಡುವ್ರೋಳು ಕನ್ಯಾಕುಮಾರಿ
ಮುಖ್ಯಳ ಮೊದಲೆ ಬಲಗೊಂಬೆ ೪

ಛಾಯಾಭಗವತಿ ನಮ್ಮ ಕಾಯೆ ಕರುಣಾಂಬುಧೆ
ಸಹಾಯವಾಗಮ್ಮ ಕಾಲಕಾಲ
ಸಹಾಯವಾಗಮ್ಮ ಕಾಲಕಾಲಕೆ
ಬ್ರಮ್ಹನ ತಾಯ ಗೆದ್ದು ಬರಬೇಕು ೫

ಸುಬ್ರಹ್ಮಣ್ಯ ಸಾಸಿ ಒಬ್ಬ ಶ್ರೀ ಕೃಷ್ಣರಾಯ
ನಿರ್ಭಯದಿ ಸ್ವಾದಿ ನಿಲಯನೆ
ನಿರ್ಭಯದಿ ಸ್ವಾದಿ ನಿಲಯನೆ ತನುಮನ
ಉಬ್ಬಿ ವಂದಿಸುವೆ ಕರುಣಿಸು ೬

ಹಂಪಿವಿರೂಪಾಕ್ಷದಿ ನಿಂತು ಪೂಜೆಯಗೊಂಬ
ಯಂತ್ರೋದ್ಧಾರಕಗೆ ಒಲಿದವನೆ

ಯಂತ್ರೋದ್ಧಾರಕಗೆ ಒಲಿದ ರಾಮೇಶನ
ಕಾಂತೆಯರ ಗೆದ್ದು ಬರಬೇಕು ೭

## ೧೨

ಬಿನ್ನಹ ಮಾಡುವೆನು
ಅತ್ತಿಗೆಯರ ಚನ್ನಾಗಿ ಗೆಲಿಸೆಂದು
ಚದುರ ಮುದ್ಗಲವಾಸನೆದುರಿಗೆ
ಮಧುರ ವಾಕ್ಯಗಳ ನುಡಿಸೆಂದು ಪ.

ಗೋಕರ್ಣ ಹಿಮವಂತ ಕೇದಾರಿ ದೇಶ
ಗೋಕುಲ ವೃಂದಾವನ ಮಥುರೆಯ
ಗೋಕುಲ ವೃಂದಾವನ ಮಥುರೆಯ ಒಡೆಯನ
ಸಾಕಲ್ಯದಿಂದ ಬಲಗೊಂಬೆ ೧

ಕರವೀರ ಪುರವಾಸ ದೊರೆಯುಪಂಢರಿನಾಥ
ವರವಡ್ಡಿಒಡೆಯ ಬದರಿಯ
ವರವಡ್ಡಿಒಡೆಯ ಬದರಿ ನಾರಾಯಣಗೆ
ಕರವ ಜೋಡಿಸುವೆ ಕರುಣಿಸು ೨

ಅಯೋಧ್ಯ ಪುರವಾಸ ಗಯಾ ಗದಾಧರ
ಕೈವಲ್ಯ ನೀವ ಜಗದೊಡೆಯ
ಕೈವಲ್ಯ ನೀವ ಜಗದೊಡೆಯನ ಪಾದ
ಕೈಮುಗಿದು ಮೊದಲೆ ಬಲಗೊಂಬೆ ೩

ದೇಶ ದೇಶದ ಜನಕೆ ಲೇಸಾಗಿ ಸಲಹುವೆ
ಶ್ರೀ ಸತಿದೇವಿ ಅರಸನೆ
ಶ್ರೀ ಸತಿದೇವಿ ಅರಸನೆ ಕಾಶಿ
ವಿಶ್ವೇಶ್ವರನ ಮೊದಲೆ ಬಲಗೊಂಬೆ ೪

ಹರಿಹರವಾಸಗೆ ಕರಗಳ ಜೋಡಿಸಿ
ಸರ್ವರಿಗೆ ವರವ ಸುಲಭದಿ
ಸರ್ವರಿಗೆ ವರವ ಸುಲಭದಿ ಕೊಡುವ
ಹರದೆಯರ ಪಂಥವ ಗೆಲಿಸೆಂದು ೫

ಲಕ್ಷ್ಮಿರಮಣನೆ ಪಕ್ಷಿವಾಹನ ಸ್ವಾಮಿ
ಕುಕ್ಷಿಲೆ ಜಗವ ಸಲಹುವೆ
ಕುಕ್ಷಿಲೆ ಜಗವ ಸಲಹುವೆ ಶೂರ್ಪಾಲಿ
ವೃಕ್ಷರಾಜನ ಬಲಗೊಂಬೆ ೬

ಗಲಗಲಿ ನರಸಿಂಹ ಬಲು ದಯವಂತ
ಸುಲಭದಿ ವರವ ಕೊಡುವವನು
ಸುಲಭದಿ ವರವ ಕೊಡುವ ರಾಮೇಶನ
ಚಲ್ವ ಮೂರ್ತಿಯ ಬಲಗೊಂಬೆ ೭

## ೧೩

ಗಂಗೆ ನಿನಗೋಸ್ಕರ ನಾನು ನಮೋ ಎಂಬೆ
ತುಂಗೆ ಎನ್ನ ಪಂಥವ ಕೇಳಿ ಗೆಲಿಸೆಂಬೆ ಪ.

ಅಚ್ಯುತನ ನಖತಾಕಿ ಬಿಚ್ಚಿ ಬ್ರಹ್ಮಾಂಡವು
ಸ್ವಚ್ಛಜಲವಾಗಸುರಿದಾವು
ಸ್ವಚ್ಛ ಜಲವಾಗ ಸುರಿದಾವು
ಅಜನೋಡಿ ಉತ್ಸಾಹದಿ ನುತಿಸಿದ ೧

ತಂದೆಯ ನಖದಿಂದ ಬಂದ ಜಲ
ಕಂಡು ಮಂದಜಾಸನು ಸ್ತುತಿಸಿದ
ಮಂದಜಾಸನು ಸ್ತುತಿಸಿದ ಸರಸ್ವತಿ
ಬಂದು ಆರುತಿಯ ಬೆಳಗೋಳು ೨

ಕಂಡ ಜಲವ ಕಮಂಡಲದಿ ತುಂಬಿ
ಭೂಮಂಡಲ ಪತಿಯ ಚರಣವ
ಭೂಮಂಡಲ ಪತಿಯ ಚರಣವ ತೊಳೆಯಲು
ಕೊಂಡಾಡಿ ಹರನು ಧರಿಸಿದ ೩

ಸುರನಾರಿಯರೆಲ್ಲಾ ಪರಿಪರಿಸ್ತುತಿಸಲು
ಹರಿಪಾದದ ರೇಣು ಹರಿದಿಲ್ಲಿ
ಹರಿಪಾದದ ರೇಣು ಹರಿದಿಲ್ಲಿ ಬಂತೆಂದು
ಸುರರು ಸಂತೋಷಪಡುತಲಿ ೪

ವಿಷ್ಣುಪದಿಯೆಂದು ಇಟ್ಟರು ನಾಮವ
ಧಿಟ್ಟ ರಾಮೇಶನ ಮಗಳಿಗೆ
ಧಿಟ್ಟ ರಾಮೇಶನ ಮಗಳಿಗೆ ಧೃವರಾಯ
ಎಷ್ಟು ಭಕ್ತಿಂದ ಸ್ತುತಿಸಿದ ೫

## ೧೪

ಗಂಗೆ ಗೆಲಿಸಮ್ಮ ನಮ್ಮ ಪಂಥವ
ಶ್ರೀರಂಗನ ರಾಣಿಯರ ಸೋಲಿಸುವೆ ಪ.

ಇಂದ್ರಲೋಕಕೆ ಬರಲು ವಂದಿಸಿ ಸುರರೆಲ್ಲ
ಬಂದರು ಮೇರುಗಿರಿಗಾಗ
ಬಂದರು ಮೇರುಗಿರಿಗಾಗ ಸ್ಕಂದನ
ತಂದೆಯ ಭಾರ ವಹಿಸಿದ ೧

ಸಗರನ ಮಕ್ಕಳ ಅಘದೂರವಾಗಲೆಂದು
ಭಗೀರಥ ಭಾಳ ತಪಮಾಡಿ
ಭಗೀರಥ ಭಾಳ ತಪಮಾಡಲು ವ್ಯಾಜ್ಯದಿ
ಜಗವ ನುದ್ಧರಿಸಿದ ಜಾಹ್ನವಿ ೨

ನಾಗಶಯನನ ಮಗಳು ಸಾಗರನ ನಿಜರಾಣಿ
ಈಗ ನೀ ನಮ್ಮ ಗೆಲಿಸೆಂದು
ಈಗ ನೀ ನಮ್ಮ ಗೆಲಿಸೆಂದು ಸುಭದ್ರೆ
ಬೇಗನೆ ಕೈಯ ಮುಗಿದಳು ೩

ಪ್ರಯಾಗ ರಾಜನ ಮುಂದೆ ವೇಗದಿ ಹರಿದಳು
ಹೋಗಿ ಸರಸ್ವತಿಯ ನೆರೆದಳು
ಹೋಗಿ ಸರಸ್ವತಿಯ ನೆರೆದು ಯಮುನೆಯ ಸೇರಿ
ಸಾಗಿಹಳು ಕಾಶಿಪುರಕಾಗ ೪

ಕಂಚಿ ಕಾಶಿ ಮುಂದೆ ಪಂಚಗಂಗೆಯೆನಿಸಿ
ಅಂಚು ಅಂಚಿಗೆ ಮೆರೆಯೋಳು
ಅಂಚು ಅಂಚಿಗೆ ಮೆರೆಯುವ
ರಾಮೇಶನ ಪಂಚಪ್ರಾಣಳ ಬಲಗೊಂಬೆ ೫

## ೧೫

ಗಂಗೆಗೆ ಸ್ವರ್ಗ ತರಂಗಿಗೆ ರನ್ನದ ಕೋಲ ಕೋಲೆನ್ನಿರಿ
ವಿಮಲ ತರಂಗಿಣಿ ಹರಿಪಾದ ಸಂಗಿಗೆ ಕೋಲ ಕೋಲೆನ್ನಿರೆ ಪ.

ಗೋದಾ ನಿನ್ನಯ ಪಾದಾ ಆದರದಿ ಬಲಗೊಂಬೆ
ಸಾಧು ಸಜ್ಜನರ ಸಲಹುವಿ
ಸಾಧು ಸಜ್ಜನರ ಸಲಹುವಿ ನಮಗಿನ್ನು
ಮೋದದಿ ಮುಯ್ಯವ ಗೆಲಿಸೆಂಬೆ ೧

ಕೃಷ್ಣ ನಿನ್ನಯ ಪಾದಮುಟ್ಟಿ ಭಜಿಸುವೆನು
ಇಷ್ಟವ ಕೊಟ್ಟು ಕಾಲಕಾಲಕ್ಕೆ
ಇಷ್ಟವ ಕೊಟ್ಟು ಕಾಲಕಾಲಕ್ಕೆ ಸಲಹುವಿ
ಶ್ರೀ ಕೃಷ್ಣನ ಮಗಳ ಬಲಗೊಂಬೆ ೨

ಕವೇರ ರಾಜನ ಪುತ್ರಿ ಕಾವೇರಿಯ ಬಲಗೊಂಬೆ
ಶ್ರೀಶನ ಮಗಳ ಬಲಗೊಂಬೆ
ಶ್ರೀಶ ರಾಮೇಶನ ಮಗಳು
ತುಂಗಭದ್ರೆಯ ಚಾರು ಚರಣವ ಬಲಗೊಂಬೆ ೩

## ೧೬

ಕೈ ಮುಗಿವೆ ಕೈ ಮುಗಿವೆ ಕೈಮುಗಿವೆನು
ಸಖಿ ವೈಭವದ ಗುರುಗಳು ಕೈವಲ್ಯನೀವ
ನಮ್ಮ ಕವಿಗಳ ಚರಣಕ್ಕೆ ಪ.

ಮಧ್ವರಾಯರು ಪದ್ಮನಾಭ ನರಹರಿತೀರ್ಥ
ಶುದ್ದ ಮಾಧವ ಅಕ್ಷೋಭ್ಯರೆ ಸಖಿಯೆ
ಶುದ್ದ ಮಾಧವ ಅಕ್ಷೋಭ್ಯರ ಚರಣವ
ವಿದ್ಯುಕ್ತದಿಂದ ಬಲಗೊಂಬೆ ಸಖಿಯೆ ೧

ಪ್ರಶಿದ್ದ ಜಯತೀರ್ಥ ವಿದ್ಯಾಧಿರಾಜ
ಕವೀಂದ್ರ ವಾಗೇಶ ರಾಮಚಂದ್ರರೆ ಸಖಿಯೆ
ವಾಗೇಶ ರಾಮಚಂದ್ರ ವಿದ್ಯಾನಿಧಿಗಳ
ಪಾದಪದ್ಮವ ಮೊದಲೆ ಬಲಗೊಂಬೆ ಸಖಿಯೆ ೨

ರಘುನಾಥ, ರಘುವರ್ಯ, ರಘೂತ್ತಮ ತೀರ್ಥರ
ವೇದವ್ಯಾಸ ವಿದ್ಯಾಧೀಶರೆ ಗೆಲಿಸಲಿ
ವೇದವ್ಯಾಸ ವಿದ್ಯಾಧೀಶರ ಚರಣವ
ಭಕ್ತಿಯಿಂದಮೊದಲೆ ಬಲಗೊಂಬೆ ಸಖಿಯೆ ೩

ಅಗಣಿತ ವೇದನಿಧಿ ಸತ್ಯವೃತ ತೀರ್ಥರ
ಸತ್ಯನಿಧಿ ಸತ್ಯನಾಥರೆ ಸಖಿಯೆ
ಸತ್ಯನಿಧಿ ಸತ್ಯನಾಥರ ಚರಣವ
ಅತ್ಯಂತವಾಗಿ ಬಲಗೊಂಬೆ ಸಖಿಯೆ ೪

ಸತ್ಯಾಭಿನವತೀರ್ಥ ಸತ್ಯಪೂರ್ಣತೀರ್ಥರ
ಸತ್ಯ ವಿಜಯ ಸತ್ಯಪ್ರಿಯರ ಸಖಿಯೆ
ಸತ್ಯ ವಿಜಯ ಸತ್ಯಪ್ರಿಯತೀರ್ಥರ
ಚರಣವ ಅತ್ಯಂತವಾಗಿ ಬಲಗೊಂಬೆ ಸಖಿಯೆ ೫

ಸತ್ಯಬೋಧ ಸತ್ಯಸಂಧ ಸತ್ಯವರರ
ಚಿತ್ತಶುದ್ಧಿಯಲಿ ಬಲಗೊಂಬೆ
ಚಿತ್ತಶುದ್ಧಿಯಲಿ ಬಲಗೊಂಬೆ ಸಭೆಯೊಳು
ಸತ್ಯವಾಕ್ಯಗಳ ನುಡಿಸಲಿ ಸಖಿಯೆ ೬

ಯತಿಮುನಿರಾಯರ ಅತಿಭಕ್ತರಾಗಿದ್ದ
ಗತಿಪ್ರದರಾದ ಗುರುಗಳ ಸಖಿಯೆ
ಗತಿ ಪ್ರದರಾದ ಗುರುಗಳು
ರಾಮೇಶನ ಅತಿಭಕ್ತರ ಮೊದಲೆ ಬಲಗೊಂಬೆ ೭

## ೧೭

ಸಖಿ ನೋಡ ದ್ವಾಪರ ಯುಗವ
ದ್ವಾಪರಯುಗವ ಅಪಾರ ಭಾಗ್ಯವ
ಶ್ರೀಪತಿ ಇವರಿಗೊಲಿದಿರುವ ಸಖಿ ಪ.

ಎಲ್ಲ ಗುರುಗಳ ಪಾದ ಬಲ್ಲಷ್ಟು ಬಲಗೊಂಡು
ಗೊಲ್ಲರ ಅರಸು ಜನಿಸಿದ
ಗೊಲ್ಲರ ಅರಸು ಜನಿಸಿದ ಯುಗ ಧರ್ಮ
ಎಲ್ಲವಿಸ್ತಾರ ರಚಿಸುವೆ ಸಖಿ ೧

ಅಕ್ಕ ದ್ವಾಪರ ಧರ್ಮ ಶಕ್ಯವೆ ವರ್ಣಿಸಲು
ಲಕುಮಿದೇವಿಗೆ ವಶವಲ್ಲ
ಲಕುಮಿದೇವಿಗೆ ವಶವಲ್ಲ ಯುಗಧರ್ಮ
ತಕ್ಕಷ್ಟು ಹೇಳಿ ರಚಿಸುವೆ ಸಖಿ ೨

ಭೂಪ ದ್ವಾಪರದಲ್ಲೆ ಪಾಪಿ ಒಬ್ಬನಿಲ್ಲ
ತಾಪಕೋಪಗಳು ಮೊದಲಿಲ್ಲ
ತಾಪಕೋಪಗಳು ಮೊದಲಿಲ್ಲ ಧರೆ ಮ್ಯಾಲೆ
ತಾಪಸ ಜನವೇ ಹರವಿತ್ತು ಸಖಿ ೩

ಲಕ್ಷಕೋಟಿ ಸಂಖ್ಯದ ಅಕ್ಷಯ ದ್ರವ್ಯವ
ಲಕ್ಷ್ಯವಿಲ್ಲದಲೆ ಕೊಡುವೋರು
ಲಕ್ಷ್ಯವಿಲ್ಲದಲೆ ಕೊಡುವೋರು ರಂಗನ
ರಕ್ಷೆಯ ಮಾಡಿಜ್ಯೆಸೋರು ಸಖಿ ೪

ಕೃಷ್ಣನ ಪಾದದಲೆ ನಿಷ್ಠೆಯುಳ್ಳವರನ್ನು
ದೃಷ್ಟಿಲೆ ನೋಡಿ ಸಹಿಸದೆ
ದೃಷ್ಟಿಲೆ ನೋಡಿ ಸಹಿಸದೆ ಧರೆಮ್ಯಾಲೆ
ಪುಟ್ಟಿದನಾಗ ಕಲಿಬಂದು ಸಖಿ ೫

ಸತ್ಯಶೌಚ ಆಚಾರ ಉತ್ತಮ ಧರ್ಮ
ತತ್ವವಿಚಾರ ಮೊದಲಿಲ್ಲ
ತತ್ವವಿಚಾರ ಮೊದಲಿಲ್ಲ ಧರೆ ಮ್ಯಾಲೆ
ದೈತ್ಯಮಯವಾಗಿ ಜಡದಿತು ಸಖಿಯೆ ೬

ಹರಿಗುರುಗಳರಿಯದ ಪರಮ ಪಾಮರ
ಜನ ಧರೆಯ ಮೇಲಾಗ ಜನಿಸಿತು
ಧರೆಯ ಮೇಲಾಗ ಜನಿಸಿತು ರಾಮೇಶನ
ಪರಮ ಭಕ್ತರನ ದಣಿಸಿತು ಸಖಿಯೆ ೭

## ೧೮

ಅದ್ವೈತವಾದಿ ನಿನ್ನ ಬುದ್ಧಿ ಕೌಶಲ್ಯ
ನೋಡಿ ವಿದ್ವಾಂಸರೆಲ್ಲ ನಗತಾರೆ ಪ.

ಈಚಲ ಗಿಡದಲಿಗೋಕ್ಷೀರ ಕರೆದಂತೆ
ನೀಚರ ಸಂಗ ಸುಜನರು ರನ್ನದ
ನೀಚರ ಸಂಗ ಮಾಡಲುಆಚೆಲಿದ್ದವರಿಗೆ
ಅನುಮಾನ ರನ್ನದ ಕೋಲ ೧

ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ
ಕ್ಷುಲ್ಲಕುಮತರ ಸಹವಾಸ
ಕ್ಷುಲ್ಲಕುಮತರ ಸಹವಾಸ ವೆಂಬೋದು
ನೀರುಳ್ಳಿ ತಿಂದ ಪರಿಯಂತೆ ರನ್ನದ ಕೋಲ ೨

ಭಾವಜ್ಞರ ಸಂಗ ಶಾವಿಗೆ ಉಂಡಂತೆ
ಭಾವನರಿಯದ ಪಾಮರರ
ಭಾವನರಿಯದ ಪಾಮರರ ಸಹವಾಸ
ಬೇವಿನ ಹಾಲು ಕುಡಿದಂತೆ ರನ್ನದ ಕೋಲ ೩

ಬಾಳ್ವೆವಂತರ ಸಹವಾಸ ಹೋಳಿಗೆ ಉಂಡಂತೆ
ಬಾಳುವಿಗೆಟ್ಟ ಅಧಮರ ರನ್ನದ
ಬಾಳುವಿಗೆಟ್ಟ ಅಧಮರ ಸಹವಾಸ
ಹೇಳಲಾರದು ಮೆದ್ದಂತೆ ರನ್ನದ ೪

ಹಿಟ್ಟು ಬೂದಿಯೊಂದೆ ರೊಟ್ಟಿ ಮುಚ್ಚಳವೊಂದೆ
ಕಟ್ಟಿಗೆಯೊಂದೆ ಕಬ್ಬೊಂದೆ
ಕಟ್ಟಿಗೆಯೊಂದೆ ಕಬ್ಬೊಂದೆ ಎಂದರೆ
ದಿಟ್ಟ ರಾಮೇಶ ನಗುತಾನೆ ರನ್ನದ ಕೋಲ ೫

## ೧೯

ಕೇಳೆಲೊವಾದಿ ಕೇಳೆಲೊವಾದಿ
ಕೇಳದಿದ್ದರೆ ತಮಸಿಗೆ ಹೋದಿ ಪ.

ಅತ್ತೆಸೊಸೆ ಒಂದೆ ಮಕ್ಕಳು ಮರಿಯೊಂದೆ
ಹೆತ್ತಮ್ಮನೊಂದೆ ಮಡದಿಯೊಂದೆ
ಹೆತ್ತಮ್ಮ ಒಂದೆ ಮಡದಿಒಂದೆಯಾದರೆ
ವಿತ್ತವೆಚ್ಚಾಗಿ ಮದುವೆಯಾಕೆ ೧

ಅಕ್ಕ ತಂಗಿಯೊಂದೆ ಮಕ್ಕಳು ಸೊಸೆಯೊಂದೆ
ಚಿಕ್ಕಮ್ಮನೊಂದೆ ಮಡದಿಒಂದೆ
ಚಿಕ್ಕಮ್ಮನೊಂದೆ ಮಡದಿಒಂದೆಯಾದರೆ
ವಿತ್ತವೆಚ್ಚಾಗಿ ಮದುವೆ ಯಾಕೆ ೨

ಆಳು ಅರಸು ಒಂದೆ ಕೋಳಿ ಕೋಗಿಲ ಒಂದೆ
ಮಾಳಿಗೆ ಒಂದೆ ಬಯಲೊಂದೆ
ಮಾಳಿಗೆ ಒಂದೆ ಬಯಲೊಂದೆಯಾದರೆ
ಮಾಳಿಗೆ ಮನೆಯು ನಿನಗ್ಯಾಕೆ ೩

ಇಂತೆಂಬೊ ದ್ವೈತ್ಯರನ ನಿಂತ ಕ್ಷಣದಿ ಕೊಂದಿ
ಕುಂತಿ ಮಕ್ಕಳ ಸಲುಹಿದಿ
ಕುಂತಿ ಮಕ್ಕಳ ಸಲುಹಿದಿ ಲಕ್ಷ್ಮಿಕಾಂತ
ನೀನಮ್ಮ ಕರುಣಿಸೊ ೪

ಖೂಳ ದೈತ್ಯರ ಚರಿಯ ತಾಳಲಾರದೆ
ಭೂದೇವಿ ಹೇಳಿದಳಾಗ ಹರಿಗ್ಹೋಗಿ
ಹೇಳಿದಳಾಗ ಹರಿಗ್ಹೋಗಿ ರಮಿಯರಸು
ಕೇಳಿದ ಪರಮ ಹರುಷದಿ ೫

## ೨೦

ನಂದ ಯಶೋದೆಯರಲ್ಲಿ ಬಂದು ಅವತರಿಸಿದ
ಇಂದಿರಾಪತಿಯ ಮಹಿಮೆಯ
ನಲುವಿನಿಂದ ಚಂದವನೆಲ್ಲ ರಚಿಸಿದ ಪ.

ದೇವನಾರಾಯಣ ಭೂದೇವಿ ಮೊರೆ ಕೇಳಿ
ದೇವಕಿಯಲ್ಲಿ ಅವತರಿಸಿದ
ದೇವಕಿದೇವಿಯಲ್ಲಿ ಅವತರಿಸಿದ
ಧರಾದೇವಿ ಭಾರವನೆಲ್ಲ ಇಳಿಸಿದ ೧

ದುಷ್ಟ ದೈತ್ಯರನಟ್ಟಿ ಆಪನೊಳು ಮನೆಕಟ್ಟಿ
ಪಟ್ಟದ ರಾಣಿಯರ ಒಯ್ದಿಟ್ಟ
ಪಟ್ಟದ ರಾಣಿಯರ ಒಯ್ದಿಟ್ಟ ಶೌರ್‍ಯವ
ಎಷ್ಟು ವರ್ಣಿಸಲ್ವಶವಲ್ಲ ೨

ಹರಿಯು ವೈಕುಂಠದ ಪರಿಯ ತೋರುವೆನೆಂದು
ಧರೆ ಮೇಲಾಗ ಜನಿಸಿದ
ಧರೆ ಮೇಲಾಗ ಜನಿಸಿದ ದ್ವಾರಕಾಪುರ
ನಿರ್ಮಿಸೆಂದು ಜಲದೊಳು ೩

ದೊರೆ ಕೃಷ್ಣಯ್ಯನ ಹಿರಿ ಮಡದಿಮನೆ
ಪರಿಯ ವರ್ಣಿಸಲು ವಶವಲ್ಲ
ಪರಿಯ ವರ್ಣಿಸಲು ವಶವಲ್ಲ ದ್ವಾರಕಾಸಿರಿ
ಕೇಳಿ ಬ್ರಹ್ಮ ಬೆರಗಾದ ೪

ಅಪ್ಪ ರಾಮೇಶನು ಇಪ್ಪಂಥ ಅರಮನೆಯು
ಅಪ್ರಾಕೃತ ವೈಕುಂಠ
ಅಪ್ರಾಕೃತ ವೈಕುಂಠ ವೆಂಬೋದು
ಸುಪ್ರಕಾಶವಾಗಿ ಹೊಳೆದೀತು ೫

## ೨೧

ಬಂಟರಾಗಿ ಬಾಗಿಲ ಕಾಯೋರು ಹರಿಯ
ವೈಕುಂಠದಿ ರಂಗನಾಯಕನರಮನೆಯ ಪ.

ಸುತ್ತ ವಿರಜಾನದಿ ಮತ್ತು ನಂದನ ವನ
ಉತ್ತಮೋತ್ತಮ ವೈಕುಂಠ
ಉತ್ತಮೋತ್ತಮ ವೈಕುಂಠದೊಳಗಿನ್ನು
ಮಿಂಚಿನಂತೆ ಹೊಳೆವೊ ಮುಕ್ತರು ೧

ಶ್ರೀದೇವಿ ತಾನು ಮುರಹರನ ಪುರದಾಗ
ವಿರಜಾ ತಾನೆಂದು ಕರೆಸುತ
ವಿರಜಾ ತಾನೆಂದು ಕರೆಸುತ ನಾನಾ ಪರಿ
ಗಿಳಿ ಕೋಗಿಲಾಗಿ ಮೆರೆವೋಳು ೨

ಉತ್ತರ ದಿಕ್ಕಿನಲೆಥಳ ಥಳಿಸುವ ದ್ವಾರ
ಮುತ್ತು ಮಾಣಿಕ್ಯ ಅಳವಟ್ಟ
ಮುತ್ತು ಮಾಣಿಕ್ಯ ಅಳವಟ್ಟ ಹರಿಪುರ
ರತ್ನದ ಝುಲ್ಲೆ ಬಿಗಿದಾವೆ ೩

ರಾಜಿ ಮಾಣಿಕ ಗೋಡೆ ಗಾಜಿನ ನೆಲಗಟ್ಟು
ಈ ಜೋಡು ದ್ರವ್ಯ ಎಲ್ಲಿಲ್ಲ
ಈ ಜೋಡು ದ್ರವ್ಯ ಎಲ್ಲಿಲ್ಲ ಇದು
ನಮ್ಮ ಶ್ರೀದೇವಿಯರಸನ ಅರಮನೆ ೪

ಕೇಶರ ಶ್ರೀಗಂಧ ಕಲವೆಲ್ಲ ಪರಿಮಳ
ಬಿಸಜನೇತ್ರನರಮನೆಯ
ಬಿಸಜನೇತ್ರೆಯರ ಮನೆಯಿಂದ
ಕುಸುಮದ ವೃಷ್ಟಿಗರೆದಾವು ೫

ಉತ್ತರ ಪಾಲ್ಗಡಲೊಳು ಮುತ್ತು ಮಾಣಿಕರತ್ನ
ಪಚ್ಚ ಕರ್ಪೂರ ಸುಳಿಗಾಳಿ
ಪಚ್ಚ ಕರ್ಪೂರ ಸುಳಿಗಾಳಿ ಇದು
ನಮ್ಮ ಅಚ್ಯುತಾನಂತನರಮನೆಯ ೬

ಕೃಷ್ಣ ರಾಮೇಶನ ವಿಶಿಷ್ಟದ ವೈಕುಂಠ
ಸೃಷ್ಟಿ ಮಾಡಿ ರಚಿಸಿದ
ಸೃಷ್ಟಿ ಮಾಡಿ ರಚಿಸಿದ ನೋಡಲು
ದೃಷ್ಟಿ ಸಾಲದು ಜನರಿಗೆ ೭

## ೨೨

ನೋಡು ಮಾನಿನಿ ಜೋಡು ಕೋಗಿಲ ಭೃಂಗ
ಪಾಡಿ ಪಾವನವಾದ ಬಗಿಯ ಪ.

ಮುತ್ತು ಮಾಣಿಕ ರತ್ನ ತೆತ್ತಿಸಿದ ಕೋಟೆಯು
ಹತ್ತಿರೆ ಹರವಾದ ಸರೋವರ
ಹತ್ತಿರೆ ಹರವು ಸರೋವರದೊಳಗಿನ್ನು
ಜತ್ತಾಗಿ ಆಡೋಗಿಳಿ ಹಿಂಡು ೧

ಏಳು ಸುತ್ತಿನ ಕೋಟೆ
ಬಾಳೆ ನಿಂಬೆ ದಾಳಿಂಬ ವನ ಎಲೆತೋಟ
ದಾಳಿಂಬವನ ಎಲೆ ತೋಟದೊಳಗಿನ್ನು
ಸೀಳಿ ಕುಣಿಯೋ ಕಪಿಹಿಂಡು ೨

ನೆಲ್ಲಿ ನೀರಲ ನಿಂಬೆ ಮಲ್ಲಿಗೆ ವನದೊಳು
ಅಲ್ಲೆ ಕೋಕಿಲವು ಸ್ವರಗೈವ
ಅಲ್ಲೆ ಕೋಕಿಲವು ಸ್ವರಗೈವ ಸೊಬಗು
ಇನ್ನೆಲ್ಲೂ ಕಾಣೆ ಧರೆಮೇಲೆ ೩

ಆಲ ಅಶ್ವತ್ಥ ಪಲಾಶ ಬಾರಿಯ ವೃಕ್ಷ
ಸಾಲು ಮಂಟಪವು ಸೊಬಗಿಲೆ
ಸಾಲು ಮಂಟಪವು ಸೊಬಗಿಲೆ ರಂಗಯ್ಯ
ವಾಲಗೈವ ವನವಿದು ೪

ನೀಲ ಮೇಘಶಾಮ ಬಾಲಿಕೆರಿಂದಲಿ
ಲೀಲೆ ಮಾಡುವ ಸರೋವರ
ಲೀಲೆ ಮಾಡುವ ಸರೋವರ
ರಮಿಯರಸು ಲಾಲಿ ಆಡುವ ಮಣಿಗಳು ೫

## ೨೩

ವನವ ನೋಡೋಣು ಬಾರೇ ನೀರೆ
ಅಲ್ಲಲ್ಲಿಗೆ ಸರೋವರ
ವನವ ನೋಡೋಣು ಬಾರೇ ನೀರೆ ಪ.

ನೀರ ಮೇಲಾಡುವ ಪಾರಿವಾಳದ ಹಿಂಡು
ದೂರಾಗಿ ಬೆಳೆದ ಅಡಿಕೆಯ
ದೂರಾಗಿ ಬೆಳೆದ ಅಡಿಕೆ ತೆಂಗಿನಮರ
ಶ್ರೀದೇವಿ ಅರಸನ ವನವಿದು ೧

ಲೋಕನಾಯಕಸ್ವಾಮಿ ಆ ಕಮಲಾಕ್ಷಿಯರು
ಜೀಕುಳಿ ತುಂಬಿ ಜಡತ
ಜೀಕುಳಿ ತುಂಬಿ ಜಡತಾ ರಂಗಯ್ಯ
ಓಕುಳಿಯಾಡಿದ ವನವಿದು ೨

ಘನ ಮೇಘ ಶ್ಯಾಮನ ವನದ
ಮಧ್ಯದಲಿ ಪುನುಗಿನ ಬೆಕ್ಕಸ ಮೊದಲಾಗಿ
ಬೆಕ್ಕಸ ಮೊದಲಾಗಿ ಕಸ್ತೂರಿ
ಘನ ಮೃಗ ಹಿಂಡು ಕಡೆಯಿಲ್ಲ ೩

ತೋಟಪಟ್ಟಿಗಳಲ್ಲಿ ನೀಟಾದ ಹಂಸಗಳು
ಆಟವಾಡುತ್ತಿರಲು ಹರುಷದಿ
ಆಟವಾಡುತ್ತಿರಲು ಹರುಷದಿ
ಅಲ್ಲಲ್ಲೆ ನೀಟಾಗಿ ನಲಿವ ನವಿಲು ಹಿಂಡು ೪

ಕಬ್ಬಿನ ತೋಟಕ್ಕೆ ಹಬ್ಬಿದ ಹಂದರ
ಅಬ್ಬರದಿ ಬೆಳೆದ ಹಲಸಿನ
ಅಬ್ಬರದಿ ಬೆಳೆದ ಹಲಸು ತೆಂಗಿನ ಮರ
ರುಕ್ಮಿಣಿ ರಾಮೇಶನ ವನವಿದು ೫

## ೨೪

ಎಂಥ ನಗರ ಎಂಥನಗರ ನಿಂತು ವರ್ಣಿಸಬೇಕು
ಶ್ರೀಕಾಂತೆಯಿಂದ ಇಂತು ರಮಿಸುವುದು ಪ.

ಮುಂದಕ್ಕೆ ನೋಡಲು ಹೊಂದಿದ್ದ ಮನೆಗಳು
ಹಂದರದ ಜಗಲಿ ಸುಳಿಗೊಳ
ಹಂದರದ ಜಗಲಿ ಸುಳಿಯೆಲಿ ಬೀದಿಯಲಿ
ತುಂಬಿದ ಜನರು ಕಡೆಯಿಲ್ಲ ೧

ಅತ್ತಿತ್ತ ನೋಡಲು ಕಾಣುವ ಗೋಪುರ
ಮುತ್ತಿನಂಗಡಿ ಎಡಬಲ
ಮುತ್ತಿನಂಗಡಿ ಎಡಬಲ ನೋಡುತ
ಕತ್ತೆತ್ತಿ ನೋಡಿದರೂ ಕಡೆಯಿಲ್ಲ ೨

ಕೋಗಿಲದ ಸ್ವರದಂತೆ ಮಕ್ಕಳ ಜೋಗುಳ
ಹಾಡುತೆ ಮನೆ ಬಾಗಿಲ ಮುಂದೆ
ಹಾಡುತೆ ಮನೆಮುಂದೆ ಮಕ್ಕಳ
ಲಾಲಿ ಪಾಡುವರು ಕಡೆಯಿಲ್ಲ ೩

ಸಾರಾಮೃತವುಳ್ಳ ಕ್ಷೀರ ನವನೀತ
ಭಾರವ ವಹಿಸಿ ಕೆಲರು
ಭಾರವ ವಹಿಸಿ ಕೆಲರು ಅಲ್ಲಲ್ಲಿ
ಸಾರಿ ಮಾರುವವರು ಕಡೆಯಿಲ್ಲ ೪

ಹಸಿರು ಬಳೆತೊಟ್ಟು ಕುಸುರಿನ ಸಿಂಬೆಯಲಿ
ಮೊಸರ ಗಡಿಗೆ ಎಸಗುತ
ಮೊಸರ ಗಡಿಗೆ ಎಸಗುತ ಮಾರುವ
ಬಿಸಜನೇತ್ರಿಯರು ಕಡೆಯಿಲ್ಲ ೫

ಬಿಳಿಯ ದಟ್ಟಿಯುಟ್ಟು ಸಣ್ಣ ಬುಟ್ಟಿಹೊತ್ತು
ಕಣ್ಣು ಕಜ್ಜಲದ ಕೆಲದೆಯರು
ಕಣ್ಣು ಕಜ್ಜಲದ ಕೆಲದೆಯರು ಕೂಗುತ
ಹಣ್ಣು ಮಾರುವವರು ಕಡೆಯಿಲ್ಲ ೬

ಅಮ್ಮಮ್ಮ ರಮಿಯರಸು ಒಮ್ಮೊಮ್ಮೆ ಬೀದಿಲೆ
ಸುಮ್ಮನೆ ಸುಳಿವ ಯಮಕದಿ
ಸುಮ್ಮನೆ ಸುಳಿವ ಯಮಕದಿ ಶ್ರೀಕೃಷ್ಣ
ತನ್ನ ಭಕುತರನ ಸಲುಹಲಿ ೭

## ೨೫

ಎಷ್ಟು ಸುಖವ ಕೃಷ್ಣನ ನೋಡಿ
ನೋಡಿಸುಖಿಸುವ ಜನರು
ಎಷ್ಟು ಎಷ್ಟು ಭಾಗ್ಯದಿಂದ
ತುಷ್ಟರು ಉತ್ಕೃಷ್ಟರಿವರು ಪ.

ಬಾಜಾರದೊಳಗೆಲ್ಲ ತೇಜಿ ಆನೆಯ ಸಾಲು
ಕಾಜಿನ ಕಂಬ ಕಿಡಕಿ ಕಮಲಾಕ್ಷಿ
ಕಾಜಿನ ಕಂಬ ಕಿಡಕಿ ಮಹಲೊಳು
ಜೂಜಾಡುವರು ಕಡೆಯಿಲ್ಲ ೧

ನೀಟಾದ ಬೀದೀಲಿ ಥಾಟಾದ ಮನೆಗಳು
ಮಾಟಾದ ಪಗಡಿ ಚದುರಂಗ ಕಮಲಾಕ್ಷಿ
ಮಾಟಾದ ಪಗಡಿ ಚದುರಂಗ ಜೂಜಿನ
ಆಟ ಆಡೋರು ಕಡೆಯಿಲ್ಲ ೨

ಸಾಲು ಮನೆಗಳ ಬರೆದು ಮ್ಯಾಲೆ ವಡ್ಡಿಲೆ
ಮೇಲು ಪಾಶಗಳ ಗೀಚುತಲಿ ಕಮಲಾಕ್ಷಿ
ಮೇಲು ಪಾಶಗಳ ಗೀಚುತಲಿ ಆಡೋ
ಬಾಲಿಕೆಯರ ಹಿಂಡು ಕಡೆಯಿಲ್ಲ ೩

ಲಿಂಬೆ ಪೊಪ್ಪುಳಿ ಸೀರೆಯನ್ನುಟ್ಟು ತುಂಬ ವಸ್ತ್ರಗಳಿಟ್ಟು
ಕಂಬು ಕಂದರನ ಪುರದೊಳು ಕಮಲಾಕ್ಷಿ
ಕಂಬುಕಂದರನ ಪುರದ ಬೀದಿಯೊಳಗೆ
ಗೊಂಬೆ ಯಾಡುವರು ಕಡೆಯಿಲ್ಲ ೪

ಮ್ಯಾಲಿನ ಬೀದೀಲಿ ಬಾಲಕಿಯರಿಂದೆಷ್ಟು
ಶ್ರೀಲೋಲ ರಾಮೇಶನ ಪುರದೊಳಗೆ ಕಮಲಾಕ್ಷಿ
ಶ್ರೀಲೋಲ ರಾಮೇಶನ ಪುರದ ಬೀದಿಯೊಳಗೆ
ಗೋಲಿಯಾಡುವರು ಕಡೆಯಿಲ್ಲ ೫

## ೨೬

ನೀರೆ ದ್ವಾರಕೆಯ ಸೊಬಗು
ಬ್ರಹ್ಮರಾಯ ಬಟ್ಟಾನು ಬೆರಗು ನೀರೆ ಪ.

ಚದುರೆ ಬಾಜಾರದಿ ಕುದುರೆ ಸಾಲುಗಳೆಷ್ಟು
ಎದುರಿಗೆ ಬಾಹೋ ರಥಗಳೆಷ್ಟು
ಎದುರಿಗೆ ಬಾಹೋ ರಥಗಳೆಷ್ಟು ಅಂಬಾರಿ
ಸದರಿನ ಆನೆ ಸೊಬಗೆಷ್ಟು ೧

ಹಿಂಡು ಗೆಳತಿಯರೆಲ್ಲ ತಂಡ ತಂಡ ನೆರೆದು
ದುಂಡು ಮಲ್ಲಿಗೆಯ ತುರುಬಿನ
ದುಂಡು ಮಲ್ಲಿಗೆ ತುರುಬಿನ ಕುವರಿಯರು
ಚಂಡನಾಡುವರು ಕಡೆಯಿಲ್ಲ ೨

ನೀಲಮಾಣಿಕ ಬಿಗಿದ ಮೇಲಾದ ಮನೆಗಳು
ಮ್ಯಾಲೆ ಕನ್ನಡಿಯ ನಿಲ್ಲಿಸ್ಯಾವ
ಮ್ಯಾಲೆ ಕನ್ನಡಿಯ ನಿಲ್ಲಿಸಿದ ಮನೆಯೊಳು
ಸಾಲು ದೀವಟಿಗೆ ಸೊಬಗೆಷ್ಟು ೩

ಬಟ್ಟ ಮುತ್ತಿನ ತೋರಣ ಕಟ್ಟಿದ ಮನೆಯೊಳು
ಅಟ್ಟಳ ಮ್ಯಾಲೆ ಧ್ವಜಗಳು
ಅಟ್ಟಳ ಮ್ಯಾಲೆ ಧ್ವಜಗಳು ಗಗನಕ್ಕೆ
ಮುಟ್ಟಿವೆಂಬಂತೆ ನಿಲ್ಲಿಸ್ಯಾವೆ ೪

ದೊರೆಗಳ ಮನೆಯಿಂದ ಬರೆದ ಚಿತ್ರದ
ಬೊಂಬೆಗಳುಕರೆದಾವ ಕೈ ಬೀಸುತೆ
ಕೈ ಬೀಸಿ ನಮ್ಮ ಎದುರಿಗೆ
ಬರತಾವೆಂಬಂತೆ ನಿಲ್ಲಿಸ್ಯಾವ ೫

ಏಳಂತಸ್ತಿನ ಮಾಳಿಗೆ ಮ್ಯಾಲಿನ ಗೊಂಬೆಗಳು
ಬಾಳೆ ಎಲೆಯಂತೆ ಬಳಕುತ
ಬಾಳೆ ಎಲೆಯಂತೆ ಬಳಕುತ
ಕಿವಿಮಾತು ಹೇಳ್ಯಾವೆಂಬಂತೆ ನಿಲ್ಲಿಸ್ಯಾವೆ ೬

ಚದುರ ರಾಮೇಶನು ಕುದುರೆ ಏರಿಕೊಂಡು
ಮದನ ಜನಕನು ಸುಳಿಯೋನೆ
ಮದನ ಜನಕನು ಸುಳಿಯೋನೆ
ಒಮ್ಮೊಮ್ಮೆ ಮುದದಿ ಭಕ್ತರನ ಸಲುಹಲಿ ೭

## ೨೭

ಮಾರಜನಕನ ಮಾರಿ ನೋಡುತ
ಸುಖವ ಸೂರೆಗೊಂಡರೆ
ನೀರೆ ದ್ವಾರಕಾಪುರದವರು ಪ.

ದಟ್ಟಾದ ಬೀದಿಯಲಿ ಪಟ್ಟಾವಳಿಯ ಜವಳಿ
ಇಟ್ಟು ಮಾರುವರು ಕಡೆಯಿಲ್ಲ
ಇಟ್ಟು ಮಾರುವರು ಕಡೆಯಿಲ್ಲ
ದ್ವಾರಕಾಶೆಟ್ಟರ ಭಾಗ್ಯ ಸರಿಗಾಣಿ ೧

ಅಚ್ಚ ಜರತಾರಿ ಹೆಚ್ಚಿನ ಜವಳಿಯ
ಚಿತ್ರದ ಮಲ್ಲಿಗೆ ನಡುವಿಟ್ಟ
ಚಿತ್ರದ ಮಲ್ಲಿಗೆ ನಡುವಿಟ್ಟು ಅಲ್ಲಲ್ಲಿ
ಹಚ್ಚಿ ಮಾರುವವರು ಕಡೆಯಿಲ್ಲ ೨

ಜವಳಿ ಅಂಗಡಿ ಮುಂದೆ ಹವಳಗಾರರು
ಅಲ್ಲಿ ಕೊಳ್ಳುವ ನಾರಿಯರು ಕಡೆಯಿಲ್ಲ
ಕೊಳ್ಳುವ ನಾರಿಯರು ಕಡೆಯಿಲ್ಲ ದ್ವಾರಕಾ
ಕಳೆಯ ವರ್ಣಿಸಲು ವಶವಲ್ಲ ೩

ಕಂಚು ಹಿತ್ತಾಳೆ ಮಾರುವ ಕಂಚುಗಾರರಂಗಡಿ
ಸಂಚಿತವಾದ ನವಧಾನ್ಯ
ಸಂಚಿತವಾದ ನವಧಾನ್ಯ ಅಲ್ಲಲ್ಲಿ
ಹಚ್ಚಿಮಾರುವವರು ಕಡೆಯಿಲ್ಲ ೪

ರಂಗ ರಾಮೇಶನ ನಗರೀಲೆ
ಬಂಗಾರ ಬೆಳ್ಳಿ ಬೆಲೆ ಮಾಡಿ
ಬಂಗಾರ ಬೆಳ್ಳಿ ಬೆಲೆ ಮಾಡಿ ಮಾರುವ
ರಂಗದುಟಿಯವರುಕಡೆಯಿಲ್ಲ ೫

## ೨೮

ಈ ಭಾಗ್ಯ ನೋಡ ಒಯ್ಯಾರಿ
ನಮ್ಮ ಸೌಭಾಗ್ಯ ಶ್ರೀ ಕೃಷ್ಣ ಕೈ ಸೇರಶೌರಿ ಪ.

ಹತ್ತೆಂಟು ಸಾಲಿನ ಬತ್ತಾಸದಂಗಡಿ
ಭತ್ತದ ಅರಳು ಮೊದಲಾಗಿ ಏ ನಾರಿ
ಭತ್ತದ ಅರಳು ಮೊದಲಾಗಿ ಏ ನಾರಿ
ಸಕ್ಕರೆಯ ತಂದಿಟ್ಟು ಮಾರುವವರು ಕಡೆಯಿಲ್ಲ ೧

ಕುಂಕುಮ ಅರಿಷಿಣ ಅಲಂಕಾರ ದ್ರವ್ಯವ
ಅಂಕ ಅಂಕಣಕ ನೆರವ್ಯಾವ ಏನಾರಿ
ಅಂಕ ಅಂಕಣಕ ನೆರವ್ಯಾವ ಬೆಲೆ ಮಾಡೊ
ಕಂಕಣದ ಕೈಯ ಕೆಲದೆಯರು ಕಡೆಯಲ್ಲಾ ಏ ನಾರಿ ೨

ಬುಕಿಟ್ಟು ಪರಿಮಳ ದ್ರವ್ಯ ಪೊಟ್ಟಣ ಕಟ್ಟಿ
ತರಹತರಹ ಏ ನಾರಿ
ಪೊಟ್ಟಣವ ಕಟ್ಟಿ ತರಹತರದ
ದ್ರವ್ಯವ ಕೊಟ್ಟು ಕೊಂಬುವರು ಕಡೆಯಿಲ್ಲ ಏ ನಾರಿ ೩

ಸೋಜಿಗವಾಗಿದ್ದ ಜಾಜಿ ಮಲ್ಲಿಗೆ
ಹೂ ಸೂಜಿ ಮಲ್ಲಿಗೆ ಸರಗಳು
ಸೂಜಿ ಮಲ್ಲಿಗೆ ಸರಗಳ ರಂಗನ
ಪೂಜೆಗೊಯ್ವೊ ಪುರುಷರು ಏ ನಾರಿ ೪

ನಾಲ್ಕು ದಿಕ್ಕಿಗೆ ದಿವ್ಯ ಆಕಳ ಹಿಂಡುಗಳು
ಸಾಕುವ ಎರಳೆ ಎಳಿಗಾವು ಏ ನಾರಿ
ಸಾಕುವ ಎರಳೆ ಎಳಿಗಾವು ಹೂಂಕರಿಸಿ
ಬಾಹೋ ಚಲ್ವಿಕೆಯ ಏ ನಾರಿ ೫

ಎತ್ತೆತ್ತ ನೋಡಿದರೂ ಮುತ್ತಿನ ಪಲ್ಲಕ್ಕಿ
ಉತ್ತಮ ರಥವ ಹಿಡಿದೇಜಿ ಏ ನಾರಿ
ಉತ್ತಮ ರಥವ ಹಿಡಿದೇಜಿ ಮ್ಯಾಲಿನ್ನು
ಹತ್ತಿ ಬಾಹುವವರು ಕಡೆಯಿಲ್ಲ ಏ ನಾರಿ ೬

ಬಾಜಾರದೊಳಗಿನ್ನು ರಾಜಸಿಂಹಾಸನ
ರಾಜ ರಾಮೇಶ ಕುಳಿತಲ್ಲಿಯೆ ಏ ನಾರಿ
ರಾಜ ರಾಮೇಶ ಕುಳಿತು ಪೂಜೆಗೊಂಬೊ
ಮೂರ್ಜಗವು ಮುದದಿಂದ ಏ ನಾರಿ ೭

## ೨೯

ಎಷ್ಟು ಸಂಪದವಮ್ಮ ದ್ವಾರಕೆ
ಎಂದು ಸಂತುಷ್ಟನಾದನು ಬೊಮ್ಮ
ಕೃಷ್ಣನ ಹಾಡುತ ಪಾಡುತ
ಜನರೆಲ್ಲ ಉತ್ಕೃಷ್ಟರಾಗಿಹರಮ್ಮ ಪ.

ಪ್ಯಾಟಿಯ ಎದುರಾಗಿ ಕೋಟೆ
ಬಾಗಿಲ ಕೋಟ ಸೂರ್ಯರ ಬೆಳಕಿಲೆ
ಕೋಟ ಸೂರ್ಯನ ಬೆಳಕಿಲೆ ಹೊಳೆವಂಥ
ಹಾಟಕಾಂಬರನ ಅರಮನೆ ೧

ರನ್ನದ ಬಾಗಿಲು ಚಿನ್ನದ ಚೌಕಟ್ಟು
ಹೊನ್ನ ಕಳಸಗಳು ಹೊಳೆವೋವೆ
ಹೊನ್ನ ಕಳಸಗಳು ಹೊಳೆವೋವೆ
ಇದು ನಮ್ಮ ಪನ್ನಗ ಶಯನನ ಅರಮನೆ ೨

ಯೋಗಿ ಜನ ವಂದ್ಯ ಭಾಗವತ ಪ್ರಿಯ
ಸಾಗರ ಶಯನನ ಅರಮನೆ
ಸಾಗರ ಶಯನನ ಅರಮನೆಯ ಬಾಗಿಲೊಳು
ಹೋಗಿ ಬರುವವರು ಕಡೆಯಿಲ್ಲ ೩

ನಾಗಶಯನನ ಮನೆ ಬಾಗಿಲು ಮುಂದೆ
ಸೋಂಗ್ಹಾಕಿ ನಿಂತ ಕೆಲವರು

ಸೋಂಗ್ಹಾಕಿ ನಿಂತ ಕೆಲವರು ಸಭೆಯೊಳು
ಹೋಗಬೇಕೆಂಬೊ ಭರದಿಂದ ೪

ದಾಸರು ಬಗೆಬಗೆ ಸೋಸಿಲೆ ತಳವೂರಿ
ಶ್ರೀಶ ರಾಮೇಶನ ಅರಮನೆ ಮುಂದೆ
ಶ್ರೀಶ ರಾಮೇಶನ ಅರಮನೆ ಮುಂದಿನ್ನು
ಕೂಸೆತ್ತಿಕೊಂಡು ನಿಂತ ಕೆಲವರು ೫

## ೩೦

ಶೃಂಗಾರವ ನೋಡಿದ್ಯಾ ಎಂಥ ಶೃಂಗಾರವ
ನೋಡಿದ್ಯಾ ಪ.

ಶಂಖ ಚಕ್ರಾಂಕಿತ ಬಿಂಕುಳ್ಳ ಶ್ರೀವತ್ಸ
ಕುಂಕುಮಾಂಕಿತನ ಅರಮನೆ ಶೃಂಗಾರವ
ನೋಡಿದ್ಯಾ ಅ.ಪ.

ರಂಗು ಮಾಣಿಕ ಬಿಗಿದ ಅಂಗಳದೊಳಗಿನ್ನು
ಬಂಗಾರದ ಬೆತ್ತಹಿಡಕೊಂಡು
ಬಂಗಾರದ ಬೆತ್ತಹಿಡಕೊಂಡು ನಿಂತಾರೆ
ಮಂಗಳಾಂಗನ ಮನೆ ಮುಂದೆ ೧

ವ್ಯಾಲಶಯನನ ಮನೆಯೊಳು ಅಂತಸ್ತಿಗೆ
ಜಾಳಿಗೆ ಮುತ್ತು ಜಡದಾವೆ
ಜಾಳಿಗೆ ಮುತ್ತು ಜಡದಾವೆ ಅರಮನೆ
ಸೊಬಗ ಹೇಳಲೊಶವಲ್ಲಜನರಿಗೆ ೨

ಕನಿಯಾದ ಕದಗಳು ಚಿನ್ನದ ಚೌಕಟ್ಟು
ಸನ್ನಹದಿ ಅರಮನೆ

ಸನ್ನಹದಿ ಅರಮನೆ ಯೊಳಗಿನ್ನು
ಕನಿಯಾದ ಕದಗಳು ತಿಳಿಯವು ೩

ಹಲವು ಚಿನ್ನದ ನೆರಳುನೆಲದೊಳು ಬಿದ್ದಿರೆ
ಕೆಲ ಸರೋವರ ಕಮಲವು
ಕೆಲ ಸರೋವರ ಕಮಲವು ಆದರಿಂದ
ಜಲವು ನೆಲವೆಂದು ತಿಳಿಯದು ೪

ಅಂತರಂತರದಲ್ಲೆ ಮಂತ್ರಿಗಳು ಕುಳಿತಾರೆ
ಕಂತುನಯ್ಯನ ಅರಮನೆ
ಕಂತುನಯ್ಯನ ಅರಮನೆಯೊಳಗೆ
ಅನಂತಪ್ರಜೆ ಬರಲಿ ಬಯಲುಂಟು ೫

ಮಿಂಚಿನಂತೆ ಹೊಳೆಯೊ ಕೆಂಚೆಯರು ಮೈಬಣ್ಣ
ಗೊಂಚಲ ಮುತ್ತು ಅಲುಗೂತ
ಗೊಂಚಲ ಮುತ್ತು ಅಲುಗೂತ
ಸುಳಿದಾಡೊಚಂಚಲಾಕ್ಷಿಯರು ಕಡೆಯಿಲ್ಲ ೬

ವಜ್ರಮಾಣಿಕ್ಯ ಬಿಗಿದು ಸಜ್ಜಾದ ಆಭರಣವು
ಗೆಜ್ಜೆ ಸರಪಳಿಯು ಗಿಲುಕೆಂದು
ಗೆಜ್ಜೆ ಸರಪಳಿಯು ಗಿಲುಕೆಂದು
ರಾಮೇಶನ ಗುಜ್ಜೆಯರು ಹೆಜ್ಜೆ ಇಡುವೋರು ೭

## ೩೧

ಮುರಲೀಧರ ಮೋಹನಾಂಗ
ಕಾಯೋ ಕೃಪಾಂಗ
ದೇವನರಸಿಂಹ ಹೇ ಭವ ಭಂಗ ಪ.

ಥಳ ಥಳಿಸುತ ಗೆಳತಿಯರು ಸಹಿತಾಗಿ
ಚಳತೆಂಬೊ ದಿವ್ಯ ಆಭರಣ
ಚಳತೆಂಬೊ ದಿವ್ಯಾಭರಣ ಭೂಷಿತರಾಗಿ
ಕುಳಿತ ನಾರಿಯರು ಕಡೆಯಿಲ್ಲ ೧

ಕುಂತಲ ಕದುಪಿನ ಕಾಂತೆಯರು ಹರುಷದಿ
ಕಂತುನಯ್ಯನ ಮುಖನೋಡಿ
ಕಂತುನಯ್ಯನ ಮುಖನೋಡಿ
ಮೈಮರೆದು ನಿಂತ ನಾರಿಯರು ಕಡೆಯಿಲ್ಲ ೨

ಅಂದುಗಿ ಅರಳೆಲೆ ಬಿಂದಲಿ ಭಾಪುರಿ
ಅಂದವಾಗಿದ್ದ ಅಸಲಿ
ಅಂದವಾಗಿದ್ದ ಅಸಲಿ ಕಟ್ಟಿದ
ಕಂದರಿನ್ನೆಷ್ಟು ಕಡೆಯಿಲ್ಲ ೩

ಕಾಲಲಂದುಗೆ ಗೆಜ್ಜೆ ತೋಳಲಿ ತಾಯತ
ಲಾವಳಿಗೆ ಮುತ್ತು ಅಲುಗುತ
ಲಾವಳಿಗೆ ಮುತ್ತು ಅಲುಗುತ
ಸುಳಿದಾಡೊ ಬಾಲರಿನ್ನೆಷ್ಟು ಕಡೆಯಿಲ್ಲ ೪

ಹಸಿರು ಪಚ್ಚದ ಕಂಭ ಕುಸುರಾದ ಗಿಳಿಬೋದುಗೆ
ಎಸಕೊ ಮಾಣಿಕದ ಜಗುಲಿಯ
ಎಸಕೊ ಮಾಣಿಕದ ಜಗುಲಿ ಸಿಂಹಾಸನದಿ
ವಸುದೇವ ತನಯ ಕುಳಿತಾನೆ ೫

ಬಿಸಜನೇತ್ರಿಯರ ಮುಂದೆ ಕುಶಲದ ಮಾತ್ಹೇಳುತ
ವಸುದೇವ ತಾನು ಕುಳಿತಾನ
ವಸುದೇವ ತಾನು ಕುಳಿತಾನ ದೇವಕಿಯ
ಸೊಸೆಯರ ಕಂಡು ಹರುಷಾಗಿ ೬

ಚಲುವ ರಾಮೇಶನ ಬಲದ ಭಾಗದಿ
ಬಂದು ಹಲವು ಮಾತುಗಳು ಕಿವಿಯೊಳು
ಹಲವು ಮಾತುಗಳು ಕಿವಿಯೊಳು
ಹೇಳುತ ಬಲರಾಮ ತಾನೆ ಕುಳಿತಾನೆ ೭

## ೩೨

ಎಷ್ಟು ಭಾಗ್ಯ ಎಷ್ಟು ಭಾಗ್ಯ
ಕೃಷ್ಣನ ಮುಖವ
ದಿಟ್ಟಿಸಿ ನೋಡಿ ಸುಖಿಸುವ
ಸಭೆಯ ಜನರು ಪ.

ಕಡಗ ಸರಪಳಿಯು ದಿವ್ಯ ಬೆಡಗಿನಾಭರಣ
ಮುಕುಟ ಕಡಿಗಂಟೆ ಮುತ್ತುಗಳ ಜಡವುತ
ಕಡಿಗಂಟೆ ಮುತ್ತುಗಳ ಜಡವುತಲಿ ರಂಗನಾಯಕನ
ಎಡಬಲದಿ ಕುಳಿತ ಅರಸಿಯರು ಸಖಿಯೆ ೧

ಕೆತ್ತಿಗೆ ಕುಸುರಾದ ಉತ್ತಮ ಆಭರಣಗಳು
ಮುತ್ತಿನ ಮಾಲೆಗಳು ಅಲಗುತ
ಮುತ್ತಿನ ಮಾಲೆಗಳು ಅಲಗುತ
ರಂಗಯ್ಯನ ಹತ್ತಿರ ಕುಳಿತ ದೊರೆಗಳು ಸಖಿಯೆ ೨

ಕುಂಡಲ ಮಂಡಿತ ಪಂಡಿತರೆಲ್ಲರು
ಭೂಮಂಡಲ ಪತಿಯ ಸ್ತುತಿಸುತ
ಭೂಮಂಡಲ ಪತಿಯ ಸ್ತುತಿಸುತ ಸಭೆಯಲಿ
ತಂಡ ತಂಡದಿ ಕುಳಿತಾರೆ ಸಖಿಯೆ ೩

ಋಗ್ವೇದಾದಿಗಳೆಲ್ಲರು ಶಬ್ದವಾದದಿಂದಲಿ
ರುಕ್ಮಿಣಿ ಪತಿಯ ಸ್ತುತಿಸುತ
ರುಕ್ಮಿಣಿ ಪತಿಯನೆ ಸ್ತುತಿಸುತ ಸಭೆಯಲಿ
ಹಿಗ್ಗಿ ಹರುಷದಲಿ ಕುಳಿತಾರೆ ಸಖಿಯೆ ೪

ಮಿಂಚು ಮಡಿಯುಟ್ಟು ಪಂಚ ಮುದ್ರೆಯನೆ ಧರಿಸಿ
ಚಂಚಲಾಕ್ಷನ ಸಭೆಯೊಳು
ಚಂಚಲಾಕ್ಷನ ಸಭೆಯೊಳು ಜೋಯಿಸರು
ಪಂಚಾಂಗ ಹೇಳುತ ಕುಳಿತಾರೆ ಸಖಿಯೆ ೫

ತಾಳ ಮದ್ದಳೆ ದಿವ್ಯ ಮೇಲೆ ತಂಬೂರಿಯವರು
ಮೇಲು ಸ್ವರದಿಂದ ಸಭೆಯೊಳು
ಮೇಲು ಸ್ವರದಿಂದ ನುಡಿಸುತ ಕುಳಿತಾರೆ
ಕಾಳಿ ಮರ್ದನನ ಸಭೆಯೊಳು ಸಖಿಯೆ ೬

ಚಲುವ ರಾಮೇಶನ ಆದರದಿ ಸ್ತುತಿಸುತಲೆ
ವೇದಗೋಚರನ ಸಭೆಯೊಳು
ವೇದಗೋಚರನ ಸಭೆಯೊಳಗೆ ಹರುಷದಿ
ಯಾದವರೆಲ್ಲ ಕುಳಿತಾರೆ ಸಖಿಯೆ ೭

## ೩೩

ಕಂಡು ಮನ ಹಿಗ್ಗೋದು
ರಂಗಯ್ಯನ ಕೊಂಡಾಡಿ
ಮನ ಉಬ್ಬೋದು ಪ.

ಎಂಟು ದಿಕ್ಕಿಗೆ ದಿವ್ಯ ಮಂಟಪ ಮಣಿಯು
ಎಸೆಯೆ ಕಂಠದಿ ಸ್ವರವ ಕುಣಿಸುತ
ಕಂಠದಿ ಸ್ವರವ ಕುಣಿಸುತ
ಸಭೆಯೊಳು ನಟನೆ ಮಾಡುವರು ಕಡೆಯಿಲ್ಲ ೧

ಛತ್ರ ಚಾಮರ ದಿವ್ಯ ಉತ್ತಮ ವ್ಯಜನವ
ಸುತ್ತ ಬೀಸುವ ಸುಗುಣಿಯರು
ಸುತ್ತ ಬೀಸುವ ಸುಗುಣಿಯರು
ಸಭೆಯೊಳು ನರ್ತನ ಮಾಡೋರಮ್ಮ ಐವರು ೨

ಕುಂದಣವುಳ್ಳ ಇಂದಿರೆರಮಣನ
ಒಂದೊಂದು ಗುಣವ ವಿವರಿಸಿ
ಒಂದೊಂದು ಗುಣವ ವಿವರಿಸಿ
ಸಭೆಯೊಳು ವಂದಿಗರು ಬಂದು ಹೊಗಳೋರು ೩

ಭಾಗೀರಥಿ ಜಲವ ಬ್ಯಾಗ ಗಿಂಡಿಯ ತುಂಬಿ
ಸಾಗರಶಯನನ ಅಭಿಷೇಕ
ಸಾಗರಶಯನನ ಅಭಿಷೇಕ ಮಾಡುವ
ಪನ್ನಂಗವೇಣಿಯರು ಕಡೆಯಿಲ್ಲ ೪

ಮಲ್ಲಿಗೆ ತುರುಬಿನ ಮಲ್ಲಮುಷ್ಟಿಕರೆಲ್ಲ
ಗುಲ್ಲು ಮಾಡುತಲೆ ಸಭೆಯೊಳು
ಗುಲ್ಲು ಮಾಡುತಲೆ ಸಭೆಯೊಳು ಅಲ್ಲಲ್ಲೆ
ಬಿಲ್ಲನೆತ್ತುವರು ಕಡೆಯಿಲ್ಲ ೫

ಬಾಲೆಯರು ಅಂಗಾಲು ಲಾಲಿಸಿ ಒರೆಸುತ
ಮ್ಯಾಲೆ ಪನ್ನೀರು ಎರೆಯುತ
ಮ್ಯಾಲೆ ಪನ್ನೀರು ಎರೆಯುತ ರಂಗಯ್ಯನ
ಕಾಲಿಗೆ ಎರಗುವರು ಐವರು ೬

ಹರದೆಯರು ಅಂಗಾಲು ಸೆರಗಿಲೆ ಒರೆಸುತ
ಕಿರುಗೆಜ್ಜೆ ರುಳಿಯ ಸರಿಸುತ
ಕಿರುಗೆಜ್ಜೆ ರುಳಿಯ ಸರಿಸುತ ರಾಮೇಶನ
ಎರಕಿ ನಿಂತವರು ಕಡೆಯಿಲ್ಲ ೭

## ೩೪

ಎಂಥ ಸುಕೃತ ವಮ್ಮ
ರಂಗನ ಕಾಂತೆಯರದಮ್ಮ
ಅನಂತ ದೇಶಗಳು ಇವನಂತ ತಿಳಿಯವು

ಈ ಕಾಂತೆಯರು
ಒಲಿದರೆಂತು ಪೇಳಮ್ಮ ಪ.

ಪಟ್ಟಿ ಪಟ್ಟಾವಳಿ ಕೊಟ್ಟರು ರಂಗಗೆ
ಇಟ್ಟರು ದಿವ್ಯ ಮುಕುಟವ
ಇಟ್ಟರು ದಿವ್ಯ ಮುಕುಟ ಮುತ್ತಿನಹಾರ
ಗಟ್ಟಿ ಕಂಕಣದ ಕೆಲದೆಯರು ೧

ಕೇಶರ ಬೆರೆಸಿದ ಮೀಸಲ ಶ್ರೀಗಂಧವ
ಶ್ರೀಶನ ಸತಿಯರು ಹಿಡಕೊಂಡು
ಶ್ರೀಶನ ಸತಿಯರು ಹಿಡಕೊಂಡು
ರಂಗಗೆ ಲೇಪಿಸೆವೆಂಬೊ ಭರದಿಂದ ೨

ಸಾರ ತುಳಸಿಯು ಬೆರೆದ ಪಾರಿಜಾತದ ಮಾಲೆ
ವಾರಿಜ ಮುಖಿಯರು ಹಿಡಕೊಂಡ
ವಾರಿಜ ಮುಖಿಯರು ಹಿಡಕೊಂಡು
ರಂಗಗೆ ಏರಿಸೆವೆಂಬೊ ಭರದಿಂದ ೩

ಪಚ್ಚಮಾಣಿಕ ಬಿಗಿದ ಹೆಚ್ಚಿನ ಸರಗಳು
ಮಚ್ಛನೇತ್ರಿಯರು ಹಿಡಕೊಂಡು
ಮಚ್ಛನೇತ್ರಿಯರು ಹಿಡಕೊಂಡು
ರಂಗಗೆ ಏರಿಸೆವೆಂಬೊ ಭರದಿಂದ ೪

ಕೊರಳಲಿ ಸರಮಾಲೆ ಅರಳಿದ ಮುಖ ಕಮಲ
ಎರಳೆ ನೋಟದಲಿ ಚಲುವನ
ಎರಳೆ ನೋಟದಲಿ ಚಲುವ ಚನ್ನಿಗರಾಯನ
ತರುವಳಿನೋಡಿ ಹರುಷಾಗಿ ೫

ಹಸ್ತದಿ ಹಣಿಮ್ಯಾಲೆ ಕಸ್ತೂರಿ ಬಟ್ಟಿಟ್ಟು
ಉತ್ತಮ ತಿಲಕ ರಚಿಸುತ
ಉತ್ತಮ ತಿಲಕ ರಚಿಸುತ
ರಂಗನ ಹತ್ತಿರ ನಿಂತ ಕೆಲವರು ೬

ಇನ್ನೋರ್ವಳು ಬಂದು ಕನ್ನಡಿ ತೋರುತ
ಕರ್ಣ ಕುಂಡಲವ ಸರಿಸುತ
ಕರ್ಣ ಕುಂಡಲವ ಸರಿಸುತ ರಾಮೇಶನ
ಚನ್ನಾಗಿ ನೋಡಿ ಸುಖಿಸುತ ೭

## ೩೫

ರಂಗನಂಗದ ಸಂಗ ಸುಖ ನೋಡ ಅಂಗನೆ
ಲಕುಮಿಯ ಸಂಗದುರ್ಲಭವೆ
ಈಅಂಗನೆಯರು ಮಾಡಿದ ಸುಕೃತವಂತೆ ಪ.

ಗುಂಗುರಗೂದಲ ಮ್ಯಾಲೆ ಭೃಂಗದ ಮರಿಗಳು
ರಂಗನ ಮುಖದ ರಸವನೆ
ರಂಗನ ಮುಖದ ರಸವನೆ ಸವಿದು
ತಮ್ಮಂಗವ ಮರೆತು ಕುಳಿತಾರೆ ಬ್ರಹ್ಮಾದಿ ವಂದ್ಯ ೧

ಪಂಕಜನಾಭಗೆ ವಂಕಿ ಬಾಪುರಿ ಇಟ್ಟು
ಕಂಕಣ ಕಡಗ ಮೊದಲಾಗಿ
ಕಂಕಣ ಕಡಗ ಮೊದಲಾಗಿ ರಂಗಗೆ
ಅಲಂಕಾರ ಮಾಡಿ ಕೆಲದೆಯರು ೨

ಪಂಚಬೆರಳಿಗೆ ತಕ್ಕ ಮಿಂಚು ಮುದ್ರೆಗಳಿಟ್ಟು
ಪಂಚರತ್ನದಲಿ ರಚಿಸಿದ
ಪಂಚರತ್ನದಲಿ ರಚಿಸಿದ ವಡ್ಯಾಣ
ಕೆಂಚೆಯರು ಇಟ್ಟು ನಡುವಿಗೆ ೩

ಶ್ರೀದೇವಿ ಅರಸಗೆ ಕ್ಯಾದಿಗೆ ಮುಡಿಸುತ
ಊದಿನ ಕಡ್ಡಿಪರಿಮಳ
ಊದಿನ ಕಡ್ಡಿಪರಿಮಳ ಮೂಸುತ
ಮೋದ ಬಡುವವರು ಕಡೆಯಿಲ್ಲ ೪

ನೀಲವರ್ಣನ ಮುಂದೆ ಸಾಲು ದೀವಿಗೆಯಿಟ್ಟು
ಮ್ಯಾಲೆ ಚಾಮರವ ಸುಳಿಸುತ
ಮ್ಯಾಲೆ ಚಾಮರವ ಸುಳಿಸುತ
ಶಿರಮ್ಯಾಲೆ ಪೂಮಳೆಯ ಗರೆದಾರು ೫

ಚಲ್ವ ರಂಗನ ಮುಂದೆ ಜಲಪಾತ್ರೆಯನ್ನಿಟ್ಟು
ಎಲೆಅಡಕಿ ತಬಕ ಫಲಗಳು
ಎಲೆಅಡಕಿ ತಬಕ ಫಲಗಳ ತಂದಿಟ್ಟು
ಕೆಲದೆಯರು ಕೈಯ ಮುಗಿದಾರು ೬

ಅಪಾರ ಮಹಿಮಗೆ ಧೂಪಾರತಿಯನೆತ್ತಿ
ಭೂಪರಾಮೇಶ ಸಲುಹೆಂದು
ಭೂಪರಾಮೇಶ ಸಲುಹೆಂದು
ಗೋಪಾಲಕೃಷ್ಣಯ್ಯನ ಎದುರಲಿ ನಿಂತಾರು ೭

## ೩೬

ಕೋಲ ಕೋಲೆನ್ನ ಕೋಲ ಕೃಷ್ಣಯ್ಯನ
ನೆನೆದೇವ ಕೋಲ ಪ.

ಶಿರವ ದೂಗಿದನೆ ಬ್ರಹ್ಮ ದೂಗಿದನೆ
ಮಂದಗಮನೆಯರ ಭಾಗ್ಯ ಚಂದ್ರ ಸೂರ್ಯರಿಗಿಲ್ಲ
ಇಂದ್ರಗೆ ಇಲ್ಲವೆಂದು ೧

ಲೋಕನಾಯಕಗೆ ಏಕಾರತಿಯನೆತ್ತಿ ಗೋಕುಲಾಧೀಶ ಸಲುಹೆಂದು
ಗೋಕುಲಾಧೀಶ ಸಲುಹೆಂದು ಕೈಮುಗಿದು
ಏಕೋಭಾವದಲಿ ಕೆಲದೆಯರು ೨

ಭೂಮಂಡಲಪತಿ ಮುಂದೆ ಮಂಡಲ ಮಾಡಿ
ಅನ್ನಭಾಂಡವ ತಂದು ಇಟ್ಟಾರು
ಅನ್ನಭಾಂಡವ ತಂದಿಟ್ಟು ಕೈಮುಗಿದಾರು
ಪುಂಡರಿಕಾಕ್ಷ ಕೈಕೊಳ್ಳೊ ೩

ತುಪ್ಪ ಸಕ್ಕರಿಯಲಿ ಪಕ್ವಾದ ಭಕ್ಷ್ಯ
ಮಿತ್ರೆಯರು ತಂದು ಇಡುವೋರು
ಮಿತ್ರೆಯರು ತಂದಿಟ್ಟು ಕೈಮುಗಿದಾರು
ಭಕ್ತವತ್ಸಲನೆ ಕೈಕೊಳ್ಳೊ ೪

ಯಾಲಕ್ಕಿ ಕಸಕಸಿ ಮೇಲಾದ ಪಾಯಸ
ಬಾಲೆಯರು ತಂದು ಇಡುವೋರು
ಬಾಲೆಯರು ತಂದಿಟ್ಟು ಕೈಮುಗಿದಿಹರು
ಬಾಲಗೋಪಾಲ ಕೈಕೊಳ್ಳೊ ೫

ಫಲದಿಂದ ಪಕ್ವಾದ ಹಲವು ಪದಾರ್ಥ
ಕೆಲದೆಯರು ತಂದು ಇಡುವೋರು
ಕೆಲದೆಯರು ತಂದಿಟ್ಟು ಕರ ಮುಗಿದಿಹರು
ಸುಲಭ ಮೂರುತಿಯೆ ಕೈಕೊಳ್ಳೊ ೬

ಭೇರಿ ಮೊದಲಾದ ಭೋರೆಂಬೊ ತುತ್ತೂರಿ
ವಾರುಜ ಗಂಟೆ ಮೊದಲಾಗಿ
ವಾರುಜ ಗಂಟೆ ಮೊದಲಾಗಿ ರಂಗನ
ಸಾರುತಲಿವೆ ಸಭೆಯೊಳು ೭

ಪಟ್ಟಿದರಸಿಯರು ಇಟ್ಟ ಪದಾರ್ಥವ
ದೃಷ್ಟಿಲಿನೋಡಿ ಸುಖಿಸುತ
ದೃಷ್ಟಿಲಿನೋಡಿ ಸುಖಿಸುತ ಅವರಿಗೆ
ಕೊಟ್ಟಾನು ಬ್ಯಾಗ ಕೈವಲ್ಯ ೮

ನಿತ್ಯ ಪ್ರಕಾಶಗೆ ಮುತ್ತಿನಾರುತಿಯ
ಸತ್ಯಭಾಮೆಯರು ಮೊದಲಾಗಿ
ಸತ್ಯಭಾಮೆಯರು ಮೊದಲಾಗಿ ಬೆಳಗಿದರು
ಮತ್ತ ರಾಮೇಶ ಸಲುಹೆಂದು ೯

## ೩೭

ಆವ ಸುಕೃತವು
ಈ ನಾರಿಯರು
ಈಪರಿ ಸುಖಿಸುವುದು ಪ.

ಪಂಕಜನಾಭಗೆ ಶಂಖೋದಕವೆತ್ತಿ
ಅಂಕದಲ್ಲಿಹೊ ಲಕುಮಿಯ
ಅಂಕದಲ್ಲಿಹೊ ಲಕುಮಿಯ ನಲ್ಲಗೆ
ಅಸಂಖ್ಯಸ್ತೋತ್ರವನೆ ಸ್ತುತಿ ಸೋರು ೧

ದುರ್ಗಾದೇವಿಯ ರಮಣ ಭಾರ್ಗವಿರಾಮಗೆ
ಶೀಘ್ರದಿ ಕೊಟ್ಟು ಕವಳವ
ಶೀಘ್ರದಿ ಕೊಟ್ಟು ಕವಳವ ಗೋಗ್ರಾಸವ
ಸ್ವರ್ಧುನಿ ಜನಕ ಕುಳಿತಾನೆ ೨

ರಂಗವಲ್ಲಿ ಹಾಕಿದ ಶೃಂಗಾರದ ಮನೆಯೊಳು
ಬಂಗಾರದ ಮಣಿಯ ಹರಿವಾಣ
ಬಂಗಾರದ ಮಣಿಯ ಹರಿವಾಣ ಇದ್ದಲ್ಲೆ
ರಂಗಯ್ಯ ಬಂದು ಕುಳಿತಾನೆ ೩

ವೀತದೋಷನ ಮುಂದೆ ಮಾತಿನ
ಮಧುರೆಯರು ಜಾತಿ ಮಾಣಿಕದ ಸಮೆ
ಜಾತಿ ಮಾಣಿಕದ ಸಮೆ ತಂದಿಟ್ಟು
ಜ್ಯೋತಿಗಳ ಹಚ್ಚಿ ಎಡಬಲ ೪

ಮಂದಗಮನೆಯರೆಲ್ಲ ಮಿಂದು ಮಡಿಯನುಟ್ಟು
ಇಂದಿರಾಪತಿಯ ಎಲೆಯಲಿ
ಇಂದಿರಾಪತಿಯ ಎಲೆಯಲಿ ಬಡಿಸೋರು
ಕುಂದದೆ ಕೊಟ್ಟ ಸೌಭಾಗ್ಯ ೫

ಬಂದ ಜನರೆಲ್ಲ ಮಿಂದು ಮಡಿಯನುಟ್ಟು
ಇಂದಿರಾಪತಿಯ ಜೊತೆಯಾಗಿ
ಇಂದಿರಾಪತಿಯ ಜೊತೆಯಾಗಿ ಊಟಕ್ಕೆ
ಬಂದು ಕುಳಿತವರು ಕಡೆಯಿಲ್ಲ ೬

ಉಪ್ಪು ಉಪ್ಪಿನಕಾಯಿ ಹಪ್ಪಳ ಸಂಡಿಗೆ
ಒಪ್ಪುವ ಬುತ್ತಿ ಕಲಸನ್ನ
ಒಪ್ಪುವ ಬುತ್ತಿ ಕಲಸನ್ನ ಬಡಿಸೋರು
ಸುಪ್ಪಾಣಿ ಮುತ್ತು ಉದುರುತ ೭

ಹೊನ್ನಹರಿವಾಣದಿ ಅನ್ನಭಕ್ಷ್ಯವ ತುಂಬಿ
ಚೆನ್ನರಾಮೇಶನ ಎಡೆಯೊಳು
ಚೆನ್ನರಾಮೇಶನ ಎಡೆಯೊಳು ಬಡಿಸೋರು
ರನ್ನ ಮುತ್ತುಗಳು ಉದುರುತ ೮

## ೩೮

ಭಾಳೆ ಗಾಬರಿಗೊಂಡಳು ಇಂದಿರಾದೇವಿ
ಭಾಳೆ ಗಾಬರಿಗೊಂಡಳು
ವ್ಯಾಲಾಶಯನನು ಇವಳ ಪೇಳಿದಂತಿರಲು
ಏನು ಬಾಳು ಯಾತಕೆ ಎಂದಳು ಪ.

ಸಂಡಿಗೆ ಹಪ್ಪಳ ಮಂಡಗಿ ಗುಳ್ಳೋರಿಗೆ
ದಿಂಡು ಸೂರಣವು ಮೊದಲಾಗಿ
ದಿಂಡು ಸೂರಣವು ಮೊದಲಾಗಿ ಬಡಿಸೋರು
ದುಂಡು ಮುತ್ತುಗಳು ಉದುರುತ ೧

ಅಪಾರ ಮಹಿಮಗೆ ರೂಪಸುಂದರಿಯರು
ಸೂಪ ಪರಮಾನ್ನ ಮೊದಲಾಗಿ
ಸೂಪ ಪರಮಾನ್ನ ಮೊದಲಾಗಿ ಬಡಿಸುವವರ
ಭಾಪುರಿ ಮುತ್ತು ಉದುರುತ ೨

ನಾರಿಯರು ತಾವೆಲ್ಲ ಹಾರ ಭಾರಗಳಿಟ್ಟು
ಕ್ಷೀರ ಮಧು ಘೃತ ಮೊದಲಾಗಿ
ಕ್ಷೀರ ಮಧು ಘೃತ ಮೊದಲಾಗಿ ಬಡಿಸುವವರ
ತೋರ ಮುತ್ತುಗಳು ಉದುರುತ ೩

ನಗಧರನ ಪುರದೊಳಗೆ ಹಗಲು ರಾತ್ರಿಯು ಬಂದೆ
ಝಗ ಝಗಿಸುವ ಮಣಿಯು ಖಚಿತದ
ಝಗ ಝಗಿಸುವ ಮಣಿಯು ಖಚಿತವಾದುದರಿಂದ
ಹಗಲು ರಾತ್ರಿಗಳು ತಿಳಿಯವು ೪

ಮಂದ ಗಮನೆಯರೆಲ್ಲ ಮಿಂದು ಮಡಿಯುಟ್ಟು
ಇಂದಿರಾಪತಿಯ ಸರಿಯಾಗಿ
ಇಂದಿರಾಪತಿಯ ಸರಿಯಾಗಿ ಊಟಕ್ಕೆ ಬಂದು
ಕುಳಿತವರು ಕಡೆಯಿಲ್ಲ ೫

ಪುಂಡರಿಕಾಕ್ಷನು ಉಂಡು ಕೈತೊಳೆದನು ದುಂಡು
ಮಲ್ಲಿಗೆಯ ಸೆಳಿಮಂಚ
ದುಂಡು ಮಲ್ಲಿಗೆಯ ಸೆಳಿ ಮಂಚವನೇರಿದ
ಪಾಡವಪ್ರಿಯ ಹರುಷದಿ ೬

ಹದಿನಾರುಸಾವಿರ ಚದುರೆಯರು ಒಂದಾಗಿ
ಚಲುವ ರಾಮೇಶನ ಉಪಚಾರ
ಚಲುವ ರಾಮೇಶನ ಉಪಚಾರ ಮಾಡುವ
ಸುದತೆಯರ ಸುಖಕೆ ಎಣೆಗಾಣೆ ೭

## ೩೯

ಕಡಲಶಯನನ ಪುರದಿ ಬಡವ ರೊಬ್ಬರಿಲ್ಲ
ಪಡೆಯಲಿ ಮುತ್ತು ಅಳೆದಳೆದು ಕೋಲ
ಪಡೆಯಲಿ ಮುತ್ತು ಅಳೆದಳೆದು ರಂಗಯ್ಯ
ಕೊಡವೋನು ದಾನ ಕಡೆಯಿಲ್ಲ ಕೋಲ ೧

ಚಿಂತಾಮಣಿ ಕಾಮಧೇನು ಕಲ್ಪತರು ಎಂಬೊ
ಶ್ರೀಕಾಂತನ ಕೈದಾನಕ್ಕೊಳಗಾಗಿ ಕೋಲ
ಶ್ರೀಕಾಂತನ ಕೈದಾನ ಕ್ಕೊಳಗಾಗಿ ಸ್ವರ್ಗದ
ಅಂತಃ ಪುರದಲ್ಲಿ ಅಡಗಿದವು ಕೋಲ ೨

ಒಂದಕ್ಕೊಂದು ತಾವು ನಿಂತು ಮಾತಾಡುತ
ತಂದೆ ರಾಮೇಶನ ಅರಮನೆಗೆ ಕೋಲ
ತಂದೆ ರಾಮೇಶನ ಅರಮನೆಗೆ ತಾವು
ಹೋಗೋದು ಛಂದಲ್ಲವೆಂದು ಜರಿದಾವು ಕೋಲ ೩

## ೪೦

ಕರವೀರಪುರವ ಸೇರಿದಳು
ಹದಿನಾರು ಸಾವಿರ ನಾರಿಯರ
ಭಾಗ್ಯವ ನೋಡಿ ಸೇರಿದಳು
ಲಕುಮಿ ಜರಿದಾಳು ಪ.

ಶ್ರೀವೈಕುಂಠಕ್ಕೆ ಸರಿಯೆಂದು ದ್ವಾರಕೆ
ಹರಿ ಬ್ರಹ್ಮ ಕೇಳಿ ಹರುಷಾಗಿ
ಹರಿ ಬ್ರಹ್ಮ ಕೇಳಿ ಹರುಷಾಗಿ ತಮ್ಮ ತಮ್ಮ
ಪುರದಿಂದ ಇಳಿದು ಬರುತಾರೆ ೧

ವೃಂದಾರಕರೆಲ್ಲ ಬಂದರು ದ್ವಾರಕೆಗೆ
ಚಂದ್ರ ನೊಬ್ಬ ಬರಲಿಲ್ಲ
ಚಂದ್ರ ತಾನೊಬ್ಬ ಬರಲಿಲ್ಲ ತನ್ನ
ಕಾಂತಿ ಕುಂದೀತೆಂಬೊ ಭಯದಿಂದ ೨

ಸಾರು ದೇವತೆಗಳು ದ್ವಾರಕೆಗೆ ಬರಲು
ಸೂರ್ಯ ತಾನೊಬ್ಬ ಬರಲಿಲ್ಲ
ಸೂರ್ಯ ತಾನೊಬ್ಬ ಬರಲಿಲ್ಲ ತನ್ನ
ತೇಜ ಕುಂದೀತೆಂಬೊ ಭಯದಿಂದ ೩

ಜಾಣ ನಾರದ ತಮ್ಮ ವೀಣೆ
ನುಡಿಸುತ ವಾಣಿ ಮಾವನ ಸ್ತುತಿಸುತ
ವಾಣಿ ಮಾವನ ಸ್ತುತಿಸುತ ತಾ
ಒಂದು ಓಣಿಯ ಹಿಡಿದು ಬರುತಾನೆ ೪

ವಶಿಷ್ಠ ಮೊದಲಾದ ಮಹಾಶಿಷ್ಠರು ಮುನಿಗಳು
ತಮ್ಮ ಕೃಷ್ಣಾಜಿನ ಕಾಷ್ಠ ಸಹಿತಾಗಿ
ಕೃಷ್ಣಾಜಿನ ಕಾಷ್ಠ ಸಹಿತಾಗಿ ಬಂದರು
ಧಿಟ್ಟ ರಾಮೇಶನರಮನೆಗೆ ೫

## ೪೧

ವಿಸ್ತರಿಸಿ ಬರುವನೊ ರುಕ್ಮಿಣಿಗೆ
ಹಸ್ತಕಳ ಕಳಹುವನೊ
ಮಿತ್ರೆ ದ್ರೌಪತಿ ಸುಭದ್ರೆ ಮುಯ್ಯಾ
ಒಯ್ಯೋ ವರ್ತಮಾನವೆಲ್ಲ ಅರುಹೋನು ವಿಸ್ತರಿಸಿ ೧

ಹೇಳದೆ ಹೋಗುವನೊ ಅಥವಾ
ಸುದ್ದಿತಿಳಿಯದೆ ಕಳುಹುವನೊ
ಭಾಳ ಚರ್ಚೆಯ ಮಾತು ಭಾಮೆಯ
ಕಿವಿಗೆ ಬೀಳದಂತೆ ಕಾಳಿ ಹಿಡಿಸುವನೊ ೨

ಮೊದಲಿಗೆ ಅರುಹುವನೊ ಅಥವಾ
ಬೆದರದೆ ನಗುವನೊ
ಮದಗಜಗಮನೆಯರ ಎದೆ ಧಿಗಿಲೆಂಬಂತೆ
ಚದುರ ಚರ್ಚೆಯ ಡಂಕಿ ಹೊಯ್ಸುವನೊ ೩

ಎಚ್ಚರ ಕಳಹುವನೊ ಅಥವಾ
ನಿದ್ರೆ ಬೆಚ್ಚಲಿ ಹೋಗುವನೊ
ಮತ್ತನೇತ್ರಿಯರ ಮನಕೆ ನಡುವಂತೆ
ಚರ್ಚೆಮಾತಿನ ಭೇರಿ ಹೊಯ್ಸುವನೊ ೪

ದಾಸಿಯ ಕಳಹುವನೊ ಅಥವಾ
ಕಂಡು ಹಾಸ್ಯವ ಮಾಡುವನೊ
ಮೋಸಗೊಳಿಸಿ ಆಭಾಸ ಉಕ್ತಿಗಳಿಂದ
ಆಕಾಶವಾಣಿಯಿಂದ ನುಡಿಸುವನೊ ೫

ಅರಿಯದೆ ಹೋಗುವನೊ ಅಥವಾ
ಮೈಮರೆಯದೆ ನಗುವನೊ
ಶ್ರೀಶರಾಮೇಶನರಸನ ಸತಿಯರ ಚರ್ಚಿಸಿ
ಹರುಷಮಾಡಿ ಹರಿಯು ಬರುವನೊ ೬

## ೪೨

ಬರತಾರಂತ್ಹೇಳೆ
ಹರಿಪಾದ ದರ್ಶನಕೆ
ತ್ವರಿತದಿ ಪಾಂಡವರು ಪ.

ಹದಿನಾಲ್ಕು ಲೋಕದ ಪದುಮಗಂಧಿಯರೆಲ್ಲ
ಮದನನಯ್ಯನ ಮನೆನೋಡಲು
ಮದನನಯ್ಯನ ಮನೆನೋಡೋ ವ್ಯಾಜ್ಯದಿ
ಮುದದಿಂದ ಮುಯ್ಯ ತರುತಾರೆ ೧

ಸುರನಾರಿಯರು ನಾನಾ ಪರಿಯ ಭೂಷಣವನಿಟ್ಟು
ಹರಿಯ ಮನೆ ನೋಡೋ ಹರುಷದಿ
ಹರಿಯ ಮನೆ ನೋಡೋ ಹರುಷದಿ ಮುಯ್ಯವ
ತರತಾರೆ ತಾವು ತವಕದಿ ೨

ನಾರಿಯರೆಲ್ಲರು ನಾನಾ ವಸ್ತಗಳಿಟ್ಟು
ಸಾರಾವಳಿಗಳ ನಿರಿದುಟ್ಟು
ಸಾರಾವಳಿಗಳ ನಿರಿದುಟ್ಟು ಹೊರಡೆ ಸೂರ್ಯ
ಮುಳಗಿದನೆ ಆಕಾಶದಲಿ ೩

ಅಕ್ಕತಂಗಿಯರು ತಾವು ಚಕ್ಕನೆ ವಸ್ತಗಳಿಟ್ಟು
ಮಕ್ಕಳಿಗೆ ಬಾಲ್ಯ ಉಡಿಗೆಯಿಟ್ಟು
ಮಕ್ಕಳಿಗೆ ಬಾಲ್ಯ ಉಡಿಗೆಯಿಟ್ಟು ಹೊರಡಲು
ಅರ್ಕ ಮುಳುಗಿದ ಆಗಸದಿ ೪

ಮಂದ ಗಮನೆಯರೆಲ್ಲ ತುಂಬಿದೊಸ್ತಗಳಿಟ್ಟು
ಕಂದರಿಗೆ ಬಾಲರ ಉಡುಗೆ ಇಟ್ಟು
ಕಂದರಿಗೆ ಬಾಲರ ಉಡುಗೆಯಿಟ್ಟು ಹೊರಡಲು
ಚಂದ್ರಜ್ಯೋತಿಗಳು ಹಿಡಿದಾವೆ ೫

ಸುಮನಸೆಯರೆಲ್ಲ ಯಮುನಾದೇವಿಯ ದಾಟಿ
ಧಿಮಿ ಧಿಮಿ ಭೇರಿ ಹೊಯಿಸುತ
ಧಿಮಿ ಧಿಮಿ ಭೇರಿ ಹೊಯಿಸುತ ಬರುವಾಗ
ಭುವನದ ಬೆಳಕು ಹರವಿತು ೬

ಅಂಬರಕೆ ತುಳುಕುವ ಅಂಬಾರಿ ಆನೆಗಳು
ಕುಂಭಿಣಿ ಜಡಿದು ಬರತಾವೆ
ಕುಂಭಿಣಿ ಜಡಿದು ಬರತಾವೆ ರಾಮೇಶನ
ಪದಾಂಬುಜ ನೋಡೊ ಭರದಿಂದ ೭

## ೪೩

ಯಾರು ಬಂದರೊ
ನಮ್ಮ ದ್ವಾರಕೆಯೊಳಗಿಂದು
ಭೋರೆಂಬೊ ಕಾಳಿ ಹಿಡಿಸುತ ರಮಣಿ ಪ.

ಮುತ್ತಿನ ತುರಾಯಿಯವರು ಹತ್ತಿವಾಜಿ
ಮ್ಯಾಲೆ ಚಿತ್ತ ಚಲಿಸದಲೆ ಬರತಾರೆ
ಚಿತ್ತ ಚಲಿಸದಲೆ ಬರತಾರೆ
ರುಕ್ಮಿಣಿ ಅಚ್ಯುತನ ನೋಡೊ ಭರದಿಂದ ರಮಣಿ ೧

ರಥಿಕಾ ರಥಿಕರು ತಮ್ಮ ರಥವ ಮುಂದಕ್ಕೆ ಹಾಕಿ
ಅತಿ ವೇಗದಿಂದ ಬರುತಾರೆ ರಮಣಿ
ಅತಿ ವೇಗದಿಂದ ಬರುತಾರೆ ದೇವಕಿಯ
ಸುತ ನಂಘ್ರಿನೋಡೊ ಭರದಿಂದ ರಮಣಿ ೨

ನಲ್ಲೆಯರು ಮುತ್ತಿನ ಪಲ್ಲಕ್ಕಿ ಮಂದಕೆ ಹಾಕಿ
ನಿಲ್ಲದಲೆ ಬೇಗ ಬರತಾರೆ
ನಿಲ್ಲದಲೆ ಬೇಗ ಬರತಾರೆ ಲಕ್ಷ್ಮಿ
ವಲ್ಲಭನ ನೋಡೊ ಭರದಿಂದ ೩

ತೇರಿನ ಬೀದಿಲೆ ಭೋರೆಂಬೊ ರಭಸಿಗೆ
ಊರಜನವೆಲ್ಲ ಬೆರಗಾಗಿ
ಊರಜನವೆಲ್ಲ ಬೆರಗಾಗಿ
ಉಪ್ಪರಗಿ ಏರಿ ನೋಡುವವರು ಕಡೆಯಿಲ್ಲ ೪

ಬೀಡುಬಿಟ್ಟಿದ್ದ ಬೈಲು ಗಾಡಿ ಏರಿದವರು
ಓಡಿಸಿ ಬೇಗ ಬರತಾರೆ
ಓಡಿಸಿ ಬೇಗ ಬರತಾರೆ
ಹರಿಪಾದ ನೋಡಬೇಕೆಂಬ ಭರದಿಂದ ೫

ಮದ್ದು ಬಾಣಬಿರಸು ರಥಿಣಿ
ರಭಸಿಗೆ ಎದ್ದು ಜನೆರೆಲ್ಲ ಬೆರಗಾಗಿ
ಎದ್ದು ಜನೆರೆಲ್ಲ ಬೆರಗಾಗಿ ಮುಯ್ಯದ
ಸುದ್ದಿ ಕೇಳುವರು ಹರುಷದಿ ೬

ಮಿತ್ರಿ ತಿಲೋತ್ತಮಾ ಮತ್ತೆಮೇನಕೆಯರು
ಥೈ ಥೈ ಎಂದು ಕುಣಿಯುತ
ಥೈ ಥೈ ಎಂದು ಕುಣಿಯುತ ಬರುವಾಗ
ಹತ್ತು ದಿಕ್ಕುಗಳು ಬೆಳಗೋವೆ ೭

ರಂಭೆ ಊರ್ವಸಿಯರು ಸಂಭ್ರಮದಿ ಕುಣಿಯಲು
ತುಂಬಿತು ನಾದ ಧರೆಯೊಳು
ತುಂಬಿತು ನಾದ ಧರೆಯೊಳು
ರುಕ್ಮಿಣಿ ಬಂದವರಾರೆಂದು ಬೆರಗಾಗಿ ರಮಣಿ ೮

ಪಚ್ಚೆ ವಜ್ರ ಹಚ್ಚಿದ ಮನೆಗಳು
ಜತ್ತು ದೀವಿಗೆಯ ಸೊಬಗಿನ
ಜತ್ತು ದೀವಿಗೆಯ ಸೊಬಗಿನ ಮನೆಯೊಳು
ಮಿತ್ರೆಯರು ನೋಡಿ ಬೆರಗಾಗಿ ೯

ಕುಂದಣ ರಚಿಸಿದ ಅಂದಣವನೇರಿಕೊಂಡು
ಸಂದಣಿಸಿ ಬೇಗ ಬರುತಾರೆ
ಸಂದಣಿಸಿ ಬೇಗ ಬರುತಾರೆ
ನಮ್ಮ ಮುಕುಂದನ ಮನೆ ಎದುರಿಗೆ ೧೦

ಧೀರ ಧೀರರು ತಮ್ಮ ತೇರು ವಾಜಿಯ ಇಳಿದು
ವೀರ ರಾಮೇಶನ ಮನೆ ಮುಂದೆ
ವೀರ ರಾಮೇಶನ ಮನೆ ಮುಂದೆ ಹೇಳಲಿ
ನಾರಿ ಒಬ್ಬಳನ ಕಳುಹೆಂದ ರಮಣಿ ೧೧

## ೪೪

ಈ ಸುದ್ದಿ ಹೇಳಮ್ಮ
ಇಂದಿರೇಶಗೆ ಹೋಗಿ
ಶ್ರೀಶನ ತಂಗಿಯರು ಮುಯ್ಯಾ
ಸೋಸಿಲೆ ತಂದರೆಂದು ಪ.

ಸತ್ಯ ಲೋಕದ ದೊರೆಯು
ತಾನು ಮತ್ತೆ ಪಾಂಡವರ ಕೂಡಿ
ಅರ್ಥಿಲೆ ಬಂದು ಇಳಿದಾರೆಂದು
ಸತ್ಯಭಾಮೆಯ ರಮಣಗೆ ೧

ಸ್ವರ್ಗದರಸು ಭೀಮರಾಯನ ಅಗ್ರಜ
ಅನುಜರ ಕೂಡಿ ಶೀಘ್ರದಿ
ಬಂದಿಳಿದಾರೆಂದು
ರುಕ್ಮಿಣಿ ರಮಣಗೆ ೨

ವೈವಸ್ವತನು ರಾಮೇಶನ
ವೈಭವವ ನೋಡುವೆನೆಂದು
ತಾವಿಭವ ಸಹಿತ ಬಂದು
ದೇವಾಧಿ ದೇವನ ಮುಂದೆ ೩

## ೪೫

ತರುತಾರೆಂದು ತಿಳಿಯೆ ತವಕದಿ
ಬಾಳೆಯಸುಳಿಯೆ
ಚಂದಿರನಂತೆ ಹೊಳೆಯುತ
ಲೋಕ ಸುಂದರಿ
ಭೃಂಗ ಕುಂತಳೆಯರು ಮುಯ್ಯ ತಂದಾರೆಂದು ಪ.

ಅಂದದ ವಸ್ತವಧರಿಸಿ ದೂತೆ
ಚಂದದ ಸೀರೆ ಶೃಂಗರಿಸಿ
ಇಂದಿರೇಶಗೆ ನಮಸ್ಕರಿಸಿ
ತಾನು ಬಂದಾಳೆ ದ್ರೌಪತಿ ಸ್ಮರಿಸಿ ೧

ಬಾಗಿಲಿಗೆ ಬಂದಾಳು ನೋಡಿ
ದ್ವಾರಪಾಲಕಗೆ ಉಚಿತವ ಹೇಳಿ
ಹೊನ್ನುಂಗುರಆತಗೆ ನೀಡಿ
ಒಳಗೆ ಪೋದಳು ಹರಿಯ ಕೊಂಡಾಡಿ ೨

ವಂದಿಸಿ ಯದುನಾಥನಡಿಗೆ
ಮಂದಹಾಸವ ಬೀರಿ
ದೂತೆಯಡೆಗೆ
ಬಂದಾರ್ಯವರೆಂಬೊ ನುಡಿಗೆ
ಆನಂದ ಬಟ್ಟ ಕೃಷ್ಣ ಬ್ಯಾಗನೆ ೩

ವೇಗದಿ ರುಕ್ಮಿಣಿಗೆ
ಬಾಗಿ ಸುದ್ದಿ ಹೇಳಿ
ಮುಯ್ಯದ ಬಗಿ ಬಗಿ
ನಾಗವೇಣಿಯು ಹರುಷಾಗಿ
ಕರೆಯ ಬರತೇವಂತ್ಹೇಳೆ ಹೋಗಿ ೪

ಸತ್ಯಭಾಮೆಗೆ ಶರಣೆಂದು
ಕೃಷ್ಣ ತರತಾಳೆ ಮುಯ್ಯಾವೆಂದು
ಅರ್ಥಿ ವಿನೋದಾ ಒಂದೊಂದು
ಹೊನ್ನ ಪುತ್ಥಳಿ ಮನಕೆ ತಾರೆಂದು ೫

ಗುರ್ತು ಹೇಳುವೆ ಕೇಳೊ ದೊರೆಯೆ ಕೃಷ್ಣ
ಚರ್ಚೆ ಮಾತಿನ ಚಮತ್ಕಾರಿಯೆ
ಶೃತ್ಯರ್ಥದಾ ಮಳೆಗರಿಯೆ
ಪ್ರತಿಯುತ್ತರವ
ಕೊಡೋದು ಮರಿಯೆ ೬

ಕೋಕಿಲ ಸ್ವರದಂತೆ ಅಳಕು ಹರುಷಾಗಿ
ರಾಮೇಶಗ್ಹಾಕಿ ಮಲಕು
ಆಗಮಾ ತರತಾಳೆ ಮಲಕು
ಎಲ್ಲಾ ನಾರಿಯರು ಅಕೆಗೆ ಅಳಕು ೭

## ೪೬

ಬರತಾರಂತ್ಹೇಳೆ ಬಾಲೆ
ಕರೆಯಲು
ಬಾಯಿಮಾತಿನಲೆ
ಬರತಾರಂತ್ಹೇಳೆ ಪ.

ರಂಗನ ಪಾದಕಮಲ ಭೃಂಗಳೆ ದ್ರೌಪದಿ
ಮಂಗಳಾದೇವಿ ರುಕ್ಮಿಣಿ ಸಖಿಯೆ
ಮಂಗಳಾದೇವಿ ರುಕ್ಮಿಣಿ ಕರೆಯಲು
ಅಂಗಳದೊಳಗೆ ಬರುತಾಳೆ ಸಖಿಯೆ ೧

ಇಂದಿರೇಶನೆಂಬೊ ಚಂದ್ರಗೆ
ಚಕೋರ ಕುಂದದಂಥವಳ ಸುಭದ್ರಾ ಸಖಿಯೆ

ಕುಂದದಂಥವಳೆ ಸುಭದ್ರೆ ಕರೆಯಲೆ
ಬಂದಳು ಭಾಮೆ ಎದುರಲಿ ಸಖಿಯೆ ೨

ನಗ ಧರನ ಮುಖವೆಂಬೊ ಮುಗಿಲಿಗೆ
ನವಿಲಸುಗಣಿರೈವರ ಮಡದಿಯರು
ಸುಗುಣರೈವರ ಮಡದಿಯರು ಕರೆಯಲು
ಮೂರ್ಜಗದ ಮೋಹನೆಯರು ಬರ್ತಾರೆ ಸಖಿಯೆ ೩

ಹರಿಯಾಗ್ರಜ ತನ್ನ ಹಿರಿಯರ ಕೂಡಿಕೊಂಡು
ಬರುವನು ಪರಮ ಹರುಷದಿ ಸಖಿಯೆ
ಬರುವನು ಪರಮ ಹರುಷದಿ ಈ ಮಾತು
ದೊರೆಗಳಿಗೆ ಹೇಳೆ ವಿನಯದಿ ಸಖಿಯೆ ೪

ಎಲ್ಲರೂ ಮುತ್ತುರತ್ನ ಝುಲ್ಲಿ ವಸ್ತ್ರಗಳಿಟ್ಟು
ಚಲುವ ಪ್ರದ್ಯುಮ್ನನ ಒಡಗೂಡಿ ಸಖಿಯೆ
ಚಲುವ ಪ್ರದ್ಯುಮ್ನನ ಒಡಗೂಡಿ ಐವರಿಗೆ
ಮಲ್ಲಿಗೆ ತೂರಾಡಿ ಕರೆಯಲಿ ಸಖಿಯೆ ೫

ಅಷ್ಟೂರು ಬಗೆಬಗೆ ಪಟ್ಟಾವಳಿಯನುಟ್ಟು
ಧಿಟ್ಟ ಸಾಂಬನ ಒಡಗೂಡಿ
ಧಿಟ್ಟ ಸಾಂಬನ ಒಡಗೂಡಿ ಐವರಿಗೆ
ಬುಕ್ಕಿಟ್ಟು ತೊರ್‍ಯಾಡಿ ಕರೆಯಲಿ ಸಖಿಯೆ ೬

ಆನೆ ಅಂಬಾರಿ ಲಕ್ಷವಿನೆಂಬೆ ಹಿಡಿದೇಜಿ
ಭಾನು ಮಾನಿನಿ ಸಹಿತಾಗಿ ಸಖಿಯೆ
ಭಾನು ಮಾನಿನಿ ಸಹಿತಾಗಿ ರಮಿಅರಸು
ಮಾನದಲಿ ಐವರನ ಕರೆಸುವ ಸಖಿಯೆ ೭

## ೪೭

ಕೋಲ ನವರಂಗದ ಕೋಲ
ನಳನಳಿಸುವಕೋಲ
ಶ್ರೀಲೋಲನೆಂದು ಹೊಗಳುವ ಕೋಲ ಪ.

ಛತ್ರ ಚಾಮರ ವಿಚಿತ್ರದ ಬಾಣ ಬಿರಸು
ನೃತ್ಯವಾದ್ಯಗಳು ಹೊಗಳುವ
ನೃತ್ಯವಾದ್ಯಗಳು ಹೊಗಳುವ ಬಂಧಿಗಳಿಂದ
ಅರ್ಥಿಲೆ ನಿಮ್ಮ ಕರೆಸುವ ಕೋಲ ೧

ಶಂಕಿನಿ ಪದ್ಮಿನಿಯರು ಕುಂಕುಮ ಅರಿಷಿಣವ
ಪಿಡಿದು ಪಂಕಜನಾಭನೆದುರಿಗೆ ಕೋಲ
ಪಂಕಜನಾಭನೆದುರಿಗೆ ಕರೆಯಲು
ಅಲಂಕಾರವಾಗಿ ಬರುತಾರೆ ಕೋಲ ೨

ಗಂಧ ಕೇಶರದ ಚಂದದೋಕುಳಿ ತುಂಬಿ
ಮಂದಗಮನೆಯರು ಹಿಡಕೊಂಡು
ಮಂದಗಮನೆಯರು ಹಿಡಕೊಂಡು ಐವರಿಗೆ
ಬಂದು ನಿವಾಳಿ ತೆಗಿಸುವೆವು ಕೋಲ ೩

ಚಿತ್ತಜನಯ್ಯಗ ಮಿತ್ರೆಯರು ಕರೆಯಲು
ಮುತ್ತಿನಾರತಿಯ ಹಿಡಕೊಂಡು
ಮುತ್ತಿನಾರತಿಯ ಹಿಡಕೊಂಡು ಐವರಿಗೆ
ಎತ್ತಬೇಕೆಂಬೊ ಭರದಿಂದ ಕೋಲ ೪

ಹರದೆಯರು ಮುತ್ತಿನ ಸರಗಳ ಅಲುಗುತ
ಕರದಲ್ಲಿ ಅರಳು ಫಲಗಳು ಕೋಲ
ಕರದಲ್ಲಿ ಅರಳು ಫಲಗಳು ಐವರಿಗೆ
ಭರದಿಂದ ಸೂರ್‍ಯಾಡಿ ಬರತೇವ ಕೋಲ ೫

ರಥ ಕುದುರೆಗಳೆಷ್ಟು ರಥಿಕರು ಸೊಬಗೆಷ್ಟು
ರತಿಯಿಟ್ಟು ನೋಡೊ ಜನರೆಷ್ಟು ಕೋಲ
ರತಿಯಿಟ್ಟು ನೋಡೊ ಸೊಬಗೆಷ್ಟು ಸಖಿಯೆ
ನಮ್ಮ ಅತಿಶಯವಾದ ಸೊಬಗೆಷ್ಟು ಕೋಲ ೬

ವೀರ ರಾಮೇಶನು ಭೇರಿ ದುಂಧುಭಿ ಹೊಯ್ಸಿ
ಘೋರೆಂಬೊ ಕಾಳಿ ಹಿಡಿಸುತ
ಘೋರೆಂಬೊ ಕಾಳಿ ಹಿಡಿಸುತ ಐವರ
ವಾರಿಜನಾಭ ಕರೆಸುವ ಕೋಲ ೭

## ೪೮

ಎಲ್ಲ ವಾರ್ತೆಯ ಹೇಳ ಮನ್ನಿಸಿ
ನಮ್ಮ ಫುಲ್ಲನಾಭನ ಗುಣ ವರ್ಣಿಸಿ ದೂತೆ ಪ.

ಗೆಜ್ಜೆ ಘಿಲ ಘಿಲಕೆಂದು ಬಂದಳು ದೂತೆ
ಗುಜ್ಜಿ ದ್ರೌಪತಿಗೆರಗಿ ನಿಂತಳು
ನಮ್ಮ ಅರ್ಜುನಗೆ ಅತಿ ದಯವೆಂದಳು
ನಿರ್ಜರೇಶನ ಕಂಡೆನೆಂದಳು ೧

ಕಳಕಳಿಯ ಸೂಸುತ ತನ್ನ ಥಳ ಥಳ
ಮುಖಕಮಲ ಹೊಳೆವುತದೂತೆ
ನಳಿನ ತೋಳಿನ ವಸ್ತ್ರ ಝಳ ಝಳಿಸುತ
ಬಂದು ಕುಳಿತಳೆ ಮಾತಿನ ಚಪಲೆ ೨

ನಡೆದು ಅಚ್ಯುತನಲ್ಲೆ ಹೋದೆಯಾ ಕೃಷ್ಣನ
ಅಡಿಗೆರಗಿ ಮುಖ ನೋಡಿದೆಯ
ನಯ ನುಡಿಯ ಮಾತುಗಳನೆ ಆಡಿದೆಯ
ನಿಮ್ಮ ಒಡೆಯರ ಭಕುತಿ ಕೊಂಡಾಡಿದೆಯ ದೂತೆ ೩

ಶಾಂತ ಮೂರುತಿ ನಿನ್ನ ನೋಡಿದನೇನ
ಐವರಿಗೆ ಅಂತಃಕರುಣ ಭಾಳ ಮಾಡಿದನೇನ
ಎನ್ನ ಅಂತರಂಗದ ಮಾತು ನುಡಿದೆಯೇನ
ಲಕ್ಷ್ಮಿಕಾಂತನ ಗುಣ ಕೊಂಡಾಡಿದೆಯ ದೂತೆ ೪

ಎನ್ನ ದ್ರೌಪತಿ ಕಳುಹ್ಯಾಳೆಂದೇನೆ ಸ್ವಾಮಿ
ನಿನ್ನ ಮಾತುಗಳ ಮನಕೆ ತಂದಾನೇನ
ಕೃಷ್ಣ ಎನ್ನ ಪ್ರಾಣವು ಐವರದೆಂದನೇನ
ಇನ್ನುದಯದ ಸುಗ್ಗಿ ಸುದ್ದಿ ತಂದೇನ ದೂತೆ ೫

ಭಾವೆ ರುಕ್ಮಿಣಿಪಾದ ನೋಡಿದೆಯ ನೀನು
ಭಾವ ಭಕುತಿಯಲಿ ವಂದನೆ ಮಾಡಿದೆಯ
ನಿಮ್ಮ ಮೋಹ ದ್ರೌಪತಿಗಿರಲಂದೆಯ
ಮುಯ್ಯಾ ತಾಹೊ ವಿಸ್ತಾರವ ಕೊಂಡಾಡಿದೆಯ ೬

ನೀಲವರ್ಣನ ಪಾದ ಕಂಡೆಯ
ಘೃತ ಹಾಲು ಸಕ್ಕರೆ ಸವಿದುಂಡೆಯ
ವಸ್ತ್ರ ವೀಳ್ಯ ರಾಮೇಶನಿಂದ ಕೊಂಡೆಯ
ನಿನ್ನ ಕಣ್ಣು ಹಬ್ಬವ ಮಾಡಿಕೊಂಡೇನ ದೂತೆ ೭

## ೪೯

ಎಷ್ಟೆಂದು ಹೇಳಲಮ್ಮಯ್ಯ
ಕೃಷ್ಣನ ದಯವ
ದಿಟ್ಟ ಪಾಂಡವರಲ್ಲೆ
ಪ್ರಾಣ ಇಟ್ಟುಕೊಂಡಿಹನಮ್ಮ ಪ.

ನೀರಜಾಕ್ಷಗೆ ನಮಿಸಿ ವೀರರೈವರು
ಮಹಾದ್ವಾರದಲ್ಲಿ ಹೋರೆಂದು ಸಾರಿ ಹೇಳಿದೆನಮ್ಮ

ಮಾರನಯ್ಯನ ಪಿತನ ಮೋರೆ ನೋಡುತಲಿ
ತೀವ್ರ ಕರೆತಾರೆ ಮುತ್ತಿನ ಹಾರ ನಿನಗೆ ಈವೆನೆಂದ ೧

ಇಂದು ಮುಖಿಗೆ ನಾನು ವಂದಿಸಿ ಐವರು
ಹೊರಗೆ ಬಂದಾರೆ ಹೀಗೆಂದೆ ನಮ್ಮಯ್ಯ
ಮಂದಹಾಸನು ದಯದಿಂದ ನೋಡುತಲೆನ್ನ
ತಂದು ತೋರಮ್ಮ ತೋಳಬಂದಿ ನಿನಗೀವೆನೆಂದ ೨

ಪುಟ್ಟಸುಭದ್ರೆ ಪಾಂಡವರ ಪಟ್ಟದರಾಣಿ ದ್ರೌಪತಿ
ಅಷ್ಟೂರೂ ಬಂದಾರೆಂಬೊ ಉತ್ಕೃಷ್ಟ ಹೇಳಿದೆನಮ್ಮ
ತುಷ್ಟನಾಗಿ ರಮಿಯರಸು ಥಟ್ಟನೆ ಕರೆತಾರೆಂದು
ಕೊಟ್ಟು ವೀಳ್ಯವ ದಯದ ವೃಷ್ಟಿಗರೆದನಮ್ಮ ೩

## ೫೦

ನೀರಜಾಕ್ಷನ ಪಾದ ಚಾರು ಕಲ್ಪತರು ಸೇರಿ
ಸುಖಿಸುವ ನಮ್ಮ ರಾಯ ಪರಾಕು ಪ.

ವೇದ ತಂದಾತನ ಪಾದವ ಕಂಡು ಬಂದೆ
ಮೋದವಾದನು ಸಹದೇವ ಪರಾಕು ೧

ರುಕ್ಮಿಣಿ ಅರಸಗೆ ಸಕಲವು ಅರಿವಿದೆ
ಭಕುತರ ತೋರೆಂದು ನಕುಲ ಪರಾಕು ೨

ಕೀರ್ತಿವಂತನ ದಿವ್ಯ ಮೂರ್ತಿಯ ಕಂಡು ಬಂದೆ
ಪ್ರೀತಿ ಮಾಡಿದ ನಮಗೆ ಪಾರ್ಥ ಪರಾಕು ೩

ಶಾಮ ವರ್ಣನ ಪಾದ ಕಾಮಿಸಿ ಕಂಡುಬಂದೆ
ಪ್ರೇಮ ಮಾಡಿದನಮಗೆ ಭೀಮ ಪರಾಕು ೪

ರಮ್ಮಿಯರಸನ ಪಾದ ಜುಮ್ಮನೆ ಕಂಡು ಬಂದೆ
ನಿಮ್ಮ ಧ್ಯಾನದಲೆ ಇರುವ ಧರ್ಮ ಪರಾಕು ೫

## ೫೧

ಅರ್ಥಿಲೊಂದು ಹೇಳುವೆನಮ್ಮ
ಅಲ್ಲಿವಾರ್ತೆಯ
ಚಿತ್ತಗೊಟ್ಟು ಕೇಳ ತಾಯಿ
ಅವರ ಕೀರ್ತಿಯ ಪ.

ಹೋಗಿ ನಾನು ನಾಗವೇಣಿಯರ ಬಾಗಿಲು ಹೊಕ್ಕೆನು
ಸಾಗರಶಯನ ಮಂಚವೇರಲು ಧಕ್ಕನೆ ನಿಂತೆನು ೧

ಮರ್‍ಯಾದಿಲೆ ಹರಿಯ ಮನೆ ಬಾಗಿಲು ಮರೆಯಲಿ ನಿಂತೆನು
ಸಿರಿಯರಸು ಸತಿಯರಿಂದ ಬೆರೆದು ಕುಳಿತೆ ೨

ಫುಲ್ಲನಾಭನು ಮಲ್ಲಿಗೆ ಮಂಚದೊಳಿರುತಿರೆ
ವಲ್ಲಭೆಯರಿಬ್ಬರು ಗಂಧಪೂಸಿ ಅಲ್ಲೆ ಕುಳಿತಿಹರು ೩

ವನಜನಾಭಗೆ ಪುನಗು ಜಾಜಿ ವನಿತೆಯರು ಹಚ್ಚುತಿಹರು
ಪುನಗು ಕಸ್ತೂರಿ ಬೊಟ್ಟು ಮಾನಿನಿಯರು ಇಡುತಿಹರು ೪

ನೀರ ಜಾಕ್ಷಗೆ ಥೋರ ಮಲ್ಲಿಗೆಹಾರ ಹಾಕುತ
ಚಾರು ಅಂಗದ ಮ್ಯಾಲೆ ಬುಕ್ಕಿಟ್ಟು ಸೂರಿ ಸುಖಿಸುತ ೫

ಕೃಷ್ಣರಾಯಗೆ ಕೊಟ್ಟು ಅಡಿಕೆ ತುಷ್ಟರಾಗಲಿ
ಪಟ್ಟದ ರಾಣಿಯರಿಬ್ಬರು ಇಟ್ಟರು ತೊಡೆಮೇಲೆ ೬

ಬಟ್ಟನೆ ವೀಳ್ಯ ರುಕ್ಮಿಣಿದೇವಿ ಕೊಟ್ಟೆನೆನುತಲಿ
ಥಟ್ಟನೆ ಕೃಷ್ಣನವದನದಲ್ಲಿ ಇಟ್ಟಾಳು ಭಾವೆ ತಾ ೭

ಭರದಿ ಕೋಪಿಸಿ ರುಕ್ಮಿಣಿದೇವಿ ತೆರೆದುಕಣ್ಣುತಾ
ಹಿರಿಯಳೇನು ಮೊದಲು ಕೊಟ್ಟೆ ವೀಳ್ಯವೆನ್ನುತಲೆ ೮

ಭೂಪ ರಾಮೇಶ ರುಕ್ಮಿಣಿದೇವಿಯ ತಾಪವ ಕಾಣುತ
ಅಪಾರ ಕೋಪವ ಅರಘಳಿಗೆಯಲಿ ಇಳಿಸುವೆನೆಂದು ತಾ ೯

## ೫೨

ಸುಗುಣಿಯರಿಬ್ಬರು ಬಂದು
ಹಗರಣವ ಮಾಡಿದರವ್ವ
ಹಗರಣವ ಮಾಡಿದರವ್ವ
ನಗಧರನ ಮುಂದೆ ನಾಚಿಕೆ ಇಲ್ಲವ್ವ ಪ.

ಸಿಟ್ಟಿಲೆ ತನ್ನೆದೆಯ ಗಟ್ಟಿಸಿದಳವ್ವ
ತಾ ಗಟ್ಟಿಸಿದಳವ್ವ
ಕಷ್ಟದಿ ಭೀಷ್ಮಿಯು
ನಿಟ್ಟುಸಿರು ಹಾಕಿದಳವ್ವ ೧

ಇತ್ತ ದೂತೆಯು ತಾ
ಥಟ್ಟನೆ ಬಂದಳವ್ವ
ತಾ ಥಟ್ಟನೆ ಬಂದಳವ್ವ
ಇಷ್ಟ ಏನೆಂದು ನೆಟ್ಟನೆ ಕೇಳಿದಳವ್ವ ೨

ಎಷ್ಟು ಹೇಳಲಿ ಈಕೆ
ಎದೆಗಿಚ್ಚಿನವಳವ್ವ
ಭಾವೆ ಎದೆಗಿಚ್ಚಿನವಳವ್ವ
ಕೃಷ್ಣಗೆ ಕರೆದು ಕೊಟ್ಟಳು ವೀಳ್ಯವವ್ವ ೩

ಕೆಟ್ಟ ರುಕ್ಮಿಣಿಯು ಕಲಹಗಾರುತಿಯವ್ವ
ಬಲು ಕಲಹಗಾರುತಿಯವ್ವ

ಅಗ್ಗಿಷ್ಟಿಗೆ ಆದಳು
ಅತಿ ಸಿಟ್ಟಿನ ಹಲಿಯವ್ವ ೪

ಚಿಕ್ಕ ಚೇಳೆಂದು ಬಲು ಅಕ್ಕರೆ ತೋರಿದೆನವ್ವ
ಬಲು ಅಕ್ಕರೆ ತೋರಿದೆನವ್ವ
ಭಾವೆಯ ಉಕ್ಕು
ಹೇಳಲು ಎನಗೆ ಶಕ್ಯ ಇಲ್ಲವ್ವ ೫

ಉರಗ ಹಿರಿಯದೆಂದು ಎರಗೊದೇನವ್ವ
ಅದಕೆ ಎರಗೋದೆನವ್ವ
ಉರವಣಿಗೆ ರುಕ್ಮಿಣಿಯ
ಮುರಿಯಲಿಲ್ಲವ್ವ ೬

ಕೆಂಜಿಗ ಕಚ್ಚಲು ಅಂಜೋರೇನವ್ವ
ಅದಕಂಜುವರೇನವ್ವ
ಭಾವೆಯ ಮಂಜುಳವಾಣಿ
ಮೂಲೆಗೆ ಬೀಳಲೆವ್ವ ೭

ಹದ್ದುಕುಕ್ಕಿದರೆ ಗದ್ದರಿಸೋರೇನವ್ವ
ಅಂಜಿ ಗದ್ದರಿಸುವರೇನವ್ವ
ರುಕ್ಮಿಣಿಯ ಮುದ್ದು ಮಾತುಗಳ
ಸದ್ದಡಗಲಿಲ್ಲವ್ವ ೮

ಒಳ್ಳೆಯವಳಲ್ಲ ಭಾವೆ
ಮುಳ್ಳಿನಂಥವಳವ್ವ
ಬಲುಮುಳ್ಳಿನಂಥವಳವ್ವ
ಇವಳ ತಳ್ಳಿ ಮಾತುಗಳ ತಾಳಲಾರೆನವ್ವ ೯

ಸುಳ್ಳಿ ರುಕ್ಮಿಣಿ ಶೂಲದಂಥವಳವ್ವ
ಬಲು ಶೂಲದಂಥವಳವ್ವ

ಕಳ್ಳ ಮಾತುಗಳೆಷ್ಟು
ಕಲಿತಾಡುವಳವ್ವ ೧೦

ಮಸೆದ ಕತ್ತಿಯಂತೆ ಎಸೆವಳು ಭಾವೆಯವ್ವ
ಬಲು ಎಸೆವಳು ಭಾವೆಯವ್ವ
ಇವಳ ಹೆಸರು ಅಡಗಲಿ
ಎನ್ನ ಉಸಿರು ಮುಟ್ಟಲಿಯವ್ವ ೧೧

ಬಾಲೆ ರುಕ್ಮಿಯು ಶೂಲದಂಥವಳವ್ವ
ಬಲು ಶೂಲದಂಥವಳವ್ವ
ಕಾಲು ಕೆದರಿ
ಎನ ಮ್ಯಾಲೆ ಬಂದಿಹಳವ್ವ ೧೨

ಧರೆಯಲ್ಲಿ ನಾ ಒಬ್ಬಳುಹಿರಿಯಳು ಅಲ್ಲವೇನವ್ವ
ನಾ ಒಬ್ಬಳುಹಿರಿಯಳು ಅಲ್ಲವೇನವ್ವ
ಈ ವೈರಿ ಸವತಿಯು
ಎನ್ನ ಸರಿಯಳೇನವ್ವ ೧೩

ಶ್ರೇಷ್ಠಳಾದರೆ ನೀಉಚಿತವ ಇಟ್ಟುಕೊಳ್ಳವ್ವ
ನೀ ತೊಟ್ಟುಕೊಳ್ಳವ್ವ
ಇಷ್ಟೊಂದು ಸೊಕ್ಕು
ಕಟ್ಟಿಡಿಸುವೆನವ್ವ ೧೪

ಸೊಕ್ಕು ಸೊಕ್ಕೆನಲಿಕ್ಕೆ ತಕ್ಕವಳೇನೆ ಭಾವೆ
ಇವಳು ತಕ್ಕವಳೇನೆ ಭಾವೆ
ಇವಳ ಚಕ್ಕಂದಕ್ಕೆ ಹರಿಯು
ಅಕ್ಕರ ಬಡುವನವ್ವ ೧೫

ಅಕ್ಕಸದ ಮಾತು ಕೇಳಲಾರೆನವ್ವ
ನಾ ಕೇಳಲಾರೆನವ್ವ

ಇವಳ ಉಕ್ಕಸಕೆ ಕೃಷ್ಣ
ಧಕ್ಕನೆ ನಾಚಿದನವ್ವ ೧೬

ಮುಂಜೆರಗು ಹಿಡಿದು ಗುಂಜಿಸಿ ಎಳೆವೆನವ್ವ
ನಾ ಎಳೆವೆನೆವ್ವ
ಪಂಜರದ ಗಿಳಿಯಂತೆ
ಅಂಜಲಿ ಇವಳವ್ವ ೧೭

ಕೈ ಹಿಡಿದು ಕೆಳಗೆ ಎಳೆವೆನವ್ವ
ನಾ ಕೆಳಗೆ ಎಳೆವೆನವ್ವ
ಭಯವೇನವ್ವ ರುಕ್ಮಿಣಿಯ ಭಯವೇನವ್ವ
ಅಯ್ಯೊ ಅಂಜಲ್ಯಾತಕೆ ಸೈ ಸೈಯವ್ವ ೧೮

ಎಷ್ಟು ಘಾತುಕಳೆ ನಷ್ಟಳು ಭಾವೆಯವ್ವ
ಬಲು ನಷ್ಟಳು ಭಾವೆಯವ್ವ
ಕೃಷ್ಣನ ತೊಡೆ
ಬಿಟ್ಟು ಇಳಿಸುವೆನವ್ವ ೧೯

ಭಾಳೆ ಘಾತುಕಳು ರುಕ್ಮಿಣಿಯವ್ವ
ನೀ ಕೇಳೆ ರುಕ್ಮಿಣಿಯವ್ವ
ಗೈಯ್ಯಾಳಿಯ ತೊಡೆ
ಬಿಟ್ಟು ಇಳಿಸುವೆನವ್ವ ೨೦

ಚಂದ್ರನಿಲ್ಲದ ಚಿಕ್ಕೆ ಚಂದವೇನವ್ವ
ಅದು ಚಂದವೇನವ್ವ
ನಿಜಳೆ ಎನ್ನಮ್ಯಾಲೆ
ಬಂದಿಹಳ್ಯಾತಕವ್ವ ೨೧

ದಾರ ಮಲ್ಲಿಗೆ ನಡುವೆ ತೋರಿದಂತವ್ವ
ಅದು ತೋರಿದಂತವ್ವ

ಇವಳ ಹಿರಿತನವೆಲ್ಲವ
ಅರಿಯೆನವ್ವ ೨೨

ಸಿರಿರಮಿ ಅರಸಗೆ ಸರಿಯಿಬ್ಬರು ನೀವವ್ವ
ನೀವು ಸರಿಯಿಬ್ಬರವ್ವ
ಬರಿಯೆ ಕರಕರೆಯ
ಹಿರಿಯರಲ್ಲವ್ವ ೨೩

## ೫೩

ಎಂಥ ಗರವು ನೋಡಮ್ಮಯ್ಯ
ರುಕ್ಮಿಣಿಗೆಂಥ ಗರವು ನೋಡಮ್ಮಯ್ಯ
ಕಂತುನಯ್ಯನ ಎನಗಂತ್ರವ ಮಾಡಿದ
ಮಂತ್ರವ ಮಾಡಿದಳಮ್ಮಯ್ಯ ಪ.

ಹಿಡಿದ ವೀಳ್ಯವ ನಾನು ಕೊಡುವೊ ಸಮಯದಿ
ಬಂದು ಕಿಡಿ ಹಾಕಿದಳು ನೋಡಮ್ಮಯ್ಯ
ಭಾವೆ ಕಿಡಿಯ ಹಾಕಿದಳು ನೋಡಮ್ಮಯ್ಯ
ಹುಡುಗೆ ವೀಳ್ಯಕೆ ಮುಖಕೊಡಬಹುದು
ಕೃಷ್ಣನು ಬಿಡನು ಇವಳದೇನಮ್ಮಯ್ಯ
ಇಂಥ ಭಿಡೆಯು ಇವಳದೇನಮ್ಮಯ್ಯ ೧

ಶ್ರೀಧರನ ಪಾದದಲೆ ಮೋದ ಇಟ್ಟವಳಿಗೆ
ಆದರವಿಲ್ಲ ನೋಡಮ್ಮಯ್ಯ
ಏನೂ ಆದರವಿಲ್ಲ ನೋಡಮ್ಮಯ್ಯ
ಕಾಡುತ ಕೊಟ್ಟ ವೀಳ್ಯವ ಮಾಧವಗೆ
ಕೊಟ್ಟರೆ ಹೋದೀತು ಬುದ್ದಿ ನೋಡಮ್ಮಯ್ಯ
ರುಕ್ಮಿಣಿಯಲ್ಲೆ ಹೋದೀತು ಬುದ್ಧಿ ನೋಡಮ್ಮಯ್ಯ ೨

ಥಾಟು ಥೀಟಿನ ಭಾವೆ
ಮಾಟ ಮಾಡಿದಳೇನಮ್ಮಯ್ಯ
ಬೂಟಕತನ ನೋಡಮ್ಮಯ್ಯ
ಬೂಟಕಗುಣದವಳ ಕೂಟಕೆ ಮೆಚ್ಚಿದ
ಹರಿಯ ಆಟವ ನೋಡಮ್ಮಯ್ಯ
ಮರುಳಾಟವ ಹರಿಯ ನೋಡಮ್ಮಯ್ಯ ೩

ಸೃಷ್ಟ್ಯಾದಿಕರ್ತಗೆ ಇಟ್ಟಳು
ಮದ್ದಾನೆ ಧಿಟ್ಟತನವ ನೋಡಮ್ಮಯ್ಯ
ರುಕ್ಮಿಣಿಯ ದಿಟ್ಟತನವ ನೋಡಮ್ಮಯ್ಯ
ಎಷ್ಟು ಧೈರ್ಯವೆಂದು ಕೃಷ್ಣ
ತಾ ಬೆರಗಾಗಿ ಬಿಟ್ಟನು
ವೀಳ್ಯವ ನೋಡಮ್ಮಯ್ಯ ೪

ವಟಪತ್ರ ಶಾಯಿಗೆ ಕುಟಿಲ ಮಂತ್ರವ
ಮಾಡೊ ಚಟುಲತನ ನೋಡಮ್ಮಯ್ಯ
ಭಾವೆಯ ಚಟುಲತನವ ನೋಡಮ್ಮಯ್ಯ
ಸಟಿಯಲ್ಲ ಇವಳೆದೆ ಕಠಿಣತಿಶಯವೆಂದು
ಮಿಟಿಮಿಟಿ ನೋಡಿದನಮ್ಮಯ್ಯ
ಕೃಷ್ಣ ಮಿಟಿಮಿಟ ನೋಡಿದನಮ್ಮಯ್ಯ ೫

ಭಾಳೆ ದಯಾಳು ಎಂದು ಹೇಳುವ ಶೃತಿಗಳು
ಕೇಳಿ ಆಟವು ನೋಡಮ್ಮಯ್ಯ
ಹರಿಯ ಕೇಳಿ ಆಟವು ನೋಡಮ್ಮಯ್ಯ
ಕಾಳ ಕೂಟವ ಕೈತಾಳವ ಹಿಡಿದಂತೆ
ಆಳುವನಿವಳ ನೋಡಮ್ಮಯ್ಯ
ಕೃಷ್ಣ ಆಳುವನಿವಳ ನೋಡಮ್ಮಯ್ಯ ೬

ಸರ್ವದಾ ತನ್ನ ಕೂಡ ಇರಬೇಕೆಂದೆನುತಲಿ
ಎರೆದಳು ತೈಲವ ನೋಡಮ್ಮಯ್ಯ

ಹರಿಗೆ ಎರೆದಳು ತೈಲವಮ್ಮಯ್ಯ
ಭರದಿ ಕೋಪಿಸಿ ಕಣ್ಣು ತೆರೆದು ನೋಡುವರೆನ್ನ
ಧರಿಸಲಿನ್ನೆಷ್ಟು ನೋಡಮ್ಮಯ್ಯ
ನಾ ಧರಿಸಲಿನ್ನೆಷ್ಟು ನೋಡಮ್ಮಯ್ಯ ೭

ಪುಂಡರೀಕಾಕ್ಷನ ಕೊಂಡಾಡಿ ಸುಖಿಸುವ
ಹೆಂಡಿರು ಕಡಿಮೆಯೇನಮ್ಮಯ್ಯ
ಹರಿಗೆ ಹೆಂಡಿರು ಕಡಿಮೆಯೇನಮ್ಮಯ್ಯ
ಕೆಂಡವ ತುಂಬಿದ ಮಂಡಿ ತೋರಿಸಿದಂತೆ
ಚಂಡಿಯನಾಳುವ ನಮ್ಮಯ್ಯ
ಕೃಷ್ಣ ಚಂಡಿಯನಾಳುವ ನಮ್ಮಯ್ಯ ೮

ಧಿಟ್ಟಿಯರಿಬ್ಬರು ಕೋಪ ಬಿಟ್ಟರೆ ಇವರಿಗೆ
ಎಷ್ಟು ಒಲುಮೆ ನೋಡಮ್ಮಯ್ಯ
ನಾ ಎಷ್ಟು ಒಲುಮೆ ನೋಡಮ್ಮಯ್ಯ
ಧಿಟ್ಟ ರಾಮೇಶನಲೆ ಇಟ್ಟರೆ ಇವರಿಗೆ
ಎಷ್ಟರೆ ಗರ್ವ ನೋಡಮ್ಮಯ್ಯ
ಬೇಡಿದ್ದು ಎಷ್ಟರೆ ಗರ್ವ ನೋಡಮ್ಮಯ್ಯ ೯

## ೫೪

ನಗುವರಲ್ಲವೊ ರಂಗ ನಾಚಿಕೆ ಇಲ್ಲವೊ
ನಿನಗೆ ಹಗೆಯ ಮಾಡಿದವಳ ಬಗೆಯ ಕಾಣೆರಂಗ ಪ.

ಅನ್ಯಾಯ ನ್ಯಾಯವೆಂಬುದಿನ್ನು ನೀ ಅರಿಯೆಲೊ
ಮನ್ನೆಯಳ ವೀಳ್ಯ ಹಿಡಿದೆಯಲ್ಲೊ
ನೀ ಹಿಡಿದೆಯಲ್ಲೊ ರಂಗ ೧

ಭರದಿ ಕೋಪಿಸಿ ಭೀಷ್ಮೆ ತಿಳುವಳಿಕೆ ನಿನಗಿಲ್ಲ
ಹರದೆಯರಿಬ್ಬರು ಎನಗೆ ಸರಿಯರಲ್ಲ
ಎನಗೆ ಸರಿಯರಲ್ಲ ಭೀಷ್ಮೆ ದೂರುವರೇನೆ ೨

ಹೀಂಗೆ ಯಾರೂ ನಗರೇನ ಭೀಷ್ಮೆ
ಇರುವೆಗಿಂತ ಕಡಿ ಮಾಡಿದೆಲ್ಲ
ಎನ್ನ ಕಡಿಮಾಡಿದೆಲ್ಲ ೩

ಅತಿ ಕೋಪದಿಂದ ಭೀಷ್ಮೆ ಸ್ಮೃತಿಯಿಲ್ಲ ನಿನಗಿನ್ನು
ಸತಿಯರಿಬ್ಬರು ಎನಗೆ ಸರಿಯರಲ್ಲ
ಎನಗೆ ಸಮರಲ್ಲ ೪

ಅಕ್ಕ ತಂಗಿಯರೆಂಬೊ ದಿಕ್ಕಿನ ಮೂಲೆಗೆ
ಬೆಕ್ಕಿನಕಿಂತ ಕಡಿ ಮಾಡಿದೆಲ್ಲೊ
ಎನ್ನ ಮಾಡಿದೆಲ್ಲೊ ರಂಗಾ ೫

ವಾರಿಜಾಮುಖಿ ಎನಗೆ ಯಾರು ಹಿರಿಯರು ಹೇಳೆ
ನಾರಿಯರಿಬ್ಬರು ಎನಗೆ ಪೊರರಲ್ಲ
ಎನಗೆ ಪೊರರಲ್ಲ ೬

ಹುಡುಗಿಯರೆಂಬುವನುಡಿಯ ಕೇಳುತ ಭೀಷ್ಮಿ
ಕಡುಹರುಷ ಬಡುತಲೆ ಮನದೊಳಗೆ
ತನ್ನ ಮನದೊಳಗೆ ೭

ಕೃಷ್ಣನ ಮಡದಿಯರು ಎಷ್ಟು ಗುಣವಂತರೆಂದು
ಅಷ್ಟೂರಕ್ಕಿಂತ ಮೊದಲೆ ಮದಿವ್ಯಾದೆ
ನಿಮ್ಮನ್ನು ಮದುವ್ಯಾದೆ ೮

ಸಿಟ್ಟು ಬಿಟ್ಟಿಬ್ಬರು ಕೃಷ್ಣ ನಮ್ಮವನೆನ್ನಿ
ಧಿಟ್ಟ ರಾಮೇಶ ಸಕಲೇಷ್ಟವೆನ್ನಿ
ಸರ್ವೇಷ್ಟವೆನ್ನಿ ೯

## ೫೫

ಬಂದೆನವ್ವ ಭಾವಕಿಯರನ್ನೆ
ತಂದೆನವ್ವ ಕುಶಲವ
ಸಿಂಧುಶಯನನ ಮುಂದೆ
ನಿಂದು ಸುದ್ದಿ ಹೇಳಿದೆನವ್ವ ಪ.

ಹರದೆಯರಿಂದ ಅಚ್ಯುತ ಹರುಷವಾದ ಮ್ಯಾಲವ್ವ
ವರಗಿರಿವಾಸನ ಮುಂದೆ ಕರವ ಮುಗಿದು ಹೇಳಿದೆನವ್ವ ೧

ಮಂದಗಮನೆಯರ ಕೋಪ ಮಂದವಾದ ಮ್ಯಾಲವ್ವ
ಸಿಂಧುಶಯನನ ಮುಂದೆ ನಿಂದು ಸುದ್ದಿ ಹೇಳಿದೆನವ್ವ ೨

ಕಾಂತೆಯರಿಂದ ಅಚ್ಯುತ ಶಾಂತನಾದ ಮ್ಯಾಲವ್ವ
ಇಂತು ರಾಮೇಶನ ಮುಂದೆ ನಿಂದು ಸುದ್ದಿ ಹೇಳಿದೆನವ್ವ ೩

## ೫೬

ದಾರಿ ನೋಡುವನು ರಂಗಯ್ಯ
ನಿಮ್ಮ ದಾರಿ ನೋಡುವನು
ಮುರಾರಿ ಮುದ್ದು ವೈಯ್ಯಾರಿ ನಿನ್ನಯ
ಮಾರಿ ತೋರೆಂದು ದಾರಿ ನೋಡುವನು ಪ.

ಏಳು ಸಾವಿರ ಮನೆಯು ತೆರವೆಂದು ಹೇಳಿದ
ನಿಮಗಾಗಿ ಜಾಳಿಗೆ ಮುತ್ತು ಜಡಿಸೆಂದ
ಜಾಳಿಗೆ ಮುತ್ತು ರಂಗಯ್ಯ ಜಡಿಸೆಂದ
ಪಾಂಡವರ ಆಳು ಮಂದಿಗಳ ತಂದು ಇಳಿಸೆಂದ ೧

ಚಂದದ ಮನೆ ಮುಂದೆ ಮುತ್ತಿನ ಹಂದರ
ಹಾಕೆಂದ ಕುಂದಣ ರತ್ನ ರಚಿಸೆಂದ
ಕುಂದಣ ರತ್ನ ರಚಿಸೆಂದ ರಂಗಯ್ಯ
ಪಾಂಡವರ ಬಂಧುಗಳ ತಂದು ಇಳಿಸೆಂದ ೨

ನೀಲಮೇಘಶ್ಯಾಮ ಮುತ್ತಿನ ಮಹಲು ರಚಿಸೆಂದ
ಮ್ಯಾಲೆ ಮಾಣಿಕವ ರಚಿಸೆಂದ
ಮ್ಯಾಲೆ ಮಾಣಿಕವ ರಚಿಸೆಂದ
ರಂಗಯ್ಯ ಪಾಂಡವರ ಬಾಲಿಯರ ತಂದು ಇಳಿಸೆಂದ ೩

ಮದಗಜನಯ್ಯನು ಮುತ್ತಿನ ಸದನ ವಿಸ್ತರಿಸೆಂದ
ಹದಿನದಿ ರತ್ನ ರಚಸೆಂದ
ಹದಿನದಿ ರತ್ನ ರಚಸೆಂದ ರಂಗಯ್ಯ
ಪಾಂಡವರ ಮುದದಿಂದ ತಂದು ಇಳಿಸೆಂದ ೪

ಚದುರ ರಾಮೇಶನು ಮಡದಿಯರೆದುರಿಗೆ
ಮುದದಿ ದ್ರೌಪತಿಯ ಕರೆಯೆಂದ
ಮುದದಿ ದ್ರೌಪತಿಯ ರಂಗಯ್ಯ ಕರೆಯೆಂದ
ವಜ್ರದ ಸದನದಿ ತಂದು ಇಳಿಸೆಂದ ೫

## ೫೭

ವರಗಿರಿವಾಸನ ಅರಮನೆ ಸೊಬಗನೆ
ದೊರೆಗಳು ನೋಡಿ ಶಿರಗಳ ತೂಗುತ ಬೆರಗಾಗಿ ಪ.

ಛತ್ರ ಚಾಮರ ರಾಜ ಪುತ್ರರು ಚಂದಾಗಿ
ಅಚ್ಚಮುತ್ತುಗಳ ಅಲವುತ
ಅಚ್ಚಮುತ್ತುಗಳ ಅಲವುತ
ಬ್ಯಾಗ ಹೊಕ್ಕರು ಚಿತ್ತಜನೈಯ್ಯನ ಅರಮನೆಯೊಳಗೆ ೧

ತಾರಾಪತಿಗಳಂತೆ ತೋರುತಲೈವರು
ಘೋರ ಮುತ್ತುಗಳ ಅಲವೂತ
ಘೋರ ಮುತ್ತುಗಳ ಅಲವೂತ ಹೊಕ್ಕರು
ವೀರಕೃಷ್ಣಯ್ಯನ ಅರಮನೆ ಬ್ಯಾಗ ೨

ಪಚ್ಚದ ಪಾವಟಿಗೆ ರತ್ನ ಹಚ್ಚಿದ ಚೌಕಟ್ಟು
ಅಚ್ಚಮುತ್ತುಗಳ ಅಲವುತ
ಅಚ್ಚಮುತ್ತುಗಳ ಅಲವುತ ಹೊಕ್ಕರು
ಚಿತ್ತಜನಯ್ಯನ ಅರಮನೆ ಬ್ಯಾಗ ೩

ಪಕ್ಷಿ ವಾಹನನರಮನೆ ದಕ್ಷಿಣ ದ್ವಾರದಿ
ಲಕ್ಷಣವುಳ್ಳ ವನಿತೆಯರು
ಲಕ್ಷಣವುಳ್ಳ ವನಿತೆಯರು ತೆರೆದ ಬಾಗಿಲೊಳು
ನಕ್ಷತ್ರದಂತೆ ಹೊಳೆಯುತ ೪

ಎಡಬಲ ಶ್ರೀತುಳಸಿಗಿಡಗಳು ಅಲವುತ
ಕಡಲಶಯನನ ಅರಮನೆ ಒಳಹೊಂದಿ
ಕಡಲಶಯನನ ಅರಮನೆ ಒಳಗಿನ್ನು
ನಾರಿಯರು ನೆರೆದರು ೫

ಗಂಧದ ಥಳಿ ಕೊಟ್ಟು ಚಂದುಳ್ಳ ಅಂಗಳಕ
ಹಂದರಗಳ್ಹಾಕಿದ ಇಂದಿರೇಶನರಮನೆ
ಇಂದಿರೇಶನ ಅರಮನೆಯೊಳಗೆ
ಬಂದುನಾರಿಯರು ನೆರೆದರು ೬

ಚಂದ್ರನಂತೊಪ್ಪುತ ಚಂದಾಗಿನಿಂತ
ತಂದೆ ರಾಮೇಶನ ಅರಮನೆ
ತಂದೆ ರಾಮೇಶನ ಅರಮನೆ ವೃಂದಾವನಕೆ
ಹೊಂದಿ ನಾರಿಯರುನೆರೆದರು ಬೆರಗಾಗಿ ೭

## ೫೮

ಘಿಲ್ಲು ಘಿಲ್ಲೆನ್ನುತಲಿ
ಘಮಕದಿಪಾಂಡವರು
ಘುಲ್ಲನಾಭನ ದಯಪಲ್ಲವ
ನೋಡಿ ನಿಲ್ಲದಲೆ ಎಲ್ಲರೂ ಪ.

ವೀರಾಧಿವೀರ ಧರ್ಮರಾಯ ಮುಂದಕ್ಕೆ ಬರಲು
ನೀರಿನ ಕುಂಭ ಎದುರಾಗ
ನೀರಿನ ಕುಂಭ ಎದುರಾಗ ರಂಗಯ್ಯನೆ
ಸೂರಿ ಬಿಡವೋನೆ ದಯವನೆ ೧

ಸಲ್ಲು ಸಲ್ಲಿಗೆ ಲಕ್ಷ್ಮಿನಲ್ಲನ ಸ್ತುತಿಸುತ
ಮಲ್ಲಿಗೆ ತುರುಬಿನ
ಮಲ್ಲಿಗೆ ತುರುಬಿನ ಚಲುವಿಯರೆಲ್ಲ ಹೊರಡಲು
ಮಲ್ಲ ಮರ್ದನನ ಮನೆ ನೋಡ ೨

ಎಲ್ಲರು ಹೊರಡಲು ಹಲ್ಲಿ ಮಾತಾಡಿದವು
ಘುಲ್ಲನಾಭನ ದಯ ಚಲ್ಲುವುದೆನುತಲಿ
ಘುಲ್ಲನಾಭನ ದಯ ಚಲ್ಲುವುದೆನುತಲಿ
ವಾಲಿ ಗಂಟಿಟ್ಟ ನಕುಲನು ೩

ಅಂಗಳಕೆ ಬರುತಿರೆ ಮಂಗಳವಾದ್ಯಗಳಾದವು
ಹಂಗ ಹಾರಿದವು ಎಡಗಡೆ
ಹಂಗ ಹಾರಿದವು ಎಡಗಡೆ ರಂಗಯ್ಯ
ಆಲಿಂಗನವ ಕೊಡುವೋನು ನಿಜವೆಂದು ೪

ತೇರಿನ ಬೀದಿಯ ದ್ವಾರದಿ ಬರುತಿರೆ
ಕಾಗೆ ಹಾರಿದವು ಬಲಗಡೆ

ಕಾಗೆ ಹಾರಿದವು ಬಲಗಡೆ ರುಕ್ಮಿಣಿ
ಸೂರಿ ಬಿಡುವಳು ದಯವನ್ನೆ ೫

ರೂಢಿಗೊಡೆಯನ ಕೈಲಿ ನೀಡಿ ಮಂತ್ರಾಕ್ಷತೆ
ನೋಡುವರು ದ್ವಿಜರು ದಯದಿಂದ
ನೋಡುವರು ದ್ವಿಜರು ದಯದಿಂದ ಸತ್ಯಭಾಮ
ಮಾಡುವಳು ಪರಮ ಕರುಣವ ೬

ಅಕ್ಕಿ ತೆಂಗಿನಕಾಯಿ ಚಿಕ್ಕ ನಿಂಬೆ ಹಣ್ಣು
ಅಚ್ಚ ಮಲ್ಲಿಗೆ ಇದುರಿಗೆ
ಅಚ್ಚ ಮಲ್ಲಿಗೆ ಇದುರಿಗೆ ರಮಿಯರಸು
ನಕ್ಕು ನುಡಿವನು ನಮಕೂಡ ೭

## ೫೯

ಶಕುನವೆ ಬಲು ಶಕುನವೆ ಸಖಿ ಕೃಷ್ಣನ
ಮುದ್ದು ಮುಖವ ಕಾಂಬುವೆ ನೀಗ ಪ.

ಹಾಲು ಮೊಸರಿನ ಕುಂಭ ಮೇಲಾದ ಘ್ರತ ಬೆಣ್ಣಿ
ಸಾಲುಸಾಲಾಗಿ ಎದುರಾಗಿ ಇಂದೀವರಾಕ್ಷಿ
ಸಾಲುಸಾಲಾಗಿ ಎದುರಾಗಿ ರಂಗನ ಕಾಲಿಗೆ
ಶಿರವ ನೀಡುವಂತೆ ಇಂದೀವರಾಕ್ಷಿ ೧

ಕೋಟಿ ಜನರು ಕೂಡಿ ತ್ವಾಟ ಪಟ್ಟಿಗಳ
ದಾಟಿ ನೀಟಾದ ಹಂಸ ಗಿಳಿವಿಂಡು
ನೀಟಾದ ಹಂಸ ಗಿಳಿ ವಿಂಡು ನಡೆದವು
ಹಾಟಕಾಂಬರನ ದಯವಿದು ಇಂದೀವರಾಕ್ಷಿ ೨

ಜತ್ತಾಗಿ ದ್ವಾರಕೆಯ ಹತ್ತಿರ ಬರುತಿರೆ
ಮುತ್ತಿನ ಹೇರು ಇದುರಾಗಿ ಇಂದೀವರಾಕ್ಷಿ

ಮುತ್ತಿನ ಹೇರು ಇದುರಾಗಿ ರಂಗಯ್ಯ
ಹಸ್ತಲಾಘವ ಕೊಡುತಾನೆ ಇಂದೀವರಾಕ್ಷಿ ೩

ಸಾವಿರ ಅಂಗಡಿ ಸಾಲಾದ ಬಾಜಾರ
ನೇರಳೆ ಹಣ್ಣು ಇದುರಾಗಿ ಇಂದೀವರಾಕ್ಷಿ
ನೇರಳೆ ಹಣ್ಣು ಇದುರಾಗಿ ರಂಗಯ್ಯ
ಮೇಲು ಕರುಣದಲಿ ಕರೆಸುವನು ಇಂದೀವರಾಕ್ಷಿ ೪

ಹಸ್ತಿನಾಪುರದವರು ಸಪ್ತಪ್ರಾಕಾರ ದಾಟಿ
ಮತ್ತೆ ಶ್ರೀಗಂಧ ಇದುರಾಗಿ ಇಂದೀವರಾಕ್ಷಿ
ಮತ್ತೆ ಶ್ರೀಗಂಧ ಎದುರಾಗಿ ಬಲರಾಮ
ಅರ್ಥಿಲೆ ಬಂದು ಕರೆವನು ಇಂದೀವರಾಕ್ಷಿ ೫

ವ್ಯಾಲಾಶಯನನ ಮನೆಯ ಏಳು ಬಾಗಿಲದಾಟಿ
ಬಾಳೆಯ ಹಣ್ಣು ಇದುರಾಗ ಇಂದೀವರಾಕ್ಷಿ
ಬಾಳೆಯ ಹಣ್ಣು ಇದುರಾಗ ರಂಗಯ್ಯ
ಕೇಳೋನು ಕ್ಷೇಮ ಕುಶಲವ ಇಂದೀವರಾಕ್ಷಿ ೬

ನಾಗಶಯನನ ಮನೆಯ ಬಾಗಿಲು ಹೊಗಲಿಕ್ಕೆ
ನಾಗಸಂಪಿಗೆಯ ಮುಡಿದವರು ಇಂದೀವರಾಕ್ಷಿ
ನಾಗಸಂಪಿಗೆಯ ಮುಡಿದವರು ಬಂದರು ಈಗ
ರಾಮೇಶನ ದರುಶನಕೆ ಇಂದೀವರಾಕ್ಷಿ ೭

## ೬೦

ಬಾರೆ ರುಕ್ಮಿಣಿ ನಿನ್ನ ಮುಖತೋರೆ
ನಗೆಪಾಟಲಾಗದೆ
ಸಾರ ಶ್ರೀಕೃಷ್ಣನ್ನ ತೊಡೆಬಿಟ್ಟು
ಬಾರೆ ರುಕ್ಮಿಣಿ ಪ.

ಕೃಷ್ಣರಾಯನ ಮನೆಯ ಪಡಸಾಲೆಯೊಳಗೆ
ಪಟ್ಟಿ ಪಟ್ಟಾವಳಿ ಹರವಿಲ್ಲ
ಪಟ್ಟಿ ಪಟ್ಟಾವಳಿ ಹರವಿಲ್ಲ ಕುಂತಿ ಮನೆಯ
ವಿಶಿಷ್ಠ ಸಿಂಹಾಸನವ ತರಿಸೇವ ರುಕ್ಮಿಣಿ ಬಾರೆ ೧

ಜರದ ಸಿಂಹಾಸನಕೆ ಸರದ ಮಾಣಿಕವು ರಚಸಿ
ಬರೆದಿವೆ ಮ್ಯಾಲೆ ದಶರೂಪ
ಬರೆದಿವೆ ಮ್ಯಾಲೆ ದಿವ್ಯ ದಶರೂಪದ
ಆಸನವ ದೊರೆಗಳು ಏರಿ ಕುಳಿತಾರೆ ಬಾರೆ ರುಕ್ಮಿಣಿ ೨

ಮುತ್ತಿನ ಸಿಂಹಾಸನಕೆ ಮುತ್ತು ಮಾಣಿಕವೆ ರಚಿಸಿ
ಹತ್ತಾವತಾರವ ಬರೆದಿವೆ
ಹತ್ತಾವತಾರ ಬರೆದ ಸಿಂಹಾಸನವ
ಹತ್ತಿ ಪಾಂಡವರು ಕುಳಿತಾರೆ ಬಾರೆ ರುಕ್ಮಿಣಿ ೩

ಮಂದಗಮನೆಯರೆಲ್ಲ ಚಂದ್ರಶಾಲೆಯೊಳಗೆ
ಛಂದ ಛಂದದಲಿ ಹೊಳೆಯುತ
ಛಂದ ಛಂದದಲಿ ಹೊಳೆಯುತ ನಿಂತಾರೆ
ಗಂಧ ಕಸ್ತೂರಿ ಉದುರೂತ ಬಾರೆ ರುಕ್ಮಿಣಿ ೪

ಹರಿಯ ಮಡದಿಯರು ನಮ್ಮ ಕರೆಯ ಬರಲಿಲ್ಲೆಂದು
ಮರ್ಯಾದೆಯುಳ್ಳ ಶುಕವಾಣಿ
ಮರ್ಯಾದೆಯುಳ್ಳ ಶುಕವಾಣಿ ರಾಮೇಶನ
ಹರದೆಯರಿಗೆ ವಿನಯದಿ ನುಡಿದಳು ಬಾರೆ ರುಕ್ಮಿಣಿ ೫

## ೬೧

ನೋಡಿದ್ಯಾ ಶ್ರೀದೇವಿಯರ ನೋಡಿದ್ಯಾ
ನೋಡಿದ್ಯಾ ರುಕ್ಮಿಣಿ ಮಾಡಿದಾಟ್ಟವಳಿಯ
ಗಾಡಿಗಾರಳೆಂದು ಆಡೋರು ಭಾವೆಯ ಪ.

ಇಂತು ರುಕ್ಮಿಣಿ ಮ್ಯಾಲೆ ಪಂಥವೆ ಬಗೆದಿರಲಿ
ನಿಂತು ಸುಭದ್ರಾ ಶಪಥದ
ನಿಂತು ಸುಭದ್ರಾ ಶಪಥದ ವಾಗ್ಬಾಣ
ಕಾಂತೆಯ ಎದೆಗೆ ಒಗೆದಾಳು ೧

ತಾಯಿ ಮನೆಗೆ ಬಂದು ಬಹಳ ಹೊತ್ತಾಯಿತು
ತಾಯಿಯ ಸೊಸೆಯರು ಬರಲಿಲ್ಲ
ತಾಯಿಯ ಸೊಸೆಯರು ಬರಲಿಲ್ಲ ನಮಗಂಜಿ
ಬಾಯಿ ಬಿಡುತಾರೆ ಒಳಗಿನ್ನು ೨

ಅಣ್ಣನ ಮನೆಗೆ ಬಂದು ಸಣ್ಣ ಹೊತ್ತಾಯಿತು
ಅಣ್ಣನ ಮಡದಿ ಬರಲಿಲ್ಲ
ಅಣ್ಣನ ಮಡದಿ ಬರಲಿಲ್ಲ ರುಕ್ಮಿಣಿ
ಇನ್ನು ಬಾ ಅಭಯ ಕೊಡತೇವ ೩

ಅತ್ತಿಗೆ ಮನೆಗೆ ಬಂದು ಹತ್ತು ಘಳಿಗ್ಯಾದೀತು
ಎತ್ತ ಓಡಿದಳೆ ನಮಗಂಜಿ
ಎತ್ತ ಓಡಿದಳೆ ನಮಗಂಜಿ ಸತ್ಯಭಾಮೆ
ಇತ್ತ ಬಾ ಅಭಯ ಕೊಡತೇವ ೪

ನಳಿನ ಮುಖಿಯರ ವಾರ್ತೆ ತಿಳಿದು ರುಕ್ಮಿಣಿದೇವಿ
ಇಳಿದಾಳು ಬ್ಯಾಗ ಸೇಳೆ ಮಂಚ
ಇಳಿದಾಳು ಬ್ಯಾಗ ಸೇಳೆ ಮಂಚ ರಮಿಯರಸು
ಎಳೆದ ಮುಂಚೆರಗು ವಿನಯದ ೫

## ೬೨

ಬಿಟ್ಟು ಬರಲಾರಳಮ್ಮಯ್ಯ
ಪಟ್ಟಮಂಚವ ಭಾವೆ
ಬಿಟ್ಟರೆ ರುಕ್ಮಿಣಿ ಕೃಷ್ಣನ
ಬೆರೆದಾಳೆಂಬೊ ಅಂಜಿಕೆಯಿಂದ ಪ.

ಭಕ್ತವತ್ಸಲನ ಪಾದ ಸಿಕ್ಕಿತೋ ಸಿಗದೆಂದು
ಚಿಕ್ಕ ಚನ್ನಿಗಳ ಕೈವಶ
ಚಿಕ್ಕ ಚನ್ನಿಗಳ ಕೈವಶವಾಗದಂತೆ
ಜಪ್ಪಿಸಿಕೊಂಡು ವಟವಾದಳೆ ೧

ಶಂಬರಾರಿ ಪಿತನ ತಂಬುಲಸಿಗದೆಂದು
ಚುಂಬನದ ಸಮಯ ಚಿಗಿಳೀತು
ಚುಂಬನದ ಸಮಯ ಚಿಗಿಳೀತು ಎಂತೆಂಬೊ
ಹಂಬಲದಿ ಒಳಗೆ ಕುಳಿತಳೆ ೨

ನಲ್ಲೆ ರಂಗಯ್ಯನ ಎಲ್ಲೆಲ್ಲಿ ಬಿಡಲೊಲ್ಲೆ
ಎಲ್ಲ ನಾರಿಯರ ನೆರವಿಕೊಂಡು
ಎಲ್ಲ ನಾರಿಯರ ನೆರವಿಕೊಂಡು ಮನೆಯೊಳು
ನಿಲ್ಲಗೊಡರೆಂಬೊ ಭಯದಿಂದ ೩

ಜಗದೊಡೆಯನ ಒಗೆತನ ನಗೆಗೀಡಾಯಿತು
ನೋಡೆ ಈ ಬಗೆ ಎಲ್ಲೆ ಕಾಣೆ ಜಗದೊಳು
ಈ ಬಗೆ ಎಲ್ಲೆ ಕಾಣೆ ಜಗದೊಳು ರುಕ್ಮಿಣಿ
ತಗಿ ನಿನ್ನನಡತೆ ತರವಲ್ಲ ೪

ಅನಂತ ಮಹಿಮಗೆ ಇನ್ನೆಂಥ ಕಾವಲ
ತನ್ನ ನಿಜರೂಪ ಅವರಲ್ಲಿ
ತನ್ನ ನಿಜರೂಪ ಅವರಲ್ಲಿ ರಮಿಸೋದು
ತನ್ನ ಮನದಲ್ಲಿ ನಿಜ ಮಾಡಿ ೫

ಸಾಗರಶಾಯಿ ಮನಕೆ ಹ್ಯಾಂಗೆ ಬಂದೀತು
ಎಂದು ಹೀಗೆ ಕೈ ಮುಗಿದು ತಲೆಬಾಗಿ
ಹೀಗೆ ಕೈ ಮುಗಿದು ತಲೆಬಾಗಿ ರುಕ್ಮಿಣಿ
ಆಗೊಂದು ಮನದ ಬಯಕೆಲ್ಲ ೬

ಎಷ್ಟು ಜಪಿಸಿ ನೀನು ಠಕ್ಕಿಸಿ ಕೃಷ್ಣನ
ಇಟ್ಟಾನೆ ರಮಿಯ ಎದಿಮ್ಯಾಲೆ
ಇಟ್ಟಾನೆ ರಮಿಯ ಎದಿಮ್ಯಾಲೆ ರುಕ್ಮಿಣಿ
ಇಷ್ಟರ ಮ್ಯಾಲೆ ತಿಳಕೊಳ್ಳ ೭

## ೬೩

ಅಂಜೋರೆ ಹೀಂಗೆ ಅಂಜೋರೆ
ನಮ್ಮ ಕಂಜನಾಭನ ಮುಂದೆ
ಕಾದುವ ಭ್ರಮತೆಯರು ಪ.

ಅಷ್ಟೂರೊಳಗೆ ಅತಿ ಶ್ರೇಷ್ಠಳೆ ಭಾವೆ
ಅಷ್ಟೂರಿಗೆ ಅಭಯ ಕೊಡದಲೆ
ಅಷ್ಟೂರಿಗೆ ಅಭಯ ಕೊಡದಲೆ ಒಳಗೋಗಿ
ಕೃಷ್ಣನ ಮುಸುಕಲಿ ಅಡಗೋರೆ ಜಾಣಿ ೧

ಚಲುವರೊಳಗೆ ಅತಿ ಚಲುವಳು ಭಾವೆ
ಎಲ್ಲರಿಗೆ ಅಭಯವ ಕೊಡದಲೆ
ಎಲ್ಲರಿಗೆ ಅಭಯವ ಕೊಡದಲೆ ರಂಗನ
ವಲ್ಲಿ ಮುಸುಕಲಿ ಅಡಗೋರೆ ಜಾಣೆ ೨

ಕೃಷ್ಣರಾಯನ ಮತ್ತಷ್ಟು ಮಡದಿಯರು
ಎಷ್ಟು ಅಂಜುತಲೆ ನಮಗಿನ್ನು
ಎಷ್ಟು ಅಂಜುತಲೆ ನಮಗಿನ್ನು ಕೈಕಾಲು
ಮುಟಿಗ್ಯಾಗಿ ಕುಳಿತಾರೆ ಜಾಣಿ ೩

ಬಲರಾಮನ ಮಡದಿಯ ಛಲವನೆ ನೋಡಿರೆ
ಲಲನೆಯರು ಕರೆಯೆ ಬರಲಿಲ್ಲ
ಲಲನೆಯರು ಕರೆಯೆ ಬರಲಿಲ್ಲ ನಮಗಂಜಿ
ನೆಲವ ಗೀಚುತಲೆ ಕುಳಿತಾರೆ ಜಾಣಿ ೪

ಕಂಜಾಕ್ಷಿ ರುಕ್ಮಿಣಿ ಕರೆಯ ಬರಲಿಲ್ಲ
ಸಂಜೀಲೆ ನಾವು ಬಂದೇವ
ಸಂಜೀಲೆ ನಾವು ಬಂದೇವ ರಾಮೇಶನ
ಅಂಜಿಕೆ ಇಲ್ಲೇನ ಮಡದಿಯರ ಜಾಣಿ ೫

## ೬೪

ಬ್ಯಾಡ ಬ್ಯಾಡಿರೆಂದ ಅವರೊಳು ಪಂಥ
ಬ್ಯಾಡ ಬ್ಯಾಡಿರೆಂದು
ಬ್ಯಾಡ ಬ್ಯಾಡ ಪಂಥ ನೋಡಿಕೊ ರುಕ್ಮಿಣಿ
ಮಾಡೋರು ಮುಖಭಂಗ
ಬೇಡಿಕೊಂಡೆನು ಭಾವೆ ಪ.

ಹರದೆಯರಾಡಿದ ಮಾತು ಹರಿಯು ಕೇಳುತ
ಬೇಗ ಕರೆಯ ಹೋಗೆಂದ ಮಡದಿಯರ
ಕರಿಯ ಹೋಗೆಂದ ಮಡದಿಯರ ದ್ರೌಪತಿಯೆ
ಸರಿಯಲ್ಲ ಪಂಥ ಬಿಡಿರೆಂದ ೧

ಹಾದಿ ಬೀದಿಯ ಮಾತು ಸಾಧಿಸುವರೆ ನೀವು
ವೇದಾಂತ ಮಳೆಯ ಗರೆದಾರು
ವೇದಾಂತ ಮಳೆಯ ಗರೆದಾರು ನಿಮ್ಮ ಮುಖ
ಆದೀತು ಸಣ್ಣ ಸಭೆಯೊಳು ೨

ಅತ್ತಲಿತ್ತಲೆ ಮಾತು ಜತ್ತು ಮಾಡೋರೆನೀವು
ಶ್ರುತ್ಯರ್ಥವೆಲ್ಲ ಸುರಿಸೋರು
ಶ್ರುತ್ಯರ್ಥವೆಲ್ಲ ಸುರಿಸೋರು ನಿಮ್ಮ
ಮುಖ ಬತ್ತೀತು ಒಂದು ಕ್ಷಣದಾಗೆ ೩

ಮಂದರಧರ ತನ್ನ ತಂಗಿಯರ ಕರೆಯೆಂದು
ಮಂದಹಾಸದಲಿ ನುಡಿದನು

ಮಂದಹಾಸದಲಿ ನುಡಿದನು ಭಾವೆರುಕ್ಮಿಣಿ
ಬಂದರು ಭಾಳೆ ವಿನಯದಿ ೪

ಆರು ಮಂದಿ ಹರಿಯ ನಾರಿಯರು
ಹದಿನಾರು ಸಾವಿರ ಮಂದಿ ಸಹಿತಾಗಿ
ಹದಿನಾರು ಸಾವಿರ ಮಂದಿ ಸಹಿತಾಗಿ ಬಂದರು
ನಾರಿ ದ್ರೌಪದಿಯ ಕರೆಯಲು ೫

ನೂರುಮಂದಿ ಹರಿಯನಾರಿಯರು
ತಂತಮ್ಮ ಹಾರಭಾರಗಳ ಅಲವೂತ
ಹಾರಭಾರಗಳು ಅಲವೂತ ಬಂದರು
ನೀರೆ ಸುಭದ್ರೆಯು ಕರೆಯಲು ೬

ಪನ್ನಂಗ ವೇಣಿಯರು ಮನ್ನಿಸಿ ಹರಿಯಾಜ್ಞೆ
ಚನ್ನ ರಾಮೇಶನ ಮಡದಿಯರು
ಚನ್ನ ರಾಮೇಶನ ಮಡದಿಯರು ಬಂದರು
ಕನಿ ದ್ರೌಪತಿಯ ಕರೆಯಲು ೭

## ೬೫

ಬಂದಾರೆ ಅತ್ತಿಗೆಯರು ಚಂದನೋಡಿರೆ
ಚಂದ ನೋಡಿರೆ ಇಂದಿರೇಶನ ಮುದ್ದು
ತಂಗಿಯರು ಕರೆಯಲು ಬಂದಾರೆ ಪ.

ಸಾಲು ದೀವಿಗೆಯಂತೆ ಬಾಲೆಯರು ನಿಂತಾರೆ
ಮ್ಯಾಲೆ ಸುಭದ್ರೆ ದ್ರೌಪತಿಯೆ ಇಂದೀವರಾಕ್ಷಿ
ಮ್ಯಾಲೆ ಸುಭದ್ರೆ ದ್ರೌಪತಿ ನುಡಿದಳು
ಮೇಲೆಂದು ನಿಮ್ಮ ದೊರೆತನ ಇಂದೀವರಾಕ್ಷಿ ೧

ಕೃಷ್ಣನ ಮಡದಿಯರು ಎಷ್ಟು ದಯವಂತರು
ಅಷ್ಟೂರಲ್ಲಿದ್ದ ಗರುವನೆ
ಅಷ್ಟೂರಲ್ಲಿದ್ದ ಗರುವನೆ ತುರುಬಿಗೆ
ಮಲ್ಲಿಗೆ ಮಾಡಿ ಮುಡಿದಾರೆ ೨

ಫುಲ್ಲನಯನರ ದೈವ ಎಲ್ಲಿವರ್ಣಿಸಬೇಕು
ಎಲ್ಲರಲ್ಲಿದ್ದ ಗರುವನೆ
ಎಲ್ಲರಲ್ಲಿದ್ದ ಗರುವನೆ ತಮ್ಮಲ್ಲಿಟ್ಟುಕೊಂಡಾರೆ
ವಿನಯದಿ ಸಖಿಯೆ ಇಂದೀವರಾಕ್ಷಿ ೩

ಹಿರಿಯ ಅತ್ತಿಗೆ ತಾನು ಗರುವಿನ ಸೀರೆಯನುಟ್ಟು
ಬರಿಯ ಬಿಂಕದ ಕುಪ್ಪುಸವ ತೊಟ್ಟು
ಬರಿಯ ಬಿಂಕದ ಕುಪ್ಪುಸವ ತೊಟ್ಟು
ಕರೆಯಲಿ ನಮ್ಮ ಇದುರಿಗೆ ಇಂದೀವರಾಕ್ಷಿ ೪

ಮಡದಿ ಸತ್ಯಭಾಮೆ ಬಡಿವಾರದ ಸೀರೆಯನುಟ್ಟು
ಕಡುಕೋಪವೆಂಬೊ ಕುಪ್ಪುಸವ
ಕಡುಕೋಪವೆಂಬೊ ಕುಪ್ಪುಸವ ತೊಟ್ಟು
ಒಡಗೂಡಿ ನಮ್ಮ ಕರೆಯಲು ಇಂದೀವರಾಕ್ಷಿ ೫

ಅಷ್ಟು ಮಡದಿಯರು ಅತಿ ಸಿಟ್ಟಿನ ಸೀರೆಯನುಟ್ಟು
ಅಷ್ಟ ಮದವೆಂಬೊ ಕುಪ್ಪುಸವ
ಅಷ್ಟ ಮದವೆಂಬೊ ಕುಪ್ಪುಸವ ತೊಟ್ಟು
ಧಿಟ್ಟಯರು ನಮ್ಮ ಕರೆಯಲು ಇಂದೀವರಾಕ್ಷಿ ೬

ಭಾಪುರಿ ಅತ್ತಿಗೆಯರು ಕೋಪದೊಸ್ತಗಳಿಟ್ಟು
ಭೂಪರಾಮೇಶನ ಮಡದಿಯರು
ಭೂಪರಾಮೇಶನ ಮಡದಿಯರು ಬಂದರೆ
ದ್ರೌಪತಿ ದೇವಿಯ ಕರೆಯಲು ಇಂದೀವರಾಕ್ಷಿ ೭

## ೬೬

ಬಾರೆ ಸಖಿ ವಾರಿಜ ಮುಖಿ ಬಾರೆ ಬಾರೆ ಸಖಿ
ಬಾರೆ ಕೋಪಿಸೋರೆ ಹೀಗೆ ಯಾರುಪದೇಶವು
ಮುರಾರಿಯ ಮುಖ್ಯ ಬಲರಾಮನ ಸಖಿಯೆ
ಬಾರೆ ಬಾರೆ ವಾರಿಜ ಮುಖಿಯೆ ಪ.

ಪುಟ್ಟ ಸುಭದ್ರಾ ನಿನಗೆ ಸಿಟ್ಯಾಕ ಒದಗಿತ
ಇಟ್ಟ ಮುದ್ರಿಗಳು ತಡವಾಗಿ
ಇಟ್ಟ ಮುದ್ರಿಗಳು ತಡವಾಗಿ ಮುಯ್ಯವ
ಇಷ್ಟು ಹೊತ್ತನಾಗೆ ತರಬಹುದೆ ೧

ಕೇಳೆ ಸುಭದ್ರಾ ಮುಯ್ಯಾ ಕಾಳ ರಾತ್ರಿಲೆ ತಂದು
ಭಾಳ ಕೋಪಿಸುವ ಬಗಿ ಹೇಳ
ಭಾಳ ಕೋಪಿಸುವ ಬಗಿ ಹೇಳ ಮುತ್ತಿನ
ತೋಳುತಾಯಿತವ ಕೊಡುವೆನ ೨

ಧಿಟ್ಟ ಸುಭದ್ರಾ ಮುಯ್ಯಾ ಇಷ್ಟೊತ್ತಿನಾಗ
ತಂದು ಸಿಟ್ಟು ಮಾಡಿದ ಬಗಿ ಹೇಳ
ಸಿಟ್ಟು ಮಾಡಿದ ಬಗಿ ಹೇಳ ಮುತ್ತಿನ
ಕಟ್ಟಾಣಿ ಕೊಡುವೆ ನಿನಗಿನ್ನು ೩

ಲೋಕನಾಯಕಿ ಕೃಷ್ಣಿ ಕೋಪವ್ಯಾ ಕೊದಗಿತ
ಹಾಕಿದ ಮುದ್ರಿ ತಡವಾಗಿ
ಹಾಕಿದ ಮುದ್ರಿ ತಡವಾಗಿ ಮುಯ್ಯವ
ಈ ಕಾಲದೊಳಗೆ ತರಬಹುದೆ ೪

ಕೆಂಡದಂಥವಳ ಗುಣ ಕಂಡೇವ ಸಭೆಯೊಳು
ಚಂಡಿತನವನೆ ಬಿಡು ಕೃಷ್ಣಿ

ಚಂಡಿತನವನೆ ಬಿಡು ಕೃಷ್ಣಿ ಮುತ್ತಿನ
ದಂಡೆ ಕೊಡುವೆ ಬಿಡುಕೋಪ ೫

ಬೆಂಕಿಯಂಥವಳ ಗುಣ ಶಕ್ಯವೆ ವರ್ಣಿಸಲು
ಶಂಕರಾದ್ಯರಿಗೆ ವಶವಲ್ಲ
ಶಂಕರಾದ್ಯರಿಗೆ ವಶವಲ್ಲ ಮುತ್ತಿನ
ವಂಕಿಯ ಕೊಡುವೆ ನಿನಗಿನ್ನು ೬

ಸತಿಯು ಸುಭದ್ರೆ ನೀನು ಯತಿಯ ಬೆನ್ಹತ್ತಿದಾಗ
ಅತಿಭೀತಿ ಎಲ್ಲಿ ಅಡಗಿತ್ತ
ಅತಿಭೀತಿ ಎಲ್ಲಿ ಅಡಗಿತ್ತ ನಾವು
ನಿನ್ನ ಪತಿವ್ರತ ತನವ ಅರಿವೆನೆ ೭

ಮಿತ್ರೆಯರು ನಾವೆಲ್ಲ ತುಪ್ಪಅನ್ನವನುಂಡು
ಪುತ್ರರ ಸಹಿತ ಸುಖನಿದ್ರೆ
ಪುತ್ರರ ಸಹಿತ ಸುಖನಿದ್ರೆ ಗೈವಾಗ
ಮತ್ತ ನೀ ಮುಯ್ಯ ತರಬಹುದೆ ೮

ಲೋಲ ರಾಮೇಶನು ಹಾಲು ಅನ್ನವನುಂಡು
ಬಾಲರ ಸಹಿತ ಸುಖನಿದ್ರೆ
ಬಾಲರ ಸಹಿತ ಸುಖನಿದ್ರೆ ಗೈವಾಗ
ಮ್ಯಾಲೆ ಮುಯ್ಯ ತರಬಹುದೆ ೯

## ೬೭

ಮೋಜು ಮಾಡಿದಿರ ರುಕ್ಮಿಣಿ ಭಾಮೆ
ಮೋಜು ಮಾಡಿದಿರ
ರಾಜಪುತ್ರರ ವಾಜಿಗಾಣುತ
ಸೋಜಿಗಾಗೇದ
ರಾಜ ರಾಜರ ಪ.

ಚದುರೆ ದ್ರೌಪದಿದೇವಿ ಮುದದಿ ಮುಯ್ಯವ ತಾರೆ
ಇದುರಿಗೆ ಬಾರದೆ ಕದವನಿಕ್ಕಿ ಬಹಳೆ ೧

ಚಿಕ್ಕ ಸುಭದ್ರಾತಾ ಅಕ್ಕರದಿ ಬರುವಾಗ
ಹೊಕ್ಕು ಒಳಗೆ ಕದವ ನಿಕ್ಕಿಕೊಂಡು ಬಹಳೆ ೨

ವಸುಧೆರಾಯರು ನಿಮ್ಮ ಕುಶಲಕ್ಕೆ ಬೆರಗಾಗಿ
ಮುಸು ಮುಸು ನಗುತಾರೆ ಮುಸುಕಿನೊಳಗೆ ಬಹಳೆ ೩

ಕತ್ತಲೆಗಂಜುತ ಮಿತ್ರೆಯರು ನಿಂತೆವು
ಪೃಥ್ವಿರಾಯರು ನಿಮ್ಮ ಅರ್ಥಿಗೆ ನಗುತಾರೆ ಬಹಳೆ ೪

ಕೃಷ್ಣ ರಾಮೇಶನ ಪಟ್ಟದರಾಣಿಯರು
ಎಷ್ಟು ಶಾಣೇರೆಂದು ಅಷ್ಟೂರು ನಗುತಾರೆ ಬಹಳೆ ೫

## ೬೮

ಅಂಜಬ್ಯಾಡ ಬ್ಯಾಡೆಲೆ ಜಾಣಿ
ಭವಭಂಜನ ಬಲರಾಮನ ಅಣಿ ಪ.

ಸಂಜಿಲೆ ಬಂದೆವೆಂಬೊ ಅಂಜಿಕೆ ನಿನಗ್ಯಾಕೆ
ಕುಂಜರಗಮನೆ ಕಮಲಾಕ್ಷಿ
ಕುಂಜರಗಮನೆ ಕಮಲಾಕ್ಷಿ ದ್ರೌಪದಿ
ಅಂಜಬ್ಯಾಡ ಅಭಯಕೊಡತೇವ ೧

ಭಯವುಳ್ಳ ಬಾಲೆ ನೀ ಐವರಿಗೆ ಇಂತಿಪ್ಪೆ
ಸ್ವೈವಲ್ಲದ ಮಾತು ಜಗಕಿದು
ಸ್ವೈವಲ್ಲದ ಮಾತು ಜಗಕಿದು ಈ ನಡೆತೆ
ನಯವಲ್ಲವೆಂದು ನಗುತಾರೆ ೨

ಲೋಕದೊಳೊಬ್ಬಳಿಗೆ ಏಕಪತಿಯುಂಟು
ಏಕಕಾಲದೆ ಐವರ
ಏಕಕಾಲದಲೆ ಐವರನ ಕೂಡೋದು
ನಾ ಕಾಣಿನೆಲ್ಲೊ ಕೌತುಕವ ೩

ಕೆಂಡವ ತುಂಬಿದ ಕುಂಡದಿ ಪುಟ್ಟಿದಿ
ಕಂಡ ಜನಕೆಲ್ಲ ಭಯವಾದಿ
ಕಂಡ ಜನಕೆಲ್ಲ ಭಯವಾದಿ ಭೀಮಸೇನ
ನಿನ್ನ ಗಂಡ ಎಂಥ ಎದೆಗಾರ ೪

ಎಲ್ಲ ನಾರಿಯರೊಬ್ಬ ನಲ್ಲನಬೆರಿಯೆ
ಬಲ್ಲಿದ ಭೂಪ ರೈವರು
ಬಲ್ಲಿದ ಭೂಪರೈವರ ನೊಲಿಸಿದಿ
ಎಲ್ಲರಂತಲ್ಲ ಬಲುಧೀರೆ ೫

ಪಲ್ಯಾದ ತುದಿಯಿಂದ ಎಲ್ಲ ಪದಾರ್ಥಮಾಡಿ
ಬಲ್ಲಿದ ಮುನಿಗೆ ಉಣಿಸಿದಿ
ಬಲ್ಲಿದ ಮುನಿಗೆ ಉಣಿಸಿದಿ ಇಂದ್ರಜಾಲ
ಬಲ್ಲವಳಿಗಿಂಥ ಭಯವುಂಟೆ ೬

ಕೇಳ ದ್ರೌಪತಿ ರಾಜ್ಯವಾಳೊಗಂಡನ ಕೈಲೆ
ಲಾಳಿ ತಕ್ಕೊಂಡ ಪರಿಯಂತೆ
ಲಾಳಿ ತಕ್ಕೊಂಡ ಪರಿಯಂತೆ ಈ ನಡತೆ
ಕೇಳಿದವರೆಲ್ಲ ನಗುತಾರೆ ೭

ಅತ್ತೆಯ ಮಗ ನಿನ್ನ ಅತ್ಯಂತ ನಗೆನೋಡಿ
ತಪ್ಪವಾಗೊಮ್ಮೆ ತಿರುಗಿದ
ತಪ್ಪವಾಗೊಮ್ಮೆ ತಿರುಗಿದ ದ್ರೌಪತಿ
ಮತ್ತಾರೆ ಬುದ್ಧಿ ಬರಲಿಲ್ಲ ೮

ಅರಸನ ಮಡದಿ ಒಬ್ಬ ಅರಸನ ಮನೆಯಲ್ಲಿ
ನಿರುತ ದಾಸಿಯೆಂದು ಇರುತಲೆ
ನಿರುತ ದಾಸಿಯೆಂದು ಇರುತಲೆ ಸೇವಿಸೋದು
ಈ ಸರಸ ರಮೇಶಗೆ ಹರುಷೇನ ೯

## ೬೯

ಸರ್ಪಶಯನನೆಂಬೊ ದಿವ್ಯ
ಕಲ್ಪತರು ಸೇರಿದ ದರ್ಪವೆಷ್ಟ
ನಿಮ್ಮಿಬ್ಬರ ಧಿಮಾಕುಭಾಳೆ ನಾರಿ ಪ.

ನಿರತ ದಾಸಿ ನಾನೆಂಬೋದು ಸರಸಿಜಾಕ್ಷತಾನೆ ಬಲ್ಲ
ಅರಸು ಅರಸನ ಹುಡುಕುತ
ಅರಸು ಅರಸರನ ಹುಡುಕುತಲೆ ಹೋಗುವದು
ಸರಸ ತೋರುವುದೆ ಐವರಿಗೆ ಕೇಳನಾರಿ ೧

ಒಬ್ಬ ರುಕ್ಮಿಣಿ ನಿನ್ನ ಮುಂದೆ ಗುಬ್ಬಿಕಾಗೆ ಹಿಂಡು
ಕಬ್ಬೆಕ್ಕು ಕೋಳಿ ನೆರೆದಾವ
ಕಬ್ಬೆಕ್ಕು ಕೋಳಿ ನೆರೆದಾವ ಶ್ರೀಕೃಷ್ಣ
ತಬ್ಬಿಬ್ಬುಕೊಂಡು ನಗುತಾನ ಕೇಳ ನಾರಿ ೨

ಅತ್ತಿಗೆ ನಿನ್ನ ಮೈಗೆ ಹತ್ಯಾವ ರುದ್ರಾಕ್ಷಿ
ನೆತ್ತಿಯ ಮ್ಯಾಲ ಜಡದಾವ
ನೆತ್ತಿಯ ಮ್ಯಾಲ ಜಡದಾವ ಅತ್ತಿಗೆ ನಿನ್ನ
ಹತ್ತಿಲಿದ್ದವರು ನಗುತಾರೆ ಕೇಳನಾರಿ ೩

ಜಾಣೆ ನಿನ್ನಂಥವಳ ಕಾಣೆ ನಾ ಜಗದೊಳು
ಕೋಣನ ಹೊಡೆವ ಕೌಶಲ್ಯ
ಕೋಣನ ಹೊಡೆವೊ ಕೌಶಲ್ಯಕ್ಕೆ ಬೆರಗಾಗಿ
ಸುರನಾರಿಯರು ಬಹಳೆ ನಗುತಾರೆ ಕೇಳ ನಾರಿ ೪

ನಿತ್ಯ ಪ್ರಕಾಶನ ಉತ್ತಮೋತ್ತಮ ಗುಣವ
ಅತ್ಯಂತ ನೋಡಿ ಸುಖಿಸದೆ
ಅತ್ಯಂತ ನೋಡಿ ಸುಖಿಸದೆ ಎಲೆಭಾವೆ
ಕತ್ತಲೆಗ್ಯೆದ ಬಗಿಹೇಳ ಕೇಳನಾರಿ ೫

ಕತ್ತಲೆಂಬುದು ನಿನ್ನ ಸುತ್ತುಮುತ್ತಲಾಗಿರೆ
ಎತ್ತನೋಡಿದರು ಜನರಿಲ್ಲ
ಎತ್ತನೋಡಿದರು ಜನರಿಲ್ಲ ಅವರೊಳು
ಚಿತ್ತ ಸ್ವಾಸ್ಥ್ಯದ ಬಗಿ ಹೇಳ ಕೇಳನಾರಿ ೬

ಹರಿ ಬಲು ಪ್ರೀತಿಯಿಂದ ಉರದೊಳು ಸ್ಥಳಕೊಟ್ಟ
ಇರಬಾರದೇನೆ ವಿನಯದಿ
ಇರಬಾರದೇನೆ ವಿನಯದಿ ಜಗಳಾಡಿ
ಉರಿಯ ಹೊಗುವರೆ ಉನ್ಮತ್ತೆ ಕೇಳನಾರಿ ೭

ಮೂಡಲಗಿರಿಪತಿಗೆ ಜೋಡೆಂದು ನೀವಿಬ್ಬರು
ಮಾಡಿ ಸಹವಾಸ ಎಡಬಲ
ಮಾಡಿ ಸಹವಾಸ ಎಡಬಲ ಹಿಡಿದಿರಿ
ನೋಡಿದವರೆಲ್ಲ ನಗುವಂತೆ ಕೇಳನಾರಿ ೮

ವರ ಮಾಣಿಕ್ಯದ ಜೋಡಿಗೆ ಕರಿ ಮಣಿಯು ಹೋಲುವುದೆ
ಹರಿಯ ಚಲ್ವಿಕೆಗೆ ಹವಣಿಸಿ
ಹರಿಯ ಚಲ್ವಿಕೆಗೆ ಹವಣಿಸಿ ರಾಮೇಶಗೆ
ಸರಿಯಾಗುವೆ ಏನೆ ಬಿಡು ಬಿಡು ಕೇಳ ನಾರಿ ೯

## ೭೦

ಕತ್ತಲೆಗಂಜುವುದೇನು
ಮೈದುನ ನಿನ್ನ ಬತ್ತಲೆ ಮಾಡಿದನ
ಚಿತ್ತ ಸ್ವಸ್ಥ್ಯವಾದ ಚಪಲಾಕ್ಷಿ ನೀ ಇಂಥ
ಕತ್ತಲೆಗಂಜುವುದೇನ ಪ.

ಪುನುಗಿನ ಪರಿಮಳ ಬಿನುಗು ಬೆಕ್ಕಿಗೆ ಉಂಟೆ
ನಿನ್ನ ಮನದಿ ಪಾಂಡವರು ಸರಿಯೆಂದು ದ್ರೌಪತಿ
ನಿನ್ನ ಮನದಿ ಪಾಂಡವರು ಸರಿಯೆಂದು ಕೈ ಹಿಡಿದಿ
ಜನರೆಲ್ಲ ನಗರೆ ಜಗದೊಳು ದ್ರೌಪತಿ ೧

ಗಿಳಿಯಂಥ ಕಳೆಯ ಹೊಳೆಯ ಬಲ್ಲುದೆ ಗುಬ್ಬಿ
ತಿಳಿದು ನಿನ್ನ ಗರವು ಬಿಡು ಕಂಡ್ಯಾ ದ್ರೌಪತಿ
ತಿಳಿದು ನಿನ್ನ ಗರವು ಬಿಡು ಕಂಡ್ಯಾ ಐವರೂ ಹಳಿದು
ಕೈ ಹೊಯಿದು ನಗರೇನ ದ್ರೌಪತಿ ೨

ಆತುರವಾಗಿದ್ದ ಕೀಚಕನಿಗೆ
ಮಾತು ಕೊಟ್ಟವನ ಮಡುಹಿದಿ
ಮಾತು ಕೊಟ್ಟವನ ಮಡುಹಿದ ನಿನ್ನಂಥ
ಘಾತಕಳುಂಟೆ ಜಗದೊಳು ದ್ರೌಪತಿ ೩

ಮಾಯಗಾರುತಿ ಪತಿಯ ದಾಯದಾಟಕೆ ಹಚ್ಚಿ
ಕಾಯದ ಕಾಂತಿ ಅಡಗಿಸಿ
ಕಾಯದ ಕಾಂತಿ ಅಡಗಿಸಿ ಮೆರೆಸಿದಿ
ಯಾವ ಕಚ್ಚೆತನ ಪರಿಯಲೆ ದ್ರೌಪತಿ ೪

ಸೃಷ್ಟಿಕರ್ತನೆಂಬೊ ಧಿಟ್ಟ ಗಂಡನ ಒಯ್ದು
ಅಟ್ಟು ಹಾಕುವನ ಪರಿಯಲಿ
ಅಟ್ಟು ಹಾಕುವನ ಪರಿಯಲಿ ಕೈಯೊಳು
ಹುಟ್ಟು ಕೊಟ್ಟವನ ಮೆರೆಸೀದಿ ದ್ರೌಪತಿ ೫

ಕಳೆಯ ಸುರಿಯುವ ಮುದ್ದು ಎಳೆಯ ಚನ್ನಿಗಪತಿಗೆ
ಬಳೆಯನೆ ಇಡಿಸಿ ಜನರೊಳು
ಬಳೆಯನೆ ಇಡಿಸಿ ಜನರೊಳು ರೂಪವ
ತಿಳಿಯದಂತವನ ತಿರುಗಿಸಿ ದ್ರೌಪತಿ ೬

ರಾಜಪುತ್ರನ ಒಯ್ದುತೇಜಿ ಕೆಲಸಕೆ ಇಟ್ಟಿ
ಸೋಜಿಗವಲ್ಲ ಜನರೊಳು
ಸೋಜಿಗವಲ್ಲ ಜನರೊಳು ರೂಪವ
ಮಾಂಜುಕೊಂಡವನ ಮೆರೆಸಿದಿ ದ್ರೌಪತಿ ೭

ಘನ ಗಂಭೀರನ ಒಯ್ದು ದನದ ಕೆಲಸಕೆ ಇಟ್ಟಿ
ಜನರೆಲ್ಲ ನಗರೆ ಜಗದೊಳು
ಜನರೆಲ್ಲ ನಗರೆ ಜಗದೊಳು ದ್ರೌಪತಿ
ಮನಬುದ್ಧಿ ಎಂದು ಬರಬೇಕು ೮

ಅತಿ ಅಂತಃಕರಣಿ ಹಿತದ ಅಗ್ರಜನ ಒಯ್ದು
ರಥಿಕನ ಮಾಡಿ ಮೆರೆಸಿದಿ ದ್ರೌಪತಿ
ರಥಿಕನ ಮಾಡಿ ಮೆರೆಸಿದಿ ರಾಮೇಶನ
ಪತಿಗಳಭಿಮಾನ ಇರಲುಂಟೆ ದ್ರೌಪತಿ ೯

## ೭೧

ಎಂಥ ಕೌತುಕವೆ
ನಿಮ್ಮಿಬ್ಬರದೆಂಥ ಕೌತುಕವೆ
ಎಂಥ ಕೌತುಕ ಚಿಂತಾಮಣಿಯ ನೋಡಿ
ಸಂತೋಷ ವಾಗದೆ ಕಾಂತೆಯರು
ಕಾದುವ ಎಂಥ ಕೌತುಕವೆ ಪ.

ನಾರಿಯರಿಬ್ಬರ ಬಿಟ್ಟು ನೀರೊಳಡಗಿದ
ಮಾರಿ ತೋರದಲೆ ನೆಲವನೆ
ಮಾರಿ ತೋರದಲೆ ನೆಲವನೆ ಬಗಿದು
ಅತಿ ಕ್ರೂರನಾದರೂ ಬಿಡರಲೆ ಸಖಿಯೆ ೧

ತಿರಕ ತಾಯಿಯಸುದ್ದಿ ಅರಿತವನಲ್ಲದೆ
ದೊರೆತನ ಬಿಟ್ಟು ದನವನೆ ಕಾಯ್ದು

ದೊರೆತನ ಬಿಟ್ಟು ದನವ ಕಾಯ್ದರು
ನಿಮ್ಮ ಕರಕರೆ ಒಂದು ಬಿಡರೆಲೆ ಸಖಿಯೆ ೨

ಬತ್ತಲಾಗಿ ಎನ್ನ ಹತ್ತಿಲೆ ನಿಲ್ಲೆಂದು
ಎತ್ತ ಓಡಲೆನುತ ಕುದುರೆಯ
ಎತ್ತ ಓಡಲೆನುತ ಕುದುರೆ ಜಳಕಿಸಿ
ಬೆನ್ಹತ್ತಿ ಕೊಂಡವನ ಬಿಡರೆಲೆ ಸಖಿಯೆ ೩

ಪ್ರಳಯದಿ ಕಳವಳಿಸಿ ಕಳೆಯಲಾರೆನು ಕಾಲ
ನಳಿನಾಕ್ಷಿ ಆಗ ನೆರವಾದಿ
ನಳಿನಾಕ್ಷಿ ಆಗ ನೆರವಾದಿ ಉಪಕಾರ ಒಲಿದು
ಶ್ರೀಕೃಷ್ಣ ಮದುವ್ಯಾದ ಸಖಿಯೆ ೪

ಕುಂದುಗುಣಗಳೆಲ್ಲ ಮುಂದಕ್ಕೆ ತಾರದೆ
ಹಿಂದಿನ ಉಪಕಾರ ಸ್ಮರಿಸುತ
ಹಿಂದಿನ ಉಪಕಾರ ಸ್ಮರಿಸುತ ಅವಳು
ಮುಂದೆ ಬೇಕೆಂದು ಮನಸೋತ ಸಖಿಯೆ ೫

ಭಾವೆ ರುಕ್ಮಿಣಿ ನಿಮ್ಮ ಹೀನಗುಣನೋಡದೆ
ಕಾಮನ ಪಿತನು ಕೈ ಹಿಡಿದ
ಕಾಮನ ಪಿತನು ಕೈ ಹಿಡಿದ ಕಾರಣ
ಭೂಮಂಡಲವೆಲ್ಲ ನಮಿಸಿತು ಸಖಿಯೆ ೬

ಅಷ್ಟು ಜನರೊಳು ಧಿಟ್ಟತನವ ಮಾಡಿ
ಗಟ್ಯಾಗಿ ನೀನು ರಥವೇರಿ
ಗಟ್ಯಾಗಿ ನೀನು ರಥವೇರಿ ಧೈರ್ಯದಿ
ಕೃಷ್ಣನ ಬೆರೆದು ತೆರಳಿದಿ ಸಖಿಯೆ ೭

ಮುದ್ದು ರಾಮೇಶಗೆ ಕದ್ದು ಓಲೆಯ ಬರಿಯೆ
ಹದ್ದು ವಾಹನನು ಎರಗಿದ

ಹದ್ದು ವಾಹನನು ಎರಗಿದ ಕಾರಣ
ವಿದ್ವಜ್ಜನರೆಲ್ಲ ನಮಿಸಿತು ಸಖಿಯೆ ೮

## ೭೨

ಕಂಡೆವೆ ಕೌತುಕ
ಕಪಟದ ಬಾಲೆಯ ಕಂಡೆವೆ ಕೌತುಕವ
ಪರಹೆಂಡಿರು ಸಹಿತಾಗಿ
ಗಂಡನ ಬೆರೆಯೋದು ಪ.

ಪಟ್ಟದರಸಿಗೆ ಸಿಟ್ಟು ತುಂಬಿಸಿ ಭಾಳ
ಕುಟ್ಟಿ ಮೈದುನರ ಸವರಿಸಿ
ಕುಟ್ಟಿ ಮೈದುನರ ಸವರಿಸಿ ದ್ರೌಪತಿ
ಇಂಥವಳು ಹುಟ್ಟಬೇಕಿನ್ನು ಜಗದೊಳು ೧

ಗಂಡನ ಬಳಗವ ಚಂಡನಾಡಿಸಿ ಬಿಟ್ಟೆ
ಪುಂಡಗಾರ್ತಿಯೆ ಜಗದೊಳು
ಪುಂಡಗಾರ್ತಿಯೆ ಜಗದೊಳು ನಿನಕೀರ್ತಿ
ಕೊಂಡಾಡುತಾರೆ ದ್ರೌಪದಿ ೨

ನೂರು ಮಂದಿಯ ಕೊಂದು ಊರು ಕೇರಿಯಪಡೆದು
ಯಾರ್‍ಯಾರನ್ನೆಲ್ಲ ಅಡವಿಗೆ ದ್ರೌಪದಿ
ಯಾರ್‍ಯಾರನ್ನೆಲ್ಲ ಅಡವಿಗೆ ಅಟ್ಟಿದೆ
ಮಹಾರಾಯಳೆ ನಿನಗೆ ಭಯ ಉಂಟೆ ೩

ಜಾಣೆಯೆಂಬೊ ನುಡಿಯಿಂದ ವಾಣಿ ಜನಿಸಿ
ಸುಶ್ರೇಣಿ ತಾತನ್ನು ದ್ರೌಪತಿ
ಸುಶ್ರೇಣಿ ತಾತನ್ನು ಮದುವ್ಯಾದಿ ಇದಕಿನ್ನು
ಜಾಣೆಯರು ನಗರೆ ಜಗದೊಳು ೪

ಎಂತೆಂಥ ಪತಿಗಳ ಎಂತೆಂತು ಮಾಡಿದೆ
ಕೊಂಚರೆ ಭೀತಿ ನಿನಗಿಲ್ಲ
ಕೊಂಚರೆ ಭೀತಿ ನಿನಗಿಲ್ಲ ಧರ್ಮನ
ಶಾಂತ ಗುಣದಿಂದ ಉಳಿದಿದಿ ದ್ರೌಪತಿ ೫

ಒಂದೊಂದು ನಿನ್ನ ಗುಣವು ಚಂದಾಗಿ ವರ್ಣಿಸಲು
ಎಂದಿಗೆ ವಶವ ಎಲೆನಾರಿ
ಎಂದಿಗೆ ವಶವ ಎಲೆನಾರಿ ಐವರಿಗೆ
ಕುಂದು ಬಂದೀತು ಬಿಡುಕಂಡೆ ದ್ರೌಪತಿ ೬

ಇಷ್ಟಮಿತ್ರರೊಳು ಉಟ್ಟ ಸೀರೆಯಸೆಳೆದು
ಒಟ್ಟಿದನಾಗ ಸಭೆಯೊಳು
ಒಟ್ಟಿದನಾಗ ಸಭೆಯೊಳು ರಮಿಯರಸು
ಧಿಟ್ಟಿ ನಿನಮಾನ ಉಳಿಸಿದ ದ್ರೌಪತಿ ೭

## ೭೩

ಶ್ರೀಶನ ಸತಿಯರ ಹಾಸ್ಯವ ಮಾಡುತ
ಸೋಸಿಲೆ ಕೋಲಹೊಯ್ದೇವ ಕೋಲ ಪ.

ಧಿಟ್ಟೆ ನಾನೆಂಬೋದು ಸೃಷ್ಟಿಕರ್ತನೆ ಬಲ್ಲ
ಗಟ್ಯಾಗಿ ನಿನ್ನ ಗುಣಗಳ
ಗಟ್ಯಾಗಿ ನಿನ್ನ ಗುಣಗಳ ವರ್ಣಿಸಲು
ಸಿಟ್ಟು ಬಂದಿತು ಸಭೆಯೊಳು ೧

ಗಂಡನ ಬಳಗವ ಕಂಡರೆ ನಿನಗಾಗದು
ಲೆಂಡರ ಮನೆಗೆ ನಡೆದ್ಹೋಗಿ
ಲೆಂಡರ ಮನೆಗೆ ನಡೆದ್ಹೋಗಿ ಸೇರಿದ್ದು
ಪಂಡಿತರು ಕಂಡು ನಗುತಾರೆ ೨

ಘಟ್ಯದೆಗಾರಳು ಪೆಟ್ಟಿಗಂಜುವಳಲ್ಲ
ಎಷ್ಟು ಧೈರ್ಯವೆ ಎಲೆನಾರಿ
ಎಷ್ಟು ಧೈರ್ಯವೆ ಎಲೆನಾರಿ ನಿನ್ನ ಕೂಡ
ಕೃಷ್ಣ ಕಡಿ ಬೀಳೋ ತೆರನಂತೆ ೩

ಮುದದಿಂದಲೆ ದ್ವಾರಕಾಸದನದೊಳಗ್ಹೋಗಿ
ಕದನವ ಹೂಡಿ ಕೆಡಿಸುವೆ
ಕದನವ ಹೂಡಿ ಕೆಡಿಸುವೆ ನಿನ್ನಗುಣಕೆ
ಮದನನಯ್ಯನೆಂತು ಮನಸೋತ ೪

ಹಲವು ರಾಯರ ಗೆದ್ದ ಬಲುಧೀರರೆಲ್ಲ
ನಿನ್ನ ಬಲೆಯೊಳು ಬಿದ್ದು ಬಳಲೋರು
ಬಲೆಯೊಳು ಬಿದ್ದು ಬಳಲೋರು ಇದ ಕಂಡು
ಬಲರಾಮ ತಾನು ನಗುತಾನ ೫

ಹರ ಬ್ರಹ್ಮ ಮೊದಲಾದ ಸುರರು ಜರಿದು ನಾರಿ
ಹರಿಯು ಗುಣಪೂರ್ಣ ನೆನುತಲೆ
ಹರಿಯು ಗುಣಪೂರ್ಣ ನೆನುತಲೆ ಮಲ್ಲಿಗೆ
ಸರವ ಹಾಕಿದಿಯೆ ಕೊರಳಿಗೆ ೬

ಕೇಳೆ ರುಕ್ಮಿಣಿ ನಿನ್ನ ಭಾಳ ಚಾಪಲ್ಯ ನೋಡಿ
ಹೇಳ ಕೇಳದಲೆ ಹಿರಿಯರ
ಹೇಳ ಕೇಳದಲೆ ಹಿರಿಯರ ಕೃಷ್ಣಯ್ಯ
ಭೋಳೆ ತನದಿಂದ ಮದುವ್ಯಾದ ೭

ಗಂಡನ ಎದುರಿಗೆ ಗಂಡುಗಚ್ಚೆಯ ಕಟ್ಟಿ
ಗಂಡಸಿನಂತೆ ಧನುವೆತ್ತಿ
ಗಂಡಸಿನಂತೆ ಧನುವೆತ್ತಿ ಕಾದಿದ
ಬಂಡುಗಾರತಿಯೆನಿನ ತಂಗಿ ೮

ಅಕ್ಕ ತಂಗಿಯರ ಶೌರ್ಯ ಶಕ್ಯವೆ ವರ್ಣಿಸಲು
ನಕ್ಕು ನಾರಿ ಸರಿಯವರು
ನಕ್ಕು ನಾರಿ ಸರಿಯವರು ರಾಮೇಶಗೆ
ತಕ್ಕವರೇನೆ ಮಡದಿಯರು ಕೋಲ ೯

## ೭೪

ಬಿಂಕವ್ಯಾತಕ್ಕೆ
ನಮ್ಮ ಕೂಡ ಬಿಂಕವ್ಯಾತಕ್ಕೆ
ಅಕಳಂಕ ರುಕ್ಮಿಣಿಯರ
ಮನೆಗೆ ಅಹಂಕಾರದಲಿ
ಮುಯ್ಯ ತಂದು ಪ.

ವಾತನೊಡಗೂಡಿ ಜನಿಸಿ ಆತನ
ಮದುವೆ ಮಾಡಿಕೊಂಡೆ
ನೀತಿಯೇನ ನಿನಗೆ ದ್ರೌಪತಿ
ಈ ಮಾತು ಕೇಳಿ ಮಂದಿ ನಗರೆ ೧

ಹುಟ್ಟು ಹೊಂದು ನಾರಿ ನೀನು
ಎಷ್ಟೊಂದು ಗರವು ನಮ್ಮ ಕೂಡಯಾಕೆ
ಕೃಷ್ಣನ ಅರಸಿ ರುಕ್ಮಿಣಿಗೆ
ಒಂದಿಷ್ಟರೆ ದೋಷ ತೋರ ಸಖಿಯೆ ೨

ಜನನ ಮರಣವೆಂಬೆರಡು ಜಾಣೆ ರುಕ್ಮಿಣಿಬಲ್ಲಳೇನ
ಜನನಿ ಬೊಮ್ಮಗ ಎನಸಿ
ತಾನೆ ಜಗದಿ ಖ್ಯಾತಿ ತುಂಬಿಲ್ಲವೇನ
ಈ ಜಗದಿ ಖ್ಯಾತಿ ತುಂಬಿಲ್ಲವೇನ ೩

ನಿತ್ಯ ಮುಕ್ತಳುನಿರ್ವಿಕಾರಳು
ನಿತ್ಯ ನಿತ್ಯ ಜಗದುದ್ಧಾರಳು

ನಿತ್ಯ ಮೂರುತಿ ಕೃಷ್ಣನ ಭಜಿಸಿ
ನಿತ್ಯ ತೃಪ್ತಳು ಎನಿಸುತಿಹಳು ೪

ಅತ್ತಿಗೆಯರೆಂಬೊ ದಿವ್ಯ
ಅರ್ಥನಾಮವ ಜಪಿಸಿ
ಮತ್ತೆ ರಾಮೇಶನ ಅರಸಿಯರಿಬ್ಬರ
ಭೃತ್ಯಳಾಗಿ ಭಾಗ್ಯವ ಪಡಿಯೆ ೫

## ೭೫

ಹಿರಿಯ ಅತ್ತಿಗೆಯರ ಗರವು ಕಂಡೆವೆ
ಮೇರುಗಿರಿಗಿಂತ ಕೋಟಿ ಅಧಿಕವೆ ಸಖಿಯೆ
ನಾ ಹ್ಯಾಂಗೆಸುಮ್ಮನಿರಲಿ ಪ.

ಓಡಿ ಬಂದವಳು ಒಳಗೆ ಸೇರಿ
ಮಾತಾಡಳು ನೋಡಳು ನಮ್ಮ ಅಣ್ಣನ ಮಡದಿಯು
ನೋಡಳು ನಮ್ಮ ಅಣ್ಣನು ಮಡದಿಗೆ
ಮಾಡಿದ ಮೋಹ ತಲೆಗೇರಿ ೧

ಹೆಣ್ಣು ರುಕ್ಮಿಣಿ ತಮ್ಮ ಅಣ್ಣನವಂಚಿಸಿ
ಓಡಿ ಬಂದು ಕಣ್ಣಿಲೆನೋಡಿ ಕರೆಯಳು
ಕಣ್ಣಿಲೆ ನೋಡಿ ಕರೆಯಳು ಇವಳು ನಮ್ಮ
ಅಣ್ಣನ ಬಲವ ಹಿಡಕೊಂಡು ೨

ಮಂದಗಮನೆಯರ ವಾರ್ತೆ ಇಂದು
ರುಕ್ಮಿಣಿ ತಿಳಿದು ಬಂದಳು ಭಾಳೆ ವಿನಯದಿ
ಬಂದಳು ಭಾಳೆ ವಿನಯದಿ ದ್ರೌಪತಿಯ
ಆಲಿಂಗನವ ಮಾಡಿ ಕರೆದಳು ೩

ಬಾರವ್ವ ಸುಭದ್ರೆ ಏರವ್ವ ಸೋಪಾನ
ತೋರವ್ವ ನಿನ್ನ ವಚನವ
ತೋರವ್ವ ನಿನ್ನ ವಚನವ ಎನುತಲಿ
ದ್ವಾರದಿ ಕೈಯ್ಯ ಹಿಡಕೊಂಡು ೪

ಬಂದ ಬೀಗಿತ್ತಿಯರು ಚಂದದಿಂದ
ಇದುರುಗೊಂಡು ಮಂದಹಾಸದಲೆ ನುಡಿಸುತ
ಮಂದ ಹಾಸದಲೆ ನುಡಿಸುತ ರುಕ್ಮಿಣಿ
ಬಂದವರು ಯಾರು ಮನೆಯೊಳು ೫

ಸೊಂಡಿಲನಗರದ ಪಾಂಡು ಭೂಪನ ಸೊಸೆ
ಗಂಡುಗಲಿ ಪಾರ್ಥನ ಆರ್ಧಾಂಗಿ
ಗಂಡುಗಲಿ ಪಾರ್ಥನ ಆರ್ಧಾಂಗಿ ಸುಭದ್ರಾ
ಮುಯ್ಯವ ಕೈಕೊಂಡು ಬ್ಯಾಗ ತಿರುಗಿಸು ೬

ಹರದಿ ರುಕ್ಮಿಣಿ ದೇವಿ ಸೆರಗ ಹಿಡಿದು ದ್ರೌಪದಿಯ
ದೊರೆಗಳ ಹೆಸರು ನಮಗ್ಹೇಳೆ
ದೊರೆಗಳ ಹೆಸರು ನಮಗ್ಹೇಳೆ ರಾಮೇಶನ
ಪರಮಭಕ್ತರಿಗೆ ನುಡಿದಳು ೭

## ೭೬

ಕದನ ಕಠೋರಿ ಬಂದು
ಕಾಲುಕೆದರ ಬ್ಯಾಡ
ಮದನನ ಮಾತಿಗೆ
ಇದುರೇನ ಎಲ್ಲ ನೀ ನೋಡ ಪ.

ಓಡಿ ಬಂದವಳೆಂದು ಆಡಿದೆ ನೀ ಎನಗೆ
ತಿರುಗಿ ಆಡಿದಲ್ಲೆ ಏನೂ ಹುರುಳಿಲ್ಲ ಎಲೆ ನೋಡೆ

ತಿರುಗಿ ಆಡಿದಲ್ಲೆ ಏನೂ ಹುರುಳಿಲ್ಲ ಸುಭದ್ರ ನೋಡಿಕೋ
ನಿನ ಮನದಲ್ಲೆ ಎಲ್ಲ ನೋಡೆ ೧

ಅಣ್ಣನ ವಂಚಿಸಿ ಓಡಿ ಬಂದವಳೆಂದು
ಎನ್ನನೆ ನುಡಿದೆ ಸುಭದ್ರಾ ಎಲೆ ನೋಡೆ
ಎನ್ನನೆ ನುಡಿದೆ ಸುಭದ್ರಾ
ನಿನ್ನಂತೆ ಸನ್ಯಾಸಿಯೊಡನೆ ಬರಲಿಲ್ಲ ಎಲ್ಲಿ ನೋಡೆ ೨

ಅತ್ತೆಯ ಮಗಳೆಂದು ಹತ್ತೆಂಟು ತಾಳಿದೆ
ಒಂದುತ್ತರ ನಿನಗೆ ಕೊಡತೇನ ಎಲೆ ನೋಡೆ
ಒಂದುತ್ತರ ನಿನಗೆ ಕೊಡತೇನ ಸುಭದ್ರಾ
ಚಿತ್ತಕ್ಕೆ ಹೋಗಿ ನಡುವಂತೆ ಎಲೆ ನೋಡೆ ೩

ಒಂದು ನುಡಿದು ಹನ್ನೊಂದು ನುಡಿಸಿಕೊಂಡೆ
ಕುಂದದಂಥವಳೆ ನಿನ್ನ ಬಣ್ಣ ಎಲೆ ನೋಡೆ
ಕುಂದದಂಥವಳೆ ನಿನ್ನ ಬಣ್ಣ ಸುಭದ್ರಾ
ಬಂದದಾರಿ ಹಿಡಿದು ತಿರುಗಿ ಹೋಗೆ ೪

ಬಾಳುವರ ಮನೆ ಮುಂದೆ ಕೋಳಿ ಕೂಗಿದಂತೆ
ವೀಳ್ಯವ ಕೊಟ್ಟು ಯಾತರಿಂದ ಎಲೆನೋಡೆ
ವೀಳ್ಯವ ಕೊಟ್ಟು ಯಾತರಿಂದ ಹೊಡೆಸಿಕೊಂಡಿ
ನಿಲ್ಲದೆ ಹೋಗೆ ಮನೆತನಕ ಎಲೆ ನೋಡೆ ೫

ಕುದುರೆಯ ಸಂಗಡ ಕುರಿ ಹುಲ್ಲು ಮೆಯ್ದರೆ
ಕುದುರೆ ಹಿಂಗಾಲಿಲೆ ಒದೆಯದೆ ಎಲೆ ನೋಡೆ
ಕುದುರೆ ಹಿಂಗಾಲಿಲೆ ಒದೆಯದೆ ಸುಭದ್ರಾ
ಸುದತೆ ರುಕ್ಮಿಣಿಗೆ ಸರಿಯೇನೆ ನೋಡೆ ೬

ಆನೆಯ ಸಂಗಡ ಆಡು ಹುಲ್ಲು ಮೆಯ್ದೆರೆ
ಆನೆ ಹಿಂಗಾಲಿಲೆ ಒದೆಯದೆ ಎಲೆ ನೋಡೆ

ಆನೆ ಹಿಂಗಾಲಿಲೆ ಒದೆಯದೆ ಸುಭದ್ರಾ
ನೀ ರಾಮೇಶನ ಮಡದಿಯ ಸರಿಯೇನೆ ಎಲೆ ನೋಡೆ ೭

## ೭೭

ಸೈಯೆ ಸೈಯೆ ಸೈಯೆ ಸೈಯೆ ರುಕ್ಮಿಣಿ
ಕೈ ಹೊಯಿದು ಇದಕೆ ನಗುವರೊ
ಸೈಯೆ ಸೈಯೆ ಸತ್ಯಭಾಮೆ ಧ್ಯನನೀವೆ ನೀತಿ ಸೈಯೆ ಪ.

ಮಂದ ಗಮನೆಯರ ಮಾತು ಒಂದೊಂದು
ಬಲರಾಮ ಕೇಳಿ ಬಂದನು ಭಾಳ ನಗುತಲೆ
ಬಂದನು ಭಾಳ ನಗುತಲೆ
ಭಾಳೆ ಪುಣ್ಯ ಬಂದೊದಗಿತೆಂದು ಕೈ ಹೊಯಿದು ಸೈಯೆ ಸೈಯೆ ೧

ಎಷ್ಟು ಉಪವಾಸ ಮಾಡಿ ಇಷ್ಟು ಸಿದ್ಧಿ ಪಡೆದೆ
ಕಷ್ಟ ಬಟ್ಟಿದ್ದೆ ಬಹುಕಾಲ
ಕಷ್ಟ ಬಟ್ಟಿದ್ದೆ ಬಹುಕಾಲ ಭೀಷ್ಮನ ಹೊಟ್ಟೆಯ
ಪುಣ್ಯ ಒದಗಿತು ಸೈಯೆ ಸೈಯೆ ೨

ಸತ್ಯ ಭಾಮೆಯ ಪುಣ್ಯ ಅತ್ಯಂತ ಒದಗಿತು
ಹಿತ್ತಲಿನ ತುಳಸಿ ಬಲು ತಾಳ
ಹಿತ್ತಲಿನ ತುಳಸಿ ಬಲು ತಾಳ ಇದರಮ್ಯಾಲೆ
ಹೆತ್ತವರ ಪುಣ್ಯ ಒದಗಿತ ಸೈಯೆ ಸೈಯೆ ೩

ಅರಸರ ಮಕ್ಕಳು ನಿಮಗೆ ಬಿರುಸು ಮಾತುಗಳೆಷ್ಟು
ಸರಸಾಡೊ ಬಗೆಯ ಅರಿಯದೆ
ಸರಸಾಡೊ ಬಗೆಯ ಅರಿಯದೆ ಸಭೆಯೊಳು
ಸುರಿಸೋರೆ ಇಂಥ ವಚನವ ಸೈಯೆ ಸೈಯೆ ೪

ನಲ್ಲೆ ಸುಭದ್ರ ಇಂಥ ಸೊಲ್ಲು ಕೇಳರಿಯಳು
ಎಲ್ಲ ವಿದ್ಯೆಯಲಿ ಕುಶಲರೆ
ಎಲ್ಲ ವಿದ್ಯೆಯಲೆ ಕುಶಲರೆ ನೀವು
ಬಲ್ಲಿರೆ ಇದರ ಬಗೆಯಲ್ಲ ಸೈಯೆ ಸೈಯೆ ೫

ಬಿಡದೆ ಕೂಗುವದೆಷ್ಟು ಹೊಡೆಯೊ ಭೇರಿಗಳೆಷ್ಟು
ಇಂಥನುಡಿಯ ಸುಭದ್ರೆ ಅರಿಯಳು
ಇಂಥನುಡಿಯ ಸುಭದ್ರೆ ಅರಿಯಳು
ಸಭೆಯೊಳು ನುಡಿವರೆ ಇಂಥ ವಚನವ ಸೈಯೆ ಸೈಯೆ ೬

ಜಾತಿಗಾರರಂತೆ ಮಾತಿಲೆ ಕುಶಲರು
ಭೂತಳದೊಳಗೆ ಪ್ರತಿಯಿಲ್ಲ
ಭೂತಳದೊಳಗೆ ಪ್ರತಿಯಿಲ್ಲ ರಾಮೇಶನ
ಪ್ರೀತಿಯ ಮಡದಿಯರು ಹೌಂದ ಹೌಂದ ಸೈಯೆ ಸೈಯೆ ೭

## ೭೮

ಇಂದ್ರರೊ ದೇವೇಂದ್ರರೊ
ಚಂದ್ರನಂತೆ ಹೊಳೆಯುತ ಬಂದರ್‍ಯಾರವರು ಪ.

ರಾಮ ಪಾಂಡವರಿಗೆ ಕ್ಷೇಮಾಲಿಂಗನಕೊಟ್ಟು
ಪ್ರೇಮದಿ ಕೈಯ ಹಿಡಿದನು
ಪ್ರೇಮದಿ ಕೈ ಹಿಡಿದು ಮಾತಾಡಿದ
ಸ್ವಾಮಿ ಸನ್ನಿಧಿಗೆ ಬರಬೇಕು ೧

ನೊಸಲಲ್ಲೆ ಕಸ್ತೂರಿ ಎಸೆವುತ ಸಂಪಿಗೆ
ಕುಸುಮದ ಮಾಲೆ ಅಲವುತ
ಕುಸುಮದ ಮಾಲೆ ಅಲವುತ ಪ್ರದ್ಯುಮ್ನ
ವಸುಧಿಪಾಲಕರ ಕರೆದನು ೨

ದುಂಡು ಮುತ್ತುಗಳಿಟ್ಟು ಪೆಂಡೆ ಸರ ಹಾಕಿ
ಪುಂಡರೀಕಾಕ್ಷ ಕುಳಿತಿದ್ದ
ಪುಂಡರೀಕಾಕ್ಷ ಕುಳಿತಿದ್ದ ಚರಣಕ್ಕೆ
ಪಾಂಡವರು ಬಂದು ಎರಗಿದರು ೩

ರನ್ನ ಮಾಣಿಕ ಬಿಗಿದ ಹೊನ್ನ ಮಂಚದ ಮೇಲೆ
ಪನ್ನಂಗಶಯನ ಕುಳಿತಿದ್ದ
ಪನ್ನಂಗಶಯನ ಕುಳಿತಿದ್ದ ಚರಣಕ್ಕೆ
ಸುಭದ್ರೆ ಬಂದು ಎರಗಿದಳು ೪

ಮಿಂಚಿನಂತೆ ಹೊಳೆಯುತ ಪಂಚಬಾಣನ
ಪಿತ ಮಂಚದ ಮೇಲೆ ಕುಳಿತಿದ್ದ
ಮಂಚದ ಮೇಲೆ ಕುಳಿತಿದ್ದ ಚರಣಕ್ಕೆ
ಪಾಂಚಾಲೆ ಬಂದು ಎರಗಿದಳು ೫

ಸೂಸು ಮಲ್ಲಿಗೆ ಹೂವ ಹಾಸಿದ ಮಂಚದಿ
ವಾಸುಕಿಶಯನ ಕುಳಿತಿದ್ದ
ವಾಸುಕಿಶಯನ ಕುಳಿತಿದ್ದ ಚರಣಕ್ಕೆ
ಆಶೇಷ ಜನರೆಲ್ಲ ಎರಗಿದರು ೬

ಸ್ವಾಮಿ ರಾಮೇಶನು ಕ್ಷೇಮ ಕುಶಲವ ಕೇಳಿ
ಬ್ರಾಹ್ಮಣರ ದಯವು ನಿಮಗುಂಟು
ಬ್ರಾಹ್ಮಣರ ದಯವು ನಿಮಗುಂಟು ಎನುತಲೆ
ಸ್ವಾಮಿ ಶ್ರೀಕೃಷ್ಣ ನುಡಿದನು ೭

## ೭೯

ಇಂದು ಭಕ್ತರು ಬಂದರೆಂದು
ಗೋವಿಂದ ತಾ ನಲೆದಾಡಿದ
ಗೋಪಾಲ ತಾ ನಲೆದಾಡಿದ ಪ.

ಹರಿಯು ಆಡಿದ ಮಾತು ದೊರೆ ಧರ್ಮನು ಕೇಳಿ
ಕರುಣಾಳು ನಿಮ್ಮ ಕೃಪೆಯಿಂದ
ಕರುಣಾಳು ನಿಮ್ಮ ಕೃಪೆಯಿಂದ
ಪರಮ ಆಶೀರ್ವಾದ ಇರಲುಂಟು ೧

ಮುತ್ತಿನ ಮಂಚದ ಹತ್ತಿಲೆ ಸಾಲಾಗಿ
ಮತ್ತ ಪಾಂಡವರು ಕುಳಿತರು
ಮತ್ತ ಪಾಂಡವರು ಕುಳಿತರು ಹರುಷದಿ
ಭಕ್ತವತ್ಸಲನ ಮುಖನೋಡಿ ೨

ಹಸಿರು ಪಚ್ಚವ ಬಿಗಿದ ಕುಸುರು ಸಿಂಹಾಸನ
ದೇಶಕೆಲ್ಲ ಬೆಳಕು ಎಸೆಯುತ
ದೇಶಕೆಲ್ಲ ಬೆಳಕು ಎಸೆವೊ ಸಿಂಹಾಸನದಿ
ವಸುಧಿಪಾಲಕರು ಕುಳಿತರು ೩

ಇಂದ್ರಾದಿಗಳು ಮುನಿವೃಂದ ಸಹಿತಾಗಿ ಬಂದು
ಒಂದೆ ಮನದಲೆ ಕುಳಿತರು
ಒಂದೆ ಮನದಲೆ ಕುಳಿತರು ದೇವಕಿ
ನಂದನ ನೋಡಿ ಹರುಷಾಗಿ ೪

ರನ್ನ ಮಾಣಿಕ ಬಿಗಿದ ಹೊನ್ನಮಂಚಕೆ
ಹೊಂದಿ ಕನಿ ಸುಭದ್ರೆ ದ್ರೌಪದಿ
ಕನಿ ಸುಭದ್ರೆ ದ್ರೌಪದಿ ಕುಳಿತರು
ಚನ್ನ ಕೃಷ್ಣಯ್ಯನ ಮುಖನೋಡಿ ೫

ಚಿತ್ರ ವಿಚಿತ್ರದ ರತ್ನಗಂಬಳಿ ಮ್ಯಾಲೆ
ಪುತ್ರರ ಸಹಿತ ಹರುಷದಿ
ಪುತ್ರರ ಸಹಿತ ಹರುಷದಿ ಕುಳಿತರು
ಭಕ್ತವತ್ಸಲನ ಮುಖ ನೋಡಿ ೬

ಸಾಲು ದೀವಿಗೆಯಂತೆ ಬಾಲೆಯರು
ಕುಳಿತಾರೆ ಬಾಲರ ಸಹಿತ ಹರುಷದಿ
ಬಾಲರ ಸಹಿತ ಹರುಷದಿ ರುಕ್ಮಿಣಿ ನಿಂತಿಹಳು
ಲೋಲ ರಾಮೇಶನ ಮುಖನೋಡಿ ೭

## ೮೦

ಎಲೆ ಮಾನಿನಿ ಬಲು ನುಡಿಯೋದುಚಿತವೆ
ಭಲಾ ಭಲಾ ಎನಿಸು ಅನುಗಾಲ ಪ.

ಬಂದ ಜನರು ಬಲು ಚೆಂದಾಗಿ ಕುಳಿತಿಹರು
ಚಂದಿರವದನೆ ಸುಭದ್ರಾ
ಚಂದಿರವದನೆ ಸುಭದ್ರಾ ನಿನ್ನ ಮುಖ
ಕುಂದಿತಾಕೆಂದು ಕಮಲಾಕ್ಷ ೧

ಬಲ್ಲೆ ಭಾಷೆ ನಿನ್ನ ಕ್ಷುಲ್ಲತನದ ಬುದ್ಧಿ
ಮಲ್ಲಿಗೆಯಂಥ ಸುಕುಮಾರಿ
ಮಲ್ಲಿಗೆಯಂಥ ಸುಕುಮಾರಿ ಗರತಿಗೆ
ಹೊಲ್ಲ ಮಾತುಗಳ ನುಡಿಯೋರೆ ೨

ಮಾನುಳ್ಳ ಮಗಳಿಗೆ ನಾನಾ ಮಾತುಗಳಂದಿ
ಏನೆಂಬೋರಿದಕೆ ಜನರೆಲ್ಲ
ಏನೆಂಬೋರಿದಕೆ ಜನರೆಲ್ಲ ಸತ್ಯಭಾವೆ
ಮಾನಾಪಮಾನ ನಿನಗಿಲ್ಲ ೩

ಮದ್ದುಣಕಿ ಹೂವು ಉದ್ದಾದರೇನ
ಮುದ್ದು ಮಲ್ಲಿಗೆಯ ಸರಿಯೇನ
ಮುದ್ದು ಮಲ್ಲಿಗೆಯ ಸರಿಯೇನ ಭಾವೆ
ಸುಭದ್ರಾಗೆ ನೀನು ಸರಿಯೇನ ೪

ತಂಗಿಗಾಡಿದ ಮಾತು ರಂಗರಾಮೇಶ ಕೇಳಿ
ಬಂಗಾರದಂಥ ಗುಣನಿಧಿ
ಬಂಗಾರದಂಥ ಗುಣನಿಧಿ ಸುಭದ್ರೆಗೆ
ವ್ಯಂಗ್ಯ ಮಾತುಗಳ ನುಡಿವೋರೆ ೫

## ೮೧

ಎಷ್ಟು ಜಾಣಳೆ ಸುಭದ್ರಾ ಎಷ್ಟು ಜಾಣಳೆ
ನಷ್ಟ ಮಾತು ನಿನ್ನದು
ನಾವು ಅಷ್ಟು ತಾಳಿಕೊಂಡೆವಲ್ಲ ಪ.

ಮಾನ್ಯ ಮಾನ್ಯರೊಳಗೆ ನೀನು
ಕನಿ ರುಕ್ಮಿಣಿಗೆಧಿಕವಾಗಿ
ಎನ್ನ ಹೀನ ನುಡಿದು ಹರಿಯ
ನೀಬೆನ್ನ ಬಿದ್ದು ಬಂದುಕುಳಿತೆ ೧

ಎಲ್ಲ ಜನರೊಳು ಎನಗೆ
ಹೊಲ್ಲಮಾತಾಡಿ ಬಹಳೆ
ಫುಲ್ಲನಾಭನ ಬದಿಲೆ ಬಂದು
ಫುಲ್ಲ ಮಲ್ಲಿಗಿ ಹಾಂಗಕುಳಿತೆ ೨

ಅಷ್ಟು ಜನರೊಳಗೆ ಎನಗೆ
ನಿಷ್ಠುರವಾಡಿ ಬಹಳ
ಕೃಷ್ಣರಾಯರ ಬದಿಲೆ ನೀನು
ಶ್ರೇಷ್ಠಳಾಗಿ ಬಂದು ಕುಳಿತಿ ೩

ನೋಡ ಬಂದ ಜನರೊಳಗೆ
ಆಡಿಕೊಂಡಿ ಅಕ್ಕನ ಬಹಳ
ಮೂಡಲಗಿರಿವಾಸಗೆ
ಮಾರಿ ಬಾಡಧಾಂಗೆ ತೋರಿಕೊಂಡಿ ೪

ಮಾನ ಬಿಟ್ಟು ಮಂದಿಯೊಳಗೆ
ನಾನಾ ಮಾತು ಎನಗೆ ಆಡದಿ
ನೀನು ರಾಮೇಶನಂಘ್ರಿಯಲಿ
ಮೌನ ದಿಂದ ಬಂದು ಕುಳಿತಿ ೫

## ೮೨

ಸಾಕು ಬಿಡು ಭಾವೆ
ಸಾಕು ಬಿಡು ನಿನ್ನ
ಹೋಕೆ ಮಾತುಗಳೆಷ್ಟು
ಸಾಕು ಬಿಡು ಪ..

ಮದಗಜಗಮನೆ ನೀ ಒದೆವ್ಹೋದ್ಯಾತಕೆ ಕಲಿತೆ
ಬದಿಯಲಿದ್ದವರು ಇದಕೆ ನಗರೇನೆ ಸಖಿಯೆ
ಬದಿಯಲಿದ್ದವರು ನಗರೇನೆ ನಿನ್ನ ಬುದ್ಧಿ
ಅದ್ಭುತವಾಗಿ ಈಗ ಬೆಳೆದಿದೆ ಸಖಿಯೆ ೧

ಅಧರದಿಜೊಲ್ಲು ಸುರಿವೊ ಕುದುರೆಯ ಮೋರೆ ತಾ
ವದನ ಚಂದುಟಿಯ ಸುದತೆಯ ಸಖಿಯೆ
ವದನ ಚಂದುಟಿಯ ಸುದತಿ ಸುಭದ್ರಾಗೆ
ಕದನ ಕಠೋರಿ ಸರಿಯೇನ ಸಖಿಯೆ ೨

ಎತ್ತಿ ಒಯ್ದುವ ನಿನ್ನ ಅತ್ಯಂತ ಸುಖಿಸಿದ
ಲತ್ತಿತಿಂದೊಬ್ಬ ಬಳಲುವ
ಲತ್ತಿತಿಂದೊಬ್ಬ ಬಳಲುವ ನಿನ್ನ ನಡತೆ
ವಿಸ್ತಾರವಾಗಿ ಈಗ ತಿಳಿಸಿದೆ ಸಖಿಯೆ ೩

ತಾಯಿ ಮಕ್ಕಳೊಳು ನ್ಯಾಯವನಿಕ್ಕುವಿ
ಮಾಯಗಾರುತಿಯೆ ಬಲು ಮೂದೇವಿ
ಮಾಯಗಾರುತಿಯೆ ಬಲು ಮೂದೇವಿ ನಿನಕಂಡು
ಬಾಯಿ ಬಿಡುತಾರೆ ಜನರೆಲ್ಲ ಸಖಿಯೆ ೪

ಖ್ಯಾತ ರಾಮೇಶ ಈಗ ಈ ಮಾತೆಲ್ಲಿ ಕಲಿತೆಂದ
ಚಾತುರ್ಯದಲ್ಲಿ ಚಪಲನೆ
ಚಾತುರ್ಯದಲ್ಲಿ ಚಪಲ ಚನ್ನಿಗನೆಂಬೊ
ಪಾರ್ಥನು ನಿನಗೆ ಗುರುವೇನ ಸಖಿಯೆ ೫

## ೮೩

ಯಾಕೊ ಪಾರ್ಥನ ಹೆಸರು ಹೋಕೆ ಮಾತಿನ ಕೃಷ್ಣ
ಸಾಕು ನೀ ನಮ್ಮ ಸರಿಯೇನೊ ಕೋಲ
ಸಾಕು ನೀನಮ್ಮ ಸರಿಯೇನೊ ಬಲಿಯ ಮನೆಯ
ಬಾಗಿಲ ಕಾಯ್ದು ಬದುಕಿದಿ ಕೋಲ ಪ.

ಚಿಕ್ಕಂದಿನಾರಭ್ಯ ವತ್ಸಗಳನೆ ಕಾಯ್ದು
ತುಚ್ಛನಾಗಿದ್ಯೊ ಜನರೊಳು
ತುಚ್ಛನಾಗಿದ್ಯೊ ಜನರೊಳು ರುಕ್ಮಿಣಿಯ
ಕೂಡಿ ಹೆಚ್ಚಿನವನೆಂದು ಹೆಸರಾದ್ಯೊ ಕೋಲ ೧

ಜನಿಸಿದಾಕ್ಷಣದಲ್ಲಿ ಜನನಿ ಜನಕರನಗಲಿದಿ
ದನಗಳ ಕಾಯ್ದ್ಯೊ ವನವನ
ದನಗಳ ಕಾಯ್ದ್ಯೊ ವನವನ ತಿರುಗಿದ್ದು
ಮನಕೆ ತಾರಯ್ಯ ಮರೆಯದೆ ಕೋಲ ೨

ಒಡಲಿಗಿಲ್ಲದೆ ಹೋಗಿ ತುಡುಗುತನವ ಮಾಡಿ
ಗಡಗಿ ಸಂದಿಯಲಿ ಅಡಗಿದ್ಯೋ
ಗಡಗಿ ಸಂದಿಯಲಿ ಅಡಗಿದ್ಯೋ ಕೃಷ್ಣ
ನಿನಗೆ ಬಡಿವಾರ ಬಂದ ಬಗಿ ಹೇಳೊ ಕೋಲ ೩

ಸತ್ಯಭಾಮೆ ನಿನ್ನ ಹೊಸ್ತಿಲ ಹೊಗಲಿಕ್ಕೆ
ಅತ್ಯಂತ ಪದವಿ ಒದಗಿತು

ಅತ್ಯಂತ ಪದವಿ ಒದಗಿತು ಕೃಷ್ಣ
ನಿನ್ನ ಹೆತ್ತವರ ಭಾಗ್ಯ ಅರಿವೆಯೆ ಕೋಲ ೪

ಹೆಂಡಿರ ಪುಣ್ಯದಿಂದ ಕಂಡೆಯಾ ಈ ಭಾಗ್ಯವ
ಪಾಂಡಿತ್ಯವೆಲ್ಲೊ ಬಲವೆಲ್ಲೊ
ಪಾಂಡಿತ್ಯವೆಲ್ಲೊ ಬಲವೆಲ್ಲೊ ಕೃಷ್ಣ ನಿನ್ನ
ಪಂಡಿತರು ಕೇಳೋ ಹುಸಿಯಲ್ಲ ಕೋಲ ೫

ನಾರಿಯರ ಪುಣ್ಯದಿ ಏರಿದ್ಯೋ ರಥವಾಜಿ
ಧೀರತನದಿಂದ ಗಳಿಸಿದ್ಯೊ
ಧೀರತನದಿಂದ ಗಳಿಸಿದ ಗಳಿಕೆಯ
ತೋರೊ ರಾಮೇಶ ನಮಗಿನ್ನು ಕೋಲ ೬

## ೮೪

ಸಾಕೊ ಪಾರ್ಥ ನಿನಗ್ಯಾಕೊ ಬಡಿವಾರ
ನಿಮ್ಮ ಕೀರ್ತಿಅರಿಯೆವೊ
ಪಾರ್ಥ ಸಾಕೊ ನಿನಗೆಬಡಿವಾರ ಪ.

ಬೀಗನಾಡಿದ ಬಲು ಬಿಂಕದ ಮಾತು
ಕೇಳಿ ಸಾಗರಶಯನ ಮುರಿದೆದ್ದ
ಸಾಗರಶಯನ ಮುರಿದೆದ್ದ ಅರ್ಜುನ
ಹ್ಯಾಂಗಂದ್ಯೊ ನಿನ್ನ ಮನದಾಗ ೧

ಏನಲೊ ಅರ್ಜುನ ಈ ನುಡಿ ನಿನಗ್ಯಾಕೊ
ನೀನು ನಿಮ್ಮವಳು ತಿರು ತಿರುಗಿ
ನೀನು ನಿಮ್ಮವಳು ತಿರು ತಿರುಗಿ ಮಾರಿದರೆ
ಕಾಣಿಯ ಬೆಲೆಯ ಹೋಲಲಾರೆ ೨

ದಶರಥರಾಯನ ಭಾಗ್ಯ ವರ್ಣಿಸಲು ವಶವಲ್ಲ
ಹೊಸದಾಗಿ ಇವಳು ಹೋಗಲಿಕ್ಕೆ
ಹೊಸದಾಗಿ ಇವಳು ಹೋಗಲಿಕ್ಕೆ ಎನಗೆ
ಈ ದೆಶೆಗೇಡಿ ಬಂದು ದಣಿಸಲಿಲ್ಲ ೩

ಹಿಂದೆ ಇವಳಿಂದಲೆ ನೊಂದೆನೋ ಅನ್ನಕ್ಕೆ
ಸಂದೇಹವಾಗಿ ಅಡವಿಯ
ಸಂದೇಹವಾಗಿ ಅಡವಿಯ ತಿರುಗಿಸಿದವಳಿಗೆ
ಅಂದಣ ಆನೆ ಬರಲುಂಟೆ ೪

ಬಾಲೆ ವಾಲ್ಮೀಕನ ಆಲಯದಲ್ಲಿದ್ದಾಗ
ಮೇಲು ವಸ್ತ್ರವು ಇಲ್ಲ ಅಶನಿಲ್ಲ
ಮೇಲ್ವಸ್ತ್ರ ಇಲ್ಲ ಅಶನಿಲ್ಲದಾಗ ಇವಳ
ಕಾಲ ಲಕ್ಷಣವೆಲ್ಲಿ ಅಡಗಿತ್ತೆ ೫

ಅಕ್ಷ ಮ್ಯಾಲಂತರದಿ ವೃಕ್ಷದಲ್ಲಿದ್ದಾಗ
ಲಕ್ಷ ಕಷ್ಟಗಳ ಬಡುವಾಗ
ಲಕ್ಷ ಕಷ್ಟಗಳ ಬಡುವಾಗ ಇವಳ
ಕೈಯ ಲಕ್ಷಣವೆಲ್ಲಿ ಅಡಗಿತ್ತೆ ೬

ನಿಮ್ಮವರ ಬಡಿವಾರ ಬಮ್ಮ ವರ್ಣಿಸಲಾರ
ಹೆಮ್ಮಿ ನೋಡಿದರೆ ವಿಪರೀತ
ಹೆಮ್ಮಿ ನೋಡಿದರೆ ವಿಪರೀತ ಎಲೊ ಪಾರ್ಥ
ಸುಮ್ಮನೆ ಯಾಕೆ ಮುನಿಸಾಗಿ ೭

ಕೇಳಿ ನಿಮ್ಮವರ ಕೀರ್ತಿ ಭಾಳೆ
ವಿಸ್ತಾರವಾಗಿ ಹೇಳಲು ಲಜ್ಜೆ ಬರತದೆ
ಹೇಳಲು ಲಜ್ಜೆ ಬರ ತದೆ ನಮ್ಮ
ಅಮ್ಮನ ತಾಳುವಿಕೆಯಿಂದ ಉಳಿದಾರೊ ೮

ನಾರು ವಸ್ತ್ರವನುಟ್ಟು ನಾರಿ ಸಂಚರಿಸುವಾಗ
ವೀರ ರಾಮೇಶ ಜರಿದಾಗ
ವೀರ ರಾಮೇಶ ಜರಿದ ಕಾಲಕ್ಕೆ
ಇವಳ ಮೋರೆ ಲಕ್ಷಣವು ಅಡಗಿತು ೯

## ೮೫

ಮಡದಿ ಭಾಗ್ಯ ಎಂಬುವಿಯಾಕೊ ರಂಗಯ್ಯ
ನಿನ್ನ ಬಡಿವಾರವ ಹೇಳಿಕೊಂಬೆ ಸಾಕೊ ಕೃಷ್ಣಯ್ಯ ಪ.

ಬಿಡು ಬಿಡು ಸಣ್ಣ ಮಾರಿಯನ್ನು ನೀ ಮಾಡಬ್ಯಾಡ
ಬಡಿವಾರವ ಹೇಳಿಕೊಂಬುವುದೇನೊ
ಕಡುಭಾಗ್ಯ ಪುರುಷನಾಗೊ ನೀನು
ಎತ್ತಿಕೊಂಡ್ಹೋಗಿ ಮಡುವು ಸೇರಿಕೊಂಡಿ ಮತ್ತೇನೊ ೧

ದೊರೆತನ ಹೇಳಿಕೊಂಬೆ ಸಾಕೊ ರಂಗಯ್ಯ
ನಿನ್ನ ಕರಕರ ಹಲ್ಲು ತಿಂಬೊ ಸಿಟ್ಟು ಕೃಷ್ಣಯ್ಯ
ಬಿರುಗಣ್ಣು ಬಿಡವ್ಹೋದ್ಯಾಕಿಷ್ಟು ರಂಗಯ್ಯ
ನಿನ್ನ ಉರಿಮಾರಿಗೆ ಅಂಜೋರೆಲ್ಲೊ ಅಷ್ಟು ೨

ಧರೆ ಮ್ಯಾಲೆ ರಾಜ್ಯ ಹ್ಯಾಂಗ ರಂಗಯ್ಯ
ನಿನ್ನ ತಗಿ ತಗಿ ಬಲುಲೀಲಾ ಕೈಯ್ಯ ಕೃಷ್ಣಯ್ಯ
ಸುಗುಣನೆಂತೆಂಬೊ ಮತಿಯಾದುದಕ್ಕೆ
ಜನರು ನಗದೆ ಸೈ ಸೈ ಎಂದಾರು ಬರಿಯ ಕೃಷ್ಣಯ್ಯ ೩

ಧೀರ ಧನವಂತನಲ್ಲೊ ಸಾಕೊ ರಂಗಯ್ಯ
ಆದರೆ ವನದಿನಾರು ವಸ್ತ್ರವನುಟ್ಟುಕೊಂಡಿ ಯಾಕೊ ಕೃಷ್ಣಯ್ಯ
ಚೋರನಂತಾಡಿಕೊಂಬಿ ಸಾಕೊ ರಂಗಯ್ಯ
ಇದ ಕೇಳಿದ ವೀರರೆಂಬವರು ನಗತಾರೊ ಕೃಷ್ಣಯ್ಯ ೪

ವಸ್ತ್ರವಿಲ್ಲೆಂಬೊ ಎಚ್ಚರಿಕಿಲ್ಲೊ ರಂಗಯ್ಯ
ತೇಜಿ ಹತ್ತೇನು ಎಂದು ಬರುವಿಯಲ್ಲೊ ಕೃಷ್ಣಯ್ಯ
ಕತ್ತಿ ಕೈ ಶೂರನೆಂಬೊದೆಲ್ಲೊ ರಂಗಯ್ಯ
ರಾಮೇಶ ನಿನ್ನ ಹತ್ತಿಲ್ಲಿದ್ದರೆಲ್ಲ ನಗುವರೊ ಕೃಷ್ಣಯ್ಯ ೫

## ೮೬

ನಿಲ್ಲದೆ ವೈರಿಗಳುನಿನ್ನ ಮ್ಯಾಲೆ ಬಂದರೆ
ಬಿಲ್ಲುಕೆಳಗಿಟ್ಟು ಬೇಡಿಕೊಂಡೆಲೊ ಪಾರ್ಥ
ಸಾಕೊ ಸಾಕೊ ನಿನ್ನ ಹೋಕೆ ಬಡಿವಾರವು
ಸಾಕು ಜನರು ನಗರೆ ಪ.

ನಿನ್ನ ಪುಣ್ಯವ ಪಾರ್ಥ ಬಣ್ಣಿಸಲೊಶವಲ್ಲ
ಇನ್ನು ಸುಭದ್ರಾ ಒಲಿಯಲು
ಇನ್ನು ಸುಭದ್ರಾ ಒಲಿಯಲು ಸುಖದಿಂದ
ಮಾನ್ಯವಾಗಿದ್ಯೊ ಜನರೊಳು ೧

ಕನ್ಯೆ ಸುಭದ್ರೆ ನಿನ್ನ ಮದುವ್ಯಾಗಿ
ಅನ್ನ ವಸ್ತ್ರದ ನೆಲಿಗಂಡ್ಯೊ
ಅನ್ನ ವಸ್ತ್ರದ ನೆಲಿಗಂಡ್ಯೊ ಎಲೊ ಪಾರ್ಥ
ನಿನ್ನ ಭಾಗ್ಯವನ್ನೆ ಅರಿಯಲೊ ಪುರುಷ ೨

ಗಿಳಿ ಮಾತಿನ ಜಾಣ ಹೊಳೆವು ಎಷ್ಟೇಳಲ್ಯೊ
ಬಳೆಯನಿಟ್ಟದ್ದು ಮರೆತೇನೊ
ಬಳೆಯನಿಟ್ಟದ್ದು ಮರೆತೇನೊ ಸುಭದ್ರಾ
ತಿಳಿಯದೆ ನಿನ್ನ ಬೆರೆದಳೊ ಎಲೊ ಪಾರ್ಥ ೩

ಹೆರಳು ಹಾಕಿಸಿ ಕೊಂಡು ತಿಳಿಯಲಿಲ್ಲವೊ ಬುದ್ದಿ
ಇಳೆಯೊಳು ಇದು ಅಪವಾದ

ಇಳೆಯೊಳಗಿದು ಅಪವಾದ ಬಲರಾಮ
ಹಳಿಯದೆ ನಿನ್ನ ಬಿಡವೋನೆ ಎಲೊ ಪಾರ್ಥ ೪

ದನಗಾಹಿ ನೀನೆತ್ತ ವನಜಕುಸುಮಳೆತ್ತ
ಕನಕ ಕಬ್ಬಿಣಕೆ ಸರಿಯೇನೊ
ಕನಕ ಕಬ್ಬಿಣಕೆ ಸರಿಯೇನೊ ಸುಭದ್ರೆಗೆ
ಅಣಕವಾಡಿದನೆ ರಮಿಯರಸು ೫

## ೮೭

ದನವ ಕಾಯ್ವೊನೆ ದೈನ್ಯ ಬಡುವವನೆ
ವನಜಭವಾಂಡಕೆ ಒಡೆಯನಾಗೆಂದರೆ
ಒಲ್ಲದೆ ವನವನ ತಿರುಗಿದನಮ್ಮ ನೋಡಮ್ಮಯ್ಯ ಪ.

ದನಗಾಹಿ ಎಂದರೆ ಎನಗೇನು ಸಂಶಯವಿಲ್ಲ
ಜನರೆಲ್ಲ ಬಲ್ಲರು ಈ ಮಾತು
ಜನರೆಲ್ಲ ಬಲ್ಲರು ಈ ಮಾತು ಭಾವಯ್ಯ
ನೆನಪಿಸಿ ಕೊಟ್ಟೆಲ್ಲೊ ಮರೆತಿದ್ದೆ ೧

ಗೋಪಾಲ ಶಬ್ದಾರ್ಥ ನೀ ಕೇಳಿ
ಶ್ರೀ ಕೃಷ್ಣ ಕೋಪವಿನ್ಯಾಕೊ ಎನಮ್ಯಾಲೆ
ಕೋಪ ವಿನ್ಯಾಕೊ ಎನ ಮ್ಯಾಲೆ ಭಾವಯ್ಯ
ನೀ ಪೇಳಿಕೊಂಡ್ಯೊ ನಿಷ್ಕಪಟಿ ೨

ಕುದುರೆಯ ಮಾರಿಯ ಹೂವು ಗಣ್ಣಿನ ವರನಿಗೆ
ಮದಗಜಗಮನೆ ಮನಸೋತು
ಮದಗಜಗಮನೆ ಮನಸೋತು ಮ್ಯಾಲಿನ್ನು
ಬದಲು ಮಾತಾಡಿ ಫಲವೇನೊ ೩

ನಾರುವ ಮೈಯವ ನೀರೊಳು ಅಡಗಿದ
ಹಂದಿ ಮೈಯವನೆ ಮಹಾಕೋಪಿ
ಹಂದಿ ಮೈಯವನೆ ಮಹಾಕೋಪಿ ತಿರುತಿಂಬೊ
ಹಾರುವನ ಗೊಡವೆ ನಮಗ್ಯಾಕೊ ೪

ಕೊಡಲಿಯ ಪಿಡಕೊಂಡ ಪಡೆದಮಾತೆಯ
ಕೊಂದೆ ಒಡಲಿಗಿಕ್ಕದಲೆ ಮಡದಿಯ
ಒಡಲಿಗಿಕ್ಕದಲೆ ಮಡದಿಯ ಕೊಂಡೊಯ್ದು
ಅಡವಿಗಟ್ಟಿದ ಮಹಾ ಮಹಿಮನೆ ೫

ಜಾರ ಚೋರನೆಂದು ಜಗದೊಳು ಹೆಸರಾದಿ
ಅಪಾರವಾದ ವನಿತೆಯರು
ಅಪಾರವಾದ ವನಿತೆಯರ ಒಗೆತನಕೆ
ನೀರು ತಂದಿದ್ದ ಮಹಾಮಹಿಮನೆ ೬

ಭಂಡ ಗಾರನಂತೆ ದೇಹ ಕಂಡಜನಕೆಲ್ಲ
ತೋರಿ ಪುಂಡಗಾರನಂತೆ ಹಯವೇರಿ
ಪುಂಡಗಾರನಂತೆ ಹಯವೇರಿ ಹಾರಿಸುವ
ಲೆಂಡ ರಾಮೇಶನ ಅರಿವೆನೊ ೭

## ೮೮

ಬಲ್ಲೆ ಬಲ್ಲೆ ನಿಮ್ಮೆಲ್ಲರ ಗುಣವನು ನಾನು ಪಾರ್ಥ
ಅವರ ಹೊಲ್ಲತನವ ಹೇಳಲು ಹೋಗುವಿ ಕೋಪಿಸಿ ನೀನು ಪ.

ದೊರೆ ಧರ್ಮನೆಂಬೊ ಬರಿ ಬಿಂಕದ ಹೆಸರ್ಯಾಕೊ
ಬರಿಯ ಬಿಂಕದ ಹೆಸರ್ಯಾಕೊ ಜನ ಒರಲಿ ಒರಲಿ
ಬಾಯಿ ತೆರೆಯಬಾರದು ದಯಸಾಕೊ
ಹಿರಿಯನೆಂಬೊ ಹರಲಿಗೆ ತಕ್ಕವನಲ್ಲ

ಇವ ಹರಲಿಗೆ ತಕ್ಕವನಿವನಲ್ಲ
ನಿಮ್ಮ ಚರಿಯವ ಕೇಳುತ ಅಂಜರೊ ನರರೆಲ್ಲ ೧

ಕುಂಭಿಪಾಕದೊಳು ಕುದಿಸುವ ಕೆಲವರು
ಕೇಳೋ ಅದು ದಯವೆಂಬೊ
ಮಾತಿದು ಮಂದಿಗೆ ಇರದು ಹೇಳೊ
ಜಂಬವೆಂಬುದು ತುಂಬಿದೆ ಇವನಲ್ಲೆಷ್ಟು ಇದು
ನಮ್ಮ ಅಂಬುಜಾಕ್ಷನಲಿ ಅತಿ ಬ್ಯಾಗ
ಬಾಹೋದು ಸಿಟ್ಟು ೨

ಅನ್ಯ ಲೋಕದವರ ನ್ಯಾಯ ಕೇಳುವನಿವನಲ್ಲ
ತನ್ನ ಬುದ್ದಿಯನು ತಾ ಕಳೆದನು ಧರ್ಮನು ಎಲ್ಲ
ಮಾನ್ಯ ಮಾನ್ಯರೊಳು ಮಾನ ಭಂಗಿಸುವುದು
ಇರುವುದು ಏನೊ
ನಮ್ಮ ಚದುರ ರಾಮೇಶನು
ಚನ್ನಾಗಿ ನಗುತಿಹನುತಾನು ೩

## ೮೯

ಒಳ್ಳೆವಾಜಿಯ ಕಲಿತಿದ್ದಿತಾಳೊ ಬುದ್ಧಿಲ್ಲ ಕೇಳೊ
ಒಳ್ಳೆ ವಾಜಿಯ ಕಲಿತಿ ತಾಳೊ
ಸುಳ್ಳು ಕೆಲಸವ ಹೇಳಿ ಸುಳಿಯುವಿ ನೆರೆಮನೆಯ
ಚಲುವನರಿಯುತ ಚಲುವೆರಿಬ್ಬರ ಕುಚೋದ್ಯದಲಿ ಪ.

ಹೆಣ್ಣು ಕೊಟ್ಟವನಿಗೆ ಕಣ್ಣು ಕಾಣದು ಏನೊ
ಇನ್ನೆಲ್ಲಿ ವರನ ಕಾಣದೆ
ಇನ್ನೆಲ್ಲಿ ವರನ ಕಾಣದೆ ಇಂಥವಗೆ
ಹೆಣ್ಣು ಕೊಟ್ಟವನು ಬಲು ಹೇಡಿ ೧

ಕೊಟ್ಟರೇನಾಯಿತು ಅಟ್ಟುಣಲು ಬಲ್ಲ
ಹುಟ್ಟು ಗತಿಯಂತು ಮೊದಲಿಲ್ಲ
ಹುಟ್ಟು ಗತಿಯಂತು ಮೊದಲಿಲ್ಲ ದಾನವ
ಕೊಟ್ಟ ಬಲೀಂದ್ರ ಇದು ಬಲ್ಲ ೨

ಕುಲವಿಲ್ಲಗೋತ್ರವಿಲ್ಲ ನೆಲೆಯಿಲ್ಲ ಆಚಾರವಿಲ್ಲ
ಬಲುದೈತ್ಯರೊಳು ಹಗೆಯಾದ
ಬಲುದೈತ್ಯರೊಳು ಹಗೆಯಾದ ಇಂಥವಗೆ
ಜಲನಿಧಿ ಮಗಳ ಕೊಡಬಹುದೆ ೩

ಮೂರು ಗುಣಗಳ ಮೀರಿದವ
ನೀಚನೆನಿಸುವ ಇವನು ನೀಚನೆನಿಸುವ
ಇವನ ಗುಣಯಾರು
ಅರಿಯರು ಧರೆ ಮ್ಯಾಲೆ ೪

ಹಾಲು ಕೆನೆಯ ಕದ್ದು ಬಾಲೆರೆಲ್ಲರಪೀಡಿಸಿ
ಬಾಲನಾಗಿ ಒರಳ ಎಳೆಯುತ
ಬಾಲನಾಗಿ ಒರಳ ಎಳೆಯುತ
ಜನನಿಗೆ ಚಾಲವರೆದದ್ದು ಮರೆತೇನೊ ೫

ಬೆಣ್ಣಿ ಮೊಸರು ಕದ್ದು ಹೆಣ್ಣುಮಕ್ಕಳ ಕಾಡಿಸಿ
ಮುನ್ನ ತೊತ್ತಿನ ಮನೆಯಲ್ಲಿ
ಮುನ್ನ ತೊತ್ತಿನ ಮನೆಯಲ್ಲಿ ಉಂಡು
ನೀ ಹೆಣ್ಣಾಗಿದ್ಯಲ್ಲೊ ರಮಿಯರಸು ೬

## ೬೦

ಎಂಥ ಸೂಕ್ಷ್ಮವ ನೋಡಿರಿವನ
ನಮ್ಮ ಕಾಂತೆ ದ್ರೌಪತಿದೇವಿಗೆ ವರಹೀನ ಪ.

ಸಣ್ಣ ಕೂಸಿದ್ದಾಗ ಇವನು ಸೂರ್ಯಗೆ ಹಣ್ಣೆಂದು
ಹಾರಿದ ಗಗನಕ್ಕೆ ತಾನು ಉಡ್ಡೀನ ಗೈದು
ನೀರಧಿಯ ದಾಟಿದನು
ಇವನ ಅಂಗದ ಕೋಮಲ ಬಣ್ಣ ವರ್ಣಿಸಲೇನು ೧

ಗಂಧಮಾದನ ಗಿರಿ ತಂದು ನೋಡಿ ಗಿರಿ
ನಿಂದಲ್ಲೆ ಹಿಂದಕ್ಕೆ ಒಗೆದ ಈಡ್ಯಾಡಿ
ಒಂದೊಂದು ಬೆಡಗವ ನೋಡಿ
ನಮ್ಮ ಇಂದಿರೇಶನು ನಕ್ಕ ಕೌತುಕ ಮಾಡಿ ೨

ಹುಟ್ಟಿದಾಗ ಭೀಮ ಒಂದಿಷ್ಟು ಎತ್ತಿ
ಪಟ್ಟನೆ ಬಿದ್ದು ಕೌತುಕ ಮಾಡಿದನೆಷ್ಟು
ಬೆಟ್ಟಗಳ ಒಡೆದು ಹಿಟ್ಟೆಟ್ಟು
ಇವನ ಅಂಗದ ಕೋಮಲ ವರ್ಣಿಸಲೆಷ್ಟು ೩

ಖಂಡಗನ್ನವು ಗ್ರಾಸವಂತೆ
ಅದು ಉಂಡು ಸಾಲದೆ ಭಿಕ್ಷೆ ಬೇಡಿದನಂತೆ
ಕಂಡು ತಾನರಿಯಳು ಕಾಂತೆ
ಇಂಥ ದಿಂಡ ಪುರುಷನ ಬೆರೆದಳು ಕಾಂತೆ ೪

ಘನ್ನಗರಳ ಕುಡಿದನಂತೆ
ಅದು ತನ್ನ ದೇಹವ ತಪಿಸುತಲಿದ್ದವರಂತೆ
ಸನ್ಯಾಸ ಇವಗ್ಯಾಕೆ ಕಾಂತೆ
ನಮ್ಮ ಚೆನ್ನ ರಾಮೇಶ ನೋಡಿನಕ್ಕನಂತೆ ೫

## ೯೧

ಸಾಕೊ ರಂಗ. ಅರಸುತನ ಯಾಕೊ ಯಾಕೊ
ಗೋಕುಲದ ಗೊಲ್ಲರು ನುಗಿಸಿ ಗಲ್ಲವ ಹಿಂಡಿ
ಕಾಕು ಮಾಡಿದ್ದು ನಿನಗೆ ಬೇಕೊ ಬೇಕೊ ಪ.

ರುದ್ರ ಬ್ರಹ್ಮ ಹತ್ಯಾಕಾರ ಕ್ಷುದ್ರ ಬಲೀಂದ್ರನು
ಕದ್ದೊಯ್ದ ಸುವರ್ಣ ಮುಕುಟವ
ಕದ್ದೊಯ್ದ ಸುವರ್ಣ ಮುಕುಟವ ಬಲರಾಮ
ಮಧ್ಯಪಾನಿ ಎಂದು ನುಡಿದನು ನುಡಿದನು ೧

ಮಗನ ಮಗನು ಬಲು ಕೊಂಡೆಗಾರನಾದ
ಮಗಳ ಮಗ ನಿನ್ನ ಹಣಿಗಚ್ಚಿದ
ಮಗಳ ಮಗ ನಿನ್ನ ಹಣಿಗಚ್ಚಿದ್ದು ಕಂಡು
ನಗತಾರೊ ನಿನ್ನ ಸರಿಯವರು ಸರಿಯವರು ೨

ಮಾತೃದ್ರೋಹಿ ಶುಕ ಪಿತೃದ್ರೋಹಿ ಪ್ರಲ್ಹಾದ
ಭ್ರಾತೃದ್ರೋಹಿ ವಿಭೀಷಣ
ಭ್ರಾತೃದ್ರೋಹಿ ವಿಭೀಷಣ ಇವರು ಮುಖ್ಯ
ಪಾತ್ರರೊ ನಿನ್ನ ಕರುಣಕೆ ಕರುಣಕೆ ೩

ಸ್ವಾಮಿದ್ರೋಹಿ ಅಕ್ರೂರ ಗುರು ದ್ರೋಹಿ ಪ್ರಲ್ಹಾದ
ಬ್ರಾಹ್ಮಣರ ದ್ರೋಹಿಗಳು ಯಾದವರು
ಬ್ರಾಹ್ಮಣರ ದ್ರೋಹಿಗಳು ಯಾದವರು ನಿನ್ನ ಮುಖ್ಯ
ಪ್ರೇಮಕ್ಕೆ ವಿಷಯರೊ ವಿಷಯರೊ ೪

ಅರಿಯದಲೆ ನಿನ್ನ ಎದೆಯಲೊದ್ದ ಭೃಗು ಋಷಿ
ದುರುಳ ಶಿಶುಪಾಲನ ಸಭೆಯೊಳು
ದುರುಳ ಶಿಶುಪಾಲನ ಸಭೆಯೊಳು ಬೈದದ್ದು
ಸರಿಬಂತೆ ರಾಮೇಶನ ಮನಸಿಗೆ ಮನಸಿಗೆ ೫

## ೯೨

ಕೋಲ ಕೋಲೆನ್ನ ಕೋಲ
ಕೋಲ ಕೋಲೆನ್ನ ಕೋಲ
ಕೋಲಾಹಲವ ಮಾಡಿ
ಬಾಲೆಯರು ಪಾರ್ಥಗೆ ಕೋಲ ಪ

ಕಟ್ಟಿ ಜಾನ್ಹವಿಯಲ್ಲಿ ಬಿಟ್ಟು ಬದುಕಲು ಭೀಮ
ಥಟ್ಟನೆ ಮಗ್ಗಲ ಹಚ್ಚಿ ಬಿಟ್ಟಿತು ಸರ್ಪಪ್ರಾಣ ೧

ಕುಸುಮದಂಥವಳಿಗೆ ಸವಳ ಪುರುಷನು
ವಿಷದ ಲಡ್ಡಿಗೆ ತಿಂದು ಭಸ್ಮ ಮಾಡಿದ ಭೀಮ ೨

ಲಜ್ಜೆ ಬಿಟ್ಟು ಅರ್ಜುನ ಖೋಜಾನೆಂದೆನಿಸಿಕೊಂಡಿ
ವರ್ಜ್ಯವಾಯಿತು ಮಾನ ನಿರ್ಜರೋತ್ತಮ ನಕ್ಕ ೩

ಹೆಣ್ಣಲ್ಲ ಗಂಡಲ್ಲ ಬಣ್ಣ ವಿಷ್ವ್ಯಾಕೊ ನಿನಗೆ
ಸಣ್ಣದಿ ನೆನೆದು ಕೀರ್ತಿ ಅಣ್ಣ ಬಲರಾಮನಕ್ಕನು ೪

ಶೂರತನ ವೆಲ್ಲ ನೀಗಿ ಸೀರೆಯನುಟ್ಟುಕೊಂಡಿ
ಬಾರದೆ ನಾಚಿ ನಿಂತೆಶೌರಿ ರಾಮೇಶನಕ್ಕನು ಕೋಲ ೫

## ೯೩

ಕೇಳೊ ಗೋವಿಂದ ಹೇಳಿದರಂತು ಬಲು ಚಂದ
ಇಂದಿರೇಶನ ಗುಣ ಚಂದಿಲ್ಲ
ಚಾರವಿಲ್ಲ ಅಂದರೆ
ಭಾಳ ಬಲುಕೋಪ ಕೇಳೊ ಗೋವಿಂದ ಪ

ಭೇರಿ ಬಾರಿಸಿ ಕೇಳುತ ಭೂರಿಜನರ ಕೂಡಿ
ಭೋರೆಂಬೊ ಕಾಳಿ ಹಿಡಿಸುತ
ಭೋರೆಂಬೊ ಕಾಳಿ ಹಿಡಿಸುತ ಖಳರ
ಸಂಹಾರ ಮಾಡಿದ ಮಧುರೆಯಲಿ ಕೇಳೊ ೧

ಹೊರಗಿಂದ ಬಂದಳು ತಿರುಗಲ ತಿಪ್ಪಿಯು
ಹೆರವರಿಗುಪಕಾರಿ ಮನೆಗೆ ಮಾರಿ

ಹೆರವರಿಗುಪಕಾರಿ ಮನೆಗೆ ಮಾರಿ ಮಕ್ಕಳ
ಕೊರಳ ಹಿಚುಕಿ ಕೊಂದಳು ೨

ತಲೆಹ್ಯೊಕ ಹಿರಿಯವ ಚಿಕ್ಕವ ಚಂಚಲ
ಬಹು ಚಾಡಿಕೋರ ಇನ್ನೊಬ್ಬ
ಬಹು ಚಾಡಿಕೋರ ಇನ್ನೊಬ್ಬ ಎನುತಲಿ
ಫಲ್ಗುಣ ನಗುತ ನುಡಿದನು ೩

ಇಂದ್ರಲೋಕಕೆ ಹೋಗಿ ಸುರತರು ತರುವಾಗ
ಇಂದ್ರ ಬಂದಿದ್ದ ಜಗಳಕ್ಕೆ
ಇಂದ್ರ ಬಂದಿದ್ದ ಜಗಳಕ್ಕೆ ಆಗ
ನಮ್ಮಕ್ಕನಿಂದ ಮಾನ ಉಳಿದೀತೊ ೪

ನಿಲ್ಲೊ ನಿಲ್ಲೊ ನಿನ್ನ ಸೊಸೆ ಎಂಬೊಳು
ತಾನು ಎಲ್ಲರ ಬಾಯಿಗೆ ಬರವೋಳು
ಎಲ್ಲರ ಬಾಯಿಗೆ ಬರುವೋಳು ಇದರ ಮ್ಯಾಲೆ
ಒಳ್ಳೇದೊ ನಿನ್ನ ಒಗೆತನ ೫

ಬಲು ಪತಿವ್ರತೆಯೆಂದು ಜನರೆಲ್ಲ ಹೊಗಳೋರು
ತಲೆಯಲ್ಲಿ ಹೊತ್ತ ಮಹಾದೇವ
ತಲೆಯಲ್ಲಿ ಹೊತ್ತ ಮಹಾದೇವ ಇಂಥವಳ
ಬಲುಗುಣವಂತೆ ಎನಬಹುದೆ ೬

ಅಚ್ಯುತ ನೀನೊಬ್ಬ ಹುಚ್ಚಾಗೊ ಹುರುಳಾಗೊ
ಮೆಚ್ಚಿದವರೆಲ್ಲ ನಿನಗುಣ
ಮೆಚ್ಚಿದವರೆಲ್ಲ ನಿನಗುಣ ಕಲಿತಮ್ಯಾಲೆ
ಉಚ್ಚ ರಾಮೇಶನ ಒಗೆತನ ಕೇಳೊ ಗೋವಿಂದ ೭

## ೯೪

ಕಾಂತೆ ದ್ರೌಪತಾದೇವಿಗೆಂತು ಮರುಳಾದಿರಿ
ಭ್ರಾಂತಿ ಹಿಡಿತೇನೊ ಏ ಹೀನ
ಎಂಥ ನ್ಯಾಯವಯ್ಯ
ಈ ಮಾತಿಗಿನ್ನೆಂತು ನಕುಲರಾಯ ಪ.

ಹೆಣ್ಣು ಮಕ್ಕಳು ಹೊಳೆವೋದು
ತಪ್ತ ಸುಣ್ಣದಂತೆ ತಿಳಿವೋದು
ಸಣ್ಣವರೇನೀವು ಅಣ್ಣನ ಮಡದಿಗೆ
ಕಣ್ಣು ಹಾಕುವರೇನೊ ಏ ಹೀನಾ ೧

ಜಾತಿ ಮಾಣಿಕ ಮಾಲೆ
ಕೊಡಲು ತಂದು ಕೋತಿ ರಾಜನ ಕೈಲಿ
ಚಾತುರ್ಯದ್ವಸ್ತವು ನೀತಿಲೆ ಹಿಡಕೊಂಡು
ಆತುರ ಮಾಡಿದಂತೆ ನಿಮ್ಮಂತೆ ೨

ನಕುಲರಾಯನೆ ಕೇಳೊ
ಸುಂದರಿಯಲ್ಲೆ ಕಕುಲಾತೆ ಭಾಳೊ
ಸುಖಚಂದ್ರವದನಳೆ ಸಕಲರು
ಬೆರೆಯಲು ನಕಲಿ ಆಯಿತು ಕಾಣೊನಿನ್ನಾಣೆ ೩

ಅದ್ಭುತ ಮಹಿಮಳೊ ಧರ್ಮರಾಯಗೆ
ಮುದದಿಕೊಟ್ಟರು ಕೇಳೊ
ಅದ ತಾಳಲಾರದೆ ಇದು ನಿಮಗ್ಯೆವರು
ಸುದತಿಯ ಬೆರೆಯುವರೇನೊ ಏ ಹೀನ ೪

ಅತಿ ಪತಿವ್ರತೆಯಳೊ ಬ್ರಹ್ಮಗೆ
ಮುಂದೆ ಸತಿಯಾಗುವಳೊ ಕೇಳೊ

ಮತಿಗೆಟ್ಟು ಐವರು ಅತಿ ಬಾಯಿಬಿಡುವರೊ
ರಾಮೇಶ ಪತಿ ನಗುವನು ಭಾಳೆ ಏ ತಾಳೊ ೫

## ೯೫

ಕಮಲಾಲಯ ಕೈಹಿಡಿದೆನ್ನ ಪಾಲಿಸು
ಮುನ್ನ ಕರುಣ ಕಟಾಕ್ಷದಿ ಎನ್ನಕಮಲಾಲಯ ಪ

ಸ್ವಾಮಿ ಭೃತ್ಯನ್ಯಾಯ ಅರಿಯದೆ ನಾ ನಿನ್ನ
ಪರಮ ಪಾಮರನೆಂದು ನುಡಿದೆನು
ಪರಮ ಪಾಮರನೆಂದು ನುಡಿದ
ಅಪರಾಧವ ಸ್ವಾಮಿ ಚಿತ್ತದಲೆ ಹಿಡಿಬ್ಯಾಡ ೧

ಗುಣನಿಧಿ ನೀ ಎಂದು ಗುಣಕೆ ಕೀರ್ತನೆ ಗೈದೆ
ಎಣಿಸದಿರೆನ್ನ ಅಪರಾಧ
ಎಣಿಸದಿರೆನ್ನ ಅಪರಾಧ ಎನುತಲೆ
ಮಣಿದು ಸಾಷ್ಟಾಂಗ ಕ್ಕೆರಗಿದಳು ೨

ನಿನ್ನವರ ಅಪರಾಧ ಇನ್ನೇನು ನೋಡದೆ
ಮನ್ನಿಸ ಬೇಕೊ ಕಮಲಾಕ್ಷ
ಮನ್ನಿಸ ಬೇಕೊ ಕಮಲಾಕ್ಷ ಎನುತಲಿ
ಕನಿದ್ರೌಪತಿ ನುಡಿದಳು ೩

ಬಡನಡ ಬಳಕುತ ಕುಚಗಳಲ್ಲಾ ಡುತ
ಮುಡಿದಿದ್ದ ಪುಷ್ಪ ಉದುರುತ
ಮುಡಿದಿದ್ದ ಪುಷ್ಪ ಉದುರುತ ಸುಭದ್ರೆ
ಅಣ್ಣನ ಅಡಿಗೆರಗಿದಳು ೪

ಹೆಣ್ಣು ಕೊಟ್ಟ ಮ್ಯಾಲೆ ಹಿತವ ಚಿಂತಿಸಬೇಕು
ಇನ್ನು ನುಡಿದಲ್ಲಿ ಫಲವೇನೊ

ಇನ್ನು ನುಡಿದಲ್ಲಿ ಫಲವೇನೊ ಅಣ್ಣಯ್ಯ
ಎನ್ನ ಮುಖವ ನೋಡಿ ಕರುಣಿಸೊ ೫

ಎನ್ನವ್ವ ಸುಭದ್ರಾ ಈ ನುಡಿನಿನಗ್ಯಾಕೆ
ನೀನು ನಿಮ್ಮಿಂದ ನಿಮ್ಮವರು
ನೀನು ನಿಮ್ಮಿಂದ ನಿಮ್ಮವರಿಗೆ
ಪ್ರಾಣವ ನಾನು ಕೊಡುವೆನು ೬

ಮೊದಲೆ ಅತ್ತೆಯ ಮಗ ಆದರದಿಂದ
ನಿನ್ನ ಕೊಟ್ಟೆ ಹೆದರೋನೆ ಅವನು ನಮಗಿನ್ನು
ಹೆದರೋನೆ ಅವನು ನಮಗಿನ್ನು ಎನುತಲೆ
ಮುದದಿ ರಾಮೇಶ ನುಡಿದನು ೭

## ೯೬

ಸುಳ್ಳಿಗೆ ನಗರೇನೊರಂಗಯ್ಯ
ನಿನ್ನ ಕಳ್ಳತನವ ನೋಡಿ ಪ.

ಹಾರುವ ಹದ್ದನೇರಿ ತಿರುಗಾಡುವಿ
ಜಾರಿಬಿದ್ದರೆ ತೆರನೇನೊ
ಜಾರಿಬಿದ್ದರೆ ತೆರನೇನೊ ನಿನಗೆ
ಬುದ್ಧಿಯಾರು ಹೇಳುವರೊ ಧರೆ ಮ್ಯಾಲ ೧

ಕ್ಷೀರ ಸಮುದ್ರಶಾಯಿ ಎಂದರೆ ಹಿಗ್ಗುವಿ
ಯಾರು ಅರಿಯರು ನಿನ್ನ ಹುಳುಕು
ಯಾರು ಅರಿಯರು ನಿನ್ನ ಹುಳುಕು ಅತ್ತೆಮನೆ
ಸೇರಿದವನೆಂದು ನಗತಾರೊ ೨

ನೀರೊಳು ನಿನ್ನ ಮನೆ ಹಾವಿನ ಮ್ಯಾಲೆ ನಿದ್ರೆ
ಹಾರುವ ಹದ್ದನೇರುವಿ

ಹಾರುವ ಹದ್ದನೇರುವಿ ತಿರುತಿಂಬೊ
ಮೂರು ಅಹಂಕಾರ ನಿನಗ್ಯಾಕೊ ३

ಮಗಳ ಕೊಟ್ಟೆನೆಂದು ಮಮಕಾರದಿಂದಲೆ
ಸುಗುಣ ಸಮುದ್ರ ಉಳುಹಿದ
ಸುಗುಣ ಸಮುದ್ರ ಉಳುಹಿದ ಕಚ್ಚುವ
ಶೇಷಖಗರಾಜನಿಂದ ಕೈಕಾಯ್ದ ೪

ಹಾರುವ ಗರುಡ ಹಾರಿಸೇನೆಂದರೆ
ಮಾರುತಿ ಕರವ ನೆಗಹಿದ
ಮಾರುತಿ ಕರವ ನೆಗಹಿದ ಕಾರಣ
ಹಾರುವ ಗರುಡ ಕೈ ಕಾಯ್ದ ೫

ಕಾಲ ಯವನನ ಕೂಡ ಕಲಹವ
ಮಾಡಿಬಂದು ಮೂಲೆಲೆ ಹೋಗಿ ಅಡಗಿದಿ
ಮೂಲೆಲೆ ಹೋಗಿ ಅಡಗಿದಿ ಮುಚಕುಂದ
ರಾಯ ನಿಂತಾಗ ಉಳದೆಲ್ಲೊ ೬

ಯಾದವರ ಹೊರತಾಗಿ ಕಾಯ್ದಿಲ್ಲ ಒಬ್ಬರನ
ಮಧುವೈರಿ ನೀನು ಗೆಲಲಿಲ್ಲ
ಮಧುವೈರಿ ನೀನು ಗೆಲಲಿಲ್ಲ ರಮಿಯರಸ
ಮಧೂಕದಿಂದ ಅವರ ಮುಡುಹಿದ ೭

## ೯೭

ನೆನೆಸಿ ನೆನೆಸಿ ನಗುವರಮ್ಮಯ್ಯ
ಮನಸಿಜನಯ್ಯನ ಮಿತ್ರಿ ಧೇನಿಸಿ
ಧೇನಿಸಿ ಹೇಳಿ ಬರೆಸಿದ ಚಿತ್ತಾರವ
ಕಂಡು ನೆನೆಸಿ ನೆನೆಸಿ ನಗುವರಮ್ಮ ಪ.

ಅತ್ತಿಗೆಯರು ಕುಳಿತಲ್ಲೆ ಅರ್ಥಿಯ ನೋಡುವ
ಬರೆಬತ್ತಲೆ ಗೊಂಬೆ ಬಗೆ ಬಗೆ
ಬತ್ತಲೆ ಗೊಂಬೆ ಬಗೆ ಬಗೆ ಕುಶಲರ್ಥ
ಚಿತ್ತಾರವ ಯಾರು ಬರೆಸಿಹರು ೧

ಜಾತಿ ಹಂಸ ಪಕ್ಷಿಗಳು ಮಾತಿನ ಗಿಳಿವಿಂಡು
ನೂತನ ನವಿಲು ಬರೆಸಿಲ್ಲ
ನೂತನ ನವಿಲು ಪಕ್ಷಿ ಬರೆಸಿಲ್ಲ
ಹನುಮನೆಂಬೊ ಕೋತಿ ಯಾಕೆ ಬರೆಸಿಹರು ೨

ಗಂಡ ಭೇರುಂಡ ಮೃಗವ ತಿದ್ದಿ ತಾನು
ಬರೆಸಿಲ್ಲ ಬಿದ್ದು ಜನರೆಲ್ಲ ನಗುವಂತೆ
ಬಿದ್ದು ಜನರೆಲ್ಲ ನಗುವಂತೆ ತಾನು
ಮುದಿಹದ್ದ ಯಾಕೆ ಬರೆಸಿಹರು ೩

ಎಂಟು ದಿಕ್ಕಿಗೊಪ್ಪೊ ಬಂಟರ ಬರೆಸಿಲ್ಲ
ಕುಂಟ ಸಾರಥಿಯ ವಶವಾಗಿ
ಕುಂಟ ಸಾರಥಿಯ ವಶವಾಗಿ
ತಿರುಗಾಡುವ ಸೊಟ್ಟ ಸೂರ್ಯನ ಚಿತ್ತಾರ ಬರೆಸಿಹರು ೪

ಸುಂದರ ಸುಂದರ ವೃಂದಾರಕರನೆಲ್ಲ ಬಿಟ್ಟು
ಬಂದ ಜನರೆಲ್ಲ ನಗುವಂತೆ
ಬಂದ ಜನರೆಲ್ಲ ನಗುವಂತೆ ಕಳೆಗುಂದಿದ
ಚಂದ್ರನ ಚಿತ್ತಾರ ಬರೆಸಿಹರು ೫

ರೂಢಿಗೊಡೆಯನ ಮನೆಯ ಗೋಡೆ
ಮ್ಯಾಲಿನ ಗೊಂಬೆ ನೋಡಿದವರೆಲ್ಲ ನಗುವಂತೆ
ನೋಡಿದವರೆಲ್ಲ ನಗುವಂತೆ ತಾತನ
ಕೋಡು ಇಲ್ಯಾಕೆ ಬರೆಸಿಹರು ೬

ಚೆನ್ನ ರಾಮೇಶನ ಹೊನ್ನ ಗೋಡೆಯ
ಮ್ಯಾಲೆ ಮುನ್ನೆ ಜನರೆಲ್ಲ ನಗುವಂತೆ
ಮುನ್ನೆ ಜನರೆಲ್ಲ ನಗುವಂತೆ ರುಗ್ಮನ
ಪನ್ನಿ ವಿಸ್ತಾರ ಬರೆಸಿಹರು ಚಿತ್ತಾರ ೭

## ೯೮

ಧೀರ ಶೂರನ್ನ ಗುಣಗಂಭೀರ ಶೂರನ್ನ
ಪೋರತನದ ಈ ನಾರಿಯರ
ನೆಚ್ಚದಿರು ವೀರ ಶೂರನ್ನ ಪಲ್ಲ

ಎಲ್ಲ ಮಂಗಳಕಾರ್ಯ ಕಲ್ಲು ಒರಳು
ಪೂಜೆ ಬಲ್ಲನಾರಿಯರು ನಗದಿರಿ
ಬಲ್ಲ ನಾರಿಯರು ನಗದಿರಿ ಲಕ್ಷ್ಮಿವಲ್ಲಭ
ಇದಕೆ ಒಲಿಯಲಿ ೧

ಪಂಕಜ ಮುಖಿಯರ ಗರುವ
ಕಲ್ಲೊಳು ತುಂಬಿ ಕುಂಕುಮ ಮಾಡಿ ಅರೆದೆವ
ಕುಂಕುಮ ಮಾಡಿ ಅರೆದು
ಬೀಸಿದೆವಮ್ಮ ಪಂಕಜನಾಭ ಒಲಿಯಲಿ ೨

ಸರಸಿಜಾಕ್ಷಿಯರ ಗರುವು ತರಿಸಿ
ಕಲ್ಲೊಳು ತುಂಬಿ ಅರಿಷಿಣ ಮಾಡಿ ಅರೆದೆವ
ಅರಿಷಿಣ ಮಾಡಿ ಅರೆದು ಬೀಸಿದೆವಮ್ಮ
ಸರಸಿಜನಾಭಒಲಿಯಲಿ ೩

ಮಂದಗಮನೆಯರ ಗರ್ವ ತಂದು
ಕಲ್ಲೊಳು ತುಂಬಿ ಗಂಧವ ಮಾಡಿ ಅರೆದೆವ
ಗಂಧವ ಮಾಡಿ ಅರೆದು ಬೀಸಿದೆವಮ್ಮ
ಇಂದಿರೆಯರಸು ಒಲಿಯಲಿ ೪

ಧಿಟ್ಟೆರಿಬ್ಬರ ಗರವು ಅಷ್ಟು
ಕಲ್ಲೊಳು ತುಂಬಿ ಬುಕ್ಕಿಟ್ಟು ಮಾಡಿ ಅರೆದೇವ
ಬುಕ್ಕಿಟ್ಟು ಮಾಡಿ ಅರೆದು ಬೀಸಿದೆವಮ್ಮ
ಧಿಟ್ಟ ರಾಮೇಶ ಒಲಿಯಲಿ ೫

## ೯೯

ಸುವ್ವಿಸತ್ಯಭಾವೆ ಸುವ್ವಿ ರುಕ್ಮಿಣಿದೇವಿ
ಸುವ್ವಿ ಸುವ್ವಿ ಕೃಷ್ಣರಾಯ ಸುವ್ವಿ ಎಂದರು ಪಲ್ಲ

ಮುಯ್ಯ ತಂದು ದ್ರೌಪದಿ ಸೈಯ ಸೈಯ ಎನ್ನಿಸಿಕೊಂಡು
ಕೈಯ ಹೊಯಿದು ನಗುತ ಕೃಷ್ಣಸುವ್ವಿ ಎಂದರು ೧

ಮುದ್ದು ಸುಭದ್ರಾತಾನು ಗೆದ್ದು ಭಾವೆ ರುಕ್ಮಿಣಿಯರು
ಬಿದ್ದು ನಗುತ ಕೈಯ ಹೊಯಿದು ಸುವ್ವಿ ಎಂದರು ೨

ದಿಟ್ಟೆರಿಬ್ಬರ ಗರ್ವಕುಟ್ಟಿ ಕೇರಿ ತೌಡು ತೆಗೆದು
ಕೃಷ್ಣರಾಯನ ನೆನೆಸಿ ಸುವ್ವಿ ಎಂದರು ೩

ಚಲುವಿಭಾವೆ ರುಕ್ಮಿಣಿಯರು ಸುಲಭದಿಂದ
ಗೆದ್ದುಕೊಂಡು ಹಲಧರನ ಪ್ರೀತಿ ಪಡಿಸಿ ಸುವ್ವಿ ಎಂದರು ೪

ವೀತ ದೋಷ ರಾಮೇಶನ ಪ್ರೀತಿ ಬಡಿಸಿ ದ್ರೌಪತಿಯ
ಮಾತಿನಿಂದ ಗೆದ್ದು ಕೊಂಡು ಸುವ್ವಿ ಎಂದರು ೫

## ೧೦೦

ಹರಿಯು ಉಂಬೊ ಹರುಷವಮ್ಮ
ನಮ್ಮ ದೊರೆಗಳೈವರು ಮಾಡೊ ಉಪಚಾರವಮ್ಮ ಪಲ್ಲ

ಮಂದಗಮನೆಯರ ಸಹಿತ ಕೃಷ್ಣ ಬಂದು
ಮಿಂದು ಮಡಿಗಳನುಟ್ಟು ಶೀಘ್ರದಲಿ ಬಂದು ಕುಳಿತ
ತಂದು ದ್ರೌಪತಿಯು ಬಡಿಸುತಿರಲು
ಇಂದಿರೇಶ ಹರುಷದಲಿ ಉಣುತ ೧

ಮೆಲ್ಲಗೆ ಉಣ್ಣಯ್ಯ ಯದುವೀರ
ಹಿಂದೆ ಖಲ ಬುತ್ತಿಯ ಕದ್ದು ಉಂಡ ಅತಿಶೂರ
ಗೊಲ್ಲರೆಲ್ಲರ ಕೂಡ ವಿಹಾರ
ಗೊಲ್ಲರೆಲ್ಲರ ಕೂಡ ವಿಹಾರಿವನಿಸಿ ಎಲ್ಲ ಪದಾರ್ಥ
ಚಲ್ಲದಿರೊ ಧೀರ ೨

ಕದ್ದ ಬೆಣ್ಣೆಯ ನೆನೆಸಬೇಡ
ನಮ್ಮ ಮುದ್ದು ರಾಮೇಶಗೆ
ಬೇಕಾದ್ದು ಬೇಡೊ ಸಿದ್ಧ
ದ್ರೌಪತಿ ನೀಡುತಿರಲು ಉದ್ದಿನ ಕಾಳಷ್ಟು ಭಿಡೆಯು ಬ್ಯಾಡ ೩

## ೧೦೧

ಸೋಬಾನವೆನ್ನಿರೆ ಶ್ರೀದೇವಿ ಅರಸಗೆ
ನಾಭಿಯಲೆ ಅಜನ ಪಡೆದವಗೆ ಪ.

ಬರಿಯ ಮಾಣಿಕದ ಹಸೆಗೆ ಕಿರಿಯ ಚನ್ನಿಗ ಬಾರೊ
ಸರಿಯವರು ನೋಡಿ ನಗುವಂತೆ
ಸರಿಯವರು ನೋಡಿ ನಗುವಂತೆ ಎನುತಲೆ
ದೊರೆಗಳು ನುಡಿದು ಕರೆದರು ೧

ಮುತ್ತು ಮಾಣಿಕದ ಹಸೆಗೆ ಭಕ್ತವತ್ಸಲ ಬಾರೋ
ಹತ್ತು ದಿಕ್ಕುಗಳ ಬೆಳಗುತ
ಹತ್ತು ದಿಕ್ಕುಗಳ ಬೆಳಗುತ ಎನುತಲಿ
ಮಿತ್ರಿ ಸುಭದ್ರಾ ಕರೆದಳು ೨

ಚದುರ ರಾಮೇಶನ ಮುದಿಮಾರಿ
ವನಿತೆಯರು ಬದಿಯಲಿ ಬನ್ನಿ ಹಸೆಮ್ಯಾಲೆ
ಬದಿಯಲಿ ಬನ್ನಿ ಹಸೆಮ್ಯಾಲೆ ಎನುತಲಿ
ಸುದತೆ ಸುಭದ್ರಾ ಕರೆದಳು ೩

## ೧೦೨

ಪ್ರೀತಿಯ ಮಾಡನೀತಿಯ ಶುಕವಾಣಿ
ಪ್ರೀತಿಯ ಮಾಡ ಚಾತುರ್ಯದಲಿ
ಮುದ್ದು ಮಾತಿನ ಮಾಧುರಿ ಪ್ರೀತಿಯ ಮಾಡು ಪ.

ದೇವಿ ರುಕ್ಮಿಣಿ ನಮ್ಮಮ್ಮ ದೇವಕಿ ಸರಿಯಮ್ಮ
ನಾಕುಂದು ನಿನ್ನ ನುಡಿದೆನ
ನಾಕುಂದು ನಿನ್ನ ನುಡಿದ ಅಪರಾಧವ
ಭಾವದೊಳಿಡದೆ ಕರುಣಿಸು ಪ್ರೀತಿಯಮಾಡು ೧

ಅತ್ತಿಗೆ ನೀನಮ್ಮ ಹೆತ್ತತಾಯಿ ಸರಿಯಮ್ಮ
ಅತ್ಯಂತ ನಿನಗೆ ನುಡಿದೆವ
ಅತ್ಯಂತ ನಿನಗೆ ನುಡಿದ ಅಪರಾಧವ
ಚಿತ್ತದೊಳಿಡದೆ ಕರುಣಿಸು ಪ್ರೀತಿಯಮಾಡು ೨

ಸುಗುಣಸಹಕಾರಿಯೆ ನಿಗಮಾಭಿಮಾನಿಯೆ
ವಿಗಡ ಬುದ್ಧಿಯಿಂದ ನುಡಿದೆವ
ವಿಗಡ ಬುದ್ಧಿಯಿಂದ ನುಡಿದೆವ ಅತ್ತಿಗೆ ನಿನ್ನ
ಮಗಳು ಜಾನ್ಹವಿಯ ಸರಿಯಮ್ಮ ಪ್ರೀತಿಯ ಮಾಡು ೩

ಸತ್ಯಭಾವೆ ನಮ್ಮ ಅತಿ ವಿನೋದವ
ಮತ್ತೊಂದು ನೀನು ತಿಳಿಯದೆ
ಮತ್ತೊಂದು ನೀನು ತಿಳಿಯದೆ ಅತ್ಯಂತ
ಎನಮ್ಯಾಲೆ ಕರುಣವ ಇರಲೆಮ್ಮ ಪ್ರೀತಿಯ ಮಾಡು ೪

ಸರಸಿಜಮುಖಿ ನಮ್ಮ ಹರುಷ ವಿನೋದವ
ವಿರಸ ಮಾಡದಲೆಮನದೊಳು
ವಿರಸ ಮಾಡದಲೆ ಮನದೊಳು ರಾಮೇಶನ
ಅರಸಿ ನೀನಮಗೆ ದಯಮಾಡು ಪ್ರೀತಿಯ ಮಾಡು ೫

## ೧೦೩

ದಯಮಾಡೊ ರಂಗ ದಯ ಮಾಡೊ
ಕೈವಲ್ಯಪತಿ ನಮಗೆ ಕರುಣೆ ಮಾಡೊ ಕೃಷ್ಣ ಪ.

ಕುಂತಿ ದೇವಿಯರು ತಂದ ಅನಂತ ಪದಾರ್ಥವ
ಶಾಂತ ಮೂರುತಿಯೆ ಕೈಕೊಳ್ಳೊ ಕೃಷ್ಣ
ಶಾಂತ ಮೂರುತಿಯೆ ಕೈಕೊಳ್ಳೊ ಎನುತಲಿ
ಕಾಂತೆ ಸುಭದ್ರಾ ನುಡಿದಳು ೧

ಶ್ರೀದೇವಿಯರಸನ ಪಾದವ ತೊಳೆದರು
ಕ್ಯಾದಿಗೆ ಗಂಧ ತುಳಸಿ
ಕ್ಯಾದಿಗೆ ಗಂಧ ತುಳಸಿ ಅಕ್ಷತೆಯಿಂದ
ವೇದಗೋಚರನ ಉಪಚರಿಸಿ ೨

ಸುರರಿಗಭಯವಿತ್ತು ಕರದಿ ವೀಳ್ಯವಕೊಟ್ಟು
ವರ ಪೂಗಿ ಫಲವ ನಡುವಿಟ್ಟು
ವರ ಪೂಗಿ ಫಲವ ನಡುವಿಟ್ಟು ರಾಮೇಶಗೆ
ಕರವ ಜೋಡಿಸುತ ಐವರು ೩

## ೧೦೪

ಮಾತನ್ನಾಡೊ ಮನ್ನಾರಿ ಕೃಷ್ಣ ಮಾತನ್ನಾಡೊ
ಧಾತನ ಪಿತ ಸಂಪ್ರೀತಿಲಿ ಮುದ್ದು ಮಾತನ್ನಾಡೊ ಪ.

ಲಕ್ಷಮಾಣಿಕ ಜಡಿದ ಅಕ್ಷಯ ಪದಕ ಮುಕುಟ
ಲಕ್ಷ ಸೂರ್ಯರ ಬೆಳಕಿಲೆ
ಲಕ್ಷ ಸೂರ್ಯರ ಬೆಳಕಿಲೆ ಹೊಳೆವೊ ವಸ್ತ
ಲಕ್ಷ್ಮಿನರಸಿಂಹಗೆ ಉಡುಗೊರೆ ೧

ಚಂದ್ರ ನಂತೊಪ್ಪುವ ಚಂದ್ರಗಾವಿ ಸೀರೆ
ತಂದೆ ಮಾಣಿಕದಾಭರಣವ
ತಂದೆ ಮಾಣಿಕದಾಭರಣ ಕುಂದಣದ ಕುಪ್ಪುಸವ
ಇಂದಿರಾದೇವಿಗೆ ಉಡುಗೊರೆ ೨

ವರಗಿರಿವಾಸಗೆ ತುರಗ ತಾಪತಿ ಭೇರಿ
ದೊರೆಗಳು ತಂದ ಉಚಿತವ
ದೊರೆಗಳು ತಂದ ಉಚಿತವ ಭಕ್ತಿಯಿಂದ
ಕರಗಳ ಜೋಡಿಸುತ ಕರುಣಿಗೆ ಉಡುಗೊರೆ ೩

ಜಾಂಬೂನದಾಂಬರ ನಿನಗೆ ತಂದೆವು ಸ್ವಾಮಿ
ಜಾಂಬವತೀಶಗೆ ಉಡುಗೊರೆ
ಜಾಂಬವತೀಶಗೆ ಉಡುಗೊರೆ ನಮಗಿನ್ನು
ಕಂಡು ಬರುವ ಭೂವೈಕುಂಠಾಧೀಶಗೆ ಉಡುಗೊರೆ ೪

ಅನರ್ಘ್ಯವಾಗಿದ್ದ ಅನಂತ ವಸ್ತ್ರಾಭರಣ
ಚಂದಾಗಿ ನಾವು ತಂದೇವ
ಚಂದಾಗಿ ನಾವು ತಂದೇವ ರಮಿಯರಸು
ನಿನ್ನ ಬಳಗಕ್ಕೆಲ್ಲ ಉಡುಗೊರೆ ೫

## ೧೦೫

ಪಾದವ ತೊಳೆದು ಪಾವನರಾಗಿ
ಹರುಷದಿ ತಲೆದೂಗಿ
ಪಾದವ ತೊಳೆದು ಪಾವನರಾಗಿ
ಭಾವೆ ವಿನೋದದಿ ಕೃಷ್ಣನಗುತಲಿ ಪ.

ಗುಜ್ಜೆಯರ ಕಾಲಿಗೆ ತಕ್ಕ ವಜ್ರಕಲ್ಲನೆಪಿಡಿದು
ಅರ್ಜುನನ ಮಡದಿ ಸುಭದ್ರಾ
ಅರ್ಜುನನ ಮಡದಿ ಸುಭದ್ರಾ ಹರುಷದಿ
ಕಂಜನೇತ್ರಿಯರ ಉಪಚರಿಸಿ ೧

ಸತ್ಯಭಾಮೆಯ ಪಾದ ಭಕ್ತಿಯಿಂದ ಹಿಡಿದಳು
ಪಾರ್ಥನ ಮಡದಿ ಸುಭದ್ರೆ
ಪಾರ್ಥನ ಮಡದಿ ಸುಭದ್ರಾ ಹರುಷದಿ
ಅತ್ತಿಗೆಯ ಕಾಲ ತೊಳೆದಳು ೨

ಮಂದಗಮನೆಯರಿಗೆಲ್ಲ ಗಂಧ ಕಸ್ತೂರಿಯಿಟ್ಟು
ಅಂದವಾಗಿದ್ದ ಅರಿಷಿಣ
ಅಂದವಾಗಿದ್ದ ಅರಿಷಿಣ ಕುಂಕುಮದಿಂದ
ಇಂದುವದನೆಯರ ಉಪಚರಿಸಿ ೩

ಶ್ರೀದೇವಿಯರಿಗೆ ದಿವ್ಯ ಕ್ಯಾದಿಗೆ ಮಲ್ಲಿಗೆ
ಮುಡಿಸಿ ಸುಗಂಧಿ ಕೇಶರ ವೀಳ್ಯವ
ಸುಗಂಧಿಕೇಶರ ವೀಳ್ಯ ಅಡಿಕೆ ಕೊಟ್ಟು
ಮಾಧವನ ಮಡದಿಯರ ಉಪಚರಿಸಿ ೪

ನಳಿನಾಕ್ಷಿಯರಿಗೆ ಹೆಳಲು ಬಂಗಾರವ್ವಾಕಿ
ಹೊಳೆವೊ ಮಾಣಿಕದ ಸರಗಳು
ಹೊಳೆವೊ ಮಾಣಿಕದ ಸರವುಸರಗಿಯನಿಟ್ಟು
ಚಲುವ ರಾಮೇಶನ ಅರಸಿಯ ಪಾದ ತೊಳೆದು ಪಾವನರಾಗಿ ೫

## ೧೦೬

ಒಂದು ಮಾತ ನಾಡೋಣು ಬಾರೆ ನಗುತಲಿ
ಮಾತನಾಡೋಣು ಬಾರೆ ಪ್ರೀತಿ ಹರುಷದಿಂದ
ನೀತಿಯಿಂದ ನಲಿದಾಡುತ ಪ.

ನೀಲಕುಂತಳೆಯರು ವಾಲೆಬುಗುಡಿಯನಿಟ್ಟು
ನೀಲ ಮಾಣಿಕದ ಸರಗಳು
ನೀಲ ಮಾಣಿಕದ ಸರಗಳು ಸರಗಿಯನಿಟ್ಟು
ಬಾಲೆಯರು ಭಾಳೆ ಹರುಷದಿ ೧

ಸೂರ್ಯರಾಗದ ಸೀರೆ ಸಾಲೆವಲಿಯ ಕುಪ್ಪುಸ
ತೋರ ಮಾಣಿಕದ ನೆನಿದಂಡೆ
ತೋರ ಮಾಣಿಕದ ನೆನಿದಂಡೆ ತಂದೇವ
ನಾರಿರುಕ್ಮಿಣಿಯೆ ಉಡುಬಾರೆ ೨

ಉದಯರಾಗದ ಸೀರೆ ಪದುಮರಾಗದ ಕುಪ್ಪಸ
ಪದುಮದ್ಹೂವಿನ ನೆನೆದಂಡೆ
ಪದುಮದ್ಹೂವಿನ ನೆನೆದಂಡೆ ತಂದೇವ
ಪದುಮಾಕ್ಷಿ ಭಾವೆ ಉಡುಬಾರೆ ೩

ತುರಗ ತಾಪತಿ ಭೇರಿ ಬಿರುದಿನ ಹೆಗ್ಗಾಳೆ
ಬರಿಯ ಮಾಣಿಕದ ರಥಗಳು
ಬರಿಯ ಮಾಣಿಕದ ರಥಗಳು ಅಂಬಾರಿ ಆನೆ
ಹಿರಿಯ ರುಕ್ಮಿಣಿಗೆ ಉಚಿತವ ೪

ಛತ್ರ ಚಾಮರ ದಿವ್ಯ ಮುತ್ತಿನ ಪಲ್ಲಕ್ಕಿ
ಉತ್ತಮ ರಥವು ಹಿಡಿದೇಜಿ
ಉತ್ತಮ ರಥವು ಹಿಡಿದೇಜಿ ರಾಮೇಶನ
ಮಿತ್ರಿ ಭಾವೆಗೆ ಉಚಿತವ ೫

## ೧೦೭

ಕರೆತಾರೆ ಕರೆತಾರೆ ಕರೆತಾರೆ ಸಖಿ
ಜರ ಜರತಾರಿ ನೀರೆ ಅವರ
ಸುರತ ರಂಗಯ್ಯನ ಗುರುತದ
ಮಡದಿಯರ ಕರೆ ತಾರೆ ಪ.

ಸೃಷ್ಟಿಗಧಿಕವಾದ ಪಟ್ಟಾವಳಿಯ ಸೀರೆ
ಘಟ್ಟಿ ಕಂಕಣವ ನಡುವಿಟ್ಟು
ಘಟ್ಟಿ ಕಂಕಣವ ನಡುವಿಟ್ಟು ತಂದೆವ
ಧಿಟ್ಟ ದ್ರೌಪತಿಗೆ ಉಡುಗೊರೆ ೧

ಖಡ್ಡಿ ಪೈಠಣ ಸೀರೆ ದೊಡ್ಡ ಮುತ್ತಿನ ದಂಡೆ
ಕಡ್ಡಿ ಬಳೆ ದೋರೆ ನಡುವಿಟ್ಟು
ಕಡ್ಡಿ ಬಳೆ ದೋರೆ ನಡುವಿಟ್ಟು ತಂದೆವ
ಗುಣಾಢ್ಯ ಸುಭದ್ರಾಗುಡುಗೊರೆ ೨

ಅತ್ತಿ ಹೂವಿನ ಸೀರೆ ಕುತನಿ ಕುಪ್ಪುಸ
ಸುತ್ತು ಮುತ್ತಿನ ನೆನೆದಂಡೆ
ಸುತ್ತು ಮುತ್ತಿನ ನೆನೆದಂಡೆ ತಂದೆವ
ಮಿತ್ರಿ ವೃಂದಾಗೆ ಉಡುಗೊರೆ ೩

ಮೋತಿ ಚೂರಿನ ಸೀರೆ ಜಾತಿ ಮುತ್ತಿನ ದಂಡೆ
ನೂತನವಾದ ಚವರಿಯ
ನೂತನವಾದ ಚವರಿ ರಾಗಟೆ
ಗೊಂಡೆಯ ಕಂಠಿ ಕಾಳಿಂದಿಗೆ ಉಡುಗೊರೆ ೪

ಸಾರಸನ ಸೀರೆ ತೋರ ಮುತ್ತಿನ ದಂಡೆ
ಹಾರ ಪದಕಗಳ ನಡುವಿಟ್ಟು
ಹಾರ ಪದಕಗಳ ನಡುವಿಟ್ಟು ತಂದೆವ
ನಾರಿ ಲಕ್ಷಣಾಗೆ ಉಡುಗೊರೆ ೫

ಅಂಬುಜಾಕ್ಷಿಗೆ ತಕ್ಕ ಗೊಂಬಿ ಪೈಠಣಿಸೀರೆ
ಜಂಬುದ್ವೀಪದ ನೆನಿದಂಡೆ
ಜಂಬುದ್ವೀಪದ ನೆನಿದಂಡೆ ತಂದೆವ
ಜಾಂಬವಂತಿಗೆ ಉಡುಗೊರೆ ೬

ಸಾವಿರಕಬೆಲಿಯಾದ ಸೇಲ್ಯಾವಲಿ ಜವಳಿ
ವೀರ ರಾಮೇಶನ ಮನಮೆಚ್ಚಿ
ವೀರ ರಾಮೇಶನ ಮನಮೆಚ್ಚಿ(ದ) ಹದಿನಾರು ಸಾವಿರ
ನಾರಿಯರಿಗೆ ಉಡುಗೊರೆ ೭

## ೧೦೮

ಹಿಡಿಯೊರಂಗಯ್ಯ ಉಡುಗೊರೆ
ಕೊಡುವೆವೊ ಕೃಷ್ಣಯ್ಯ
ಭಿಡೆ ಬ್ಯಾಡೊ ಬೆತ್ತಲಿದ್ದಿ
ಇದೇನು ಸಡಗರ ರಂಗಯ್ಯ ಪ.

ಶಾಲು ಜೋಡಿಯ ತಕ್ಕ ನೀಲ ದೊಡ್ಯಾಣನಿಟ್ಟು
ಮ್ಯಾಲೆ ಉಂಗುರವು ಮೊದಲಾಗಿ
ಮ್ಯಾಲೆ ಉಂಗುರವು ಮೊದಲಾಗಿ ತಂದೆವ
ಬಾಲ ಕೃಷ್ಣಯ್ಯನ ಜನಕಗೆ ಉಡುಗೊರೆ ೧

ಗೌರಿ ಪಟಾವಳಿ ಮ್ಯಾಲೆ ಚೌರಿ ರಾಗಟೆ
ಗೊಂಡೆಯ ಶೌರಿ ಕೃಷ್ಣಯ್ಯನ ಜನನಿಗೆ
ಶೌರಿ ಕೃಷ್ಣಯ್ಯನ ಜನನಿ ದೇವಕಿಗೆ
ಕುವರಿಯರು ಕೊಟ್ಟ ಉಡುಗೊರೆ ೨

ಹಲವು ಸೂರ್ಯರ ಬೆಳಕು ಗೆಲವೊ ಪಿತಾಂಬರ
ಬೆಲೆಯಿಲ್ಲದಂಥ ಮುಕುಟವು
ಬೆಲೆಯಿಲ್ಲದಂಥ ಮುಕುಟ ಮುತ್ತಿನ ಹಾರ
ಬಲರಾಮನಿಗೆ ಉಡುಗೊರೆ ೩

ಬಿಳಿ ಬಣ್ಣದ ಸೀರೆರನ್ನ ಮಾಣಿಕದಾಭರಣ
ಹೊನ್ನೋಲೆ ಕೊಪ್ಪು ನಡುವಿಟ್ಟು
ಹೊನ್ನೋಲೆ ಕೊಪ್ಪು ನಡುವಿಟ್ಟು ತಂದೆವ
ಕನ್ನೆ ರೇವತಿಗೆ ಉಡುಗೊರೆ ೪

ಸಕಲಾತಿ ಸೀರೆ ದೋರೆ ಕಂಕಣ ಸರಿಗೆ
ಹಾರ ಪದಕಗಳ ನಡುವಿಟ್ಟು
ಹಾರ ಪದಕಗಳ ನಡುವಿಟ್ಟು ರಾಮೇಶನ
ನೂರು ಮಂದಿಗೆ ಉಡುಗೊರೆ ೫

## ೧೦೯

ಕೋಲ ಕೋಲೆನ್ನ ಕೋಲ ಕೃಷ್ಣ
ನೀಮದನಗೋಪಾಲನಾಗಿ
ಮೆರೆದಿಯಲೊ ಕೃಷ್ಣ ಪ.

ಜರದ ಅಂಬರ ತಕ್ಕ ಸುರುಳಿಯ ಮುಂಡಾಸ
ಮುರಿಗಿಯವಂಕಿ ನಡುವಿಟ್ಟು
ಮುರಿಗಿಯವಂಕಿ ನಡುವಿಟ್ಟು ರುಕ್ಮಿಣಿಯ
ವರಪುತ್ರ ಪ್ರದ್ಯುಮ್ನಗೆ ಉಡುಗೊರೆ ೧

ಮುತ್ತಿನಾಭರಣ ಹೆಚ್ಚಿನ್ಹೆಚ್ಚಿನ ಜವಳಿ
ಮತ್ತೆ ಕೃಷ್ಣಯ್ಯನ ಸಭೆಯೊಳು
ಮತ್ತೆ ಕೃಷ್ಣಯ್ಯನ ಸಭೆಯೊಳು ಇಟ್ಟೆವ
ಪಾರ್ಥನು ಕೊಟ್ಟ ಉಡುಗೊರೆ ೨

ಬೆಳಕಿನಂತೊಪ್ಪುವ ಥಳಥಳಿಸುವ ಜವಳಿ
ನಳಿನಾಕ್ಷಿಯರು ಕುಳಿತ ಸಭೆಯಾಳು
ನಳಿನಾಕ್ಷಿಯರು ಕುಳಿತ ಸಭೆಯಾಳಗೆ ಇಟ್ಟೆವ
ಕುಳಿತ ಜನಕೆಲ್ಲ ಉಡುಗೊರೆ ೩

ಅಂದವಾದ ಬಲು ಚಂದ ಚಂದದ ಜವಳಿ
ತಂದೆ ಕೃಷ್ಣಯ್ಯನ ಸಭೆಯೊಳು
ತಂದೆ ಕೃಷ್ಣಯ್ಯನ ಸಭೆಯೊಳಗೆ ಇಟ್ಟೆವ
ಬಂದ ಜನಕೆಲ್ಲ ಉಡುಗೊರೆ ೪

ಸಾಸಿವೆ ಬಣ್ಣದ ಸೀರೆ ಕುಸುಬೆ ಬಣ್ಣದ ಕುಪ್ಪುಸ
ಲೇಸಾದ ಅಡಿಕೆ ನಡುವಿಟ್ಟು
ಲೇಸಾದ ಅಡಿಕೆ ನಡುವಿಟ್ಟು ರುಕ್ಮಿಣಿಯ
ದಾಸಿಯರಿಗೆಲ್ಲ ಉಡುಗೊರೆ ೫

ಹತ್ತೆಂಟು ಸಾವಿರ ಸುತ್ತುವ ಮುಂಡಾಸ
ಮತ್ತ ಬೆಟ್ಟಡಕಿ ನಡುವಿಟ್ಟು
ಮತ್ತ ಬೆಟ್ಟಡಕಿ ನಡುವಿಟ್ಟು ರಂಗಯ್ಯನ
ಭೃತ್ಯರಿಗೆಲ್ಲ ಉಡುಗೊರೆ ೬

ಸುಳಿಬಳ್ಳಿಯಂತೊಪ್ಪುವ ಬಿಳಿ ಚೀಟಿನ ಜೂಲು
ಎಳೆ ಮಾವುಗಳ ನಡುವಿಟ್ಟು
ಎಳೆ ಮಾವುಗಳ ನಡುವಿಟ್ಟು ರಂಗಯ್ಯನ
ಗಿಳಿಗಳಿಗೆಲ್ಲ ಉಡುಗೊರೆ ೭

ಅಕ್ಕರದಿಂದ ಹೊಸ ಚಿಕ್ಕ ಚೀಟಿನ ಜೂಲು
ತಕ್ಕ ಕುಲಾಯಿ ಮುರುವಿಟ್ಟು
ತಕ್ಕ ಕುಲಾಯಿ ಮುರುವಿಟ್ಟು ರುಕ್ಮಿಣಿಯ
ಬೆಕ್ಕಿಗೆ ಕೊಟ್ಟ ಉಡುಗೊರೆ ೮

ಅಷ್ಟೂರಿಗೆ ಉಡುಗೊರೆ ತಕ್ಕಷ್ಟು ಕೊಟ್ಟೆವ
ಕೃಷ್ಣಯ್ಯನ ಮನಕೆ ಬರಲಿಲ್ಲ
ಕೃಷ್ಣಯ್ಯನ ಮನಕೆ ಬರಲಿಲ್ಲ ಕುಬ್ಜಿ
ಎಂಬೊ ಸೊಟ್ಟ ಸ್ತ್ರೀಯಳ ಕರೆಸಿಲ್ಲ ೯

ಎಲ್ಲರಿಗುಡಗೊರೆ ಬಲ್ಲಷ್ಟು ಕೊಟ್ಟೆವ
ಚಲುವನ ಮನಕೆ ಬರಲಿಲ್ಲ
ಚಲುವನ ಮನಕೆ ಬರಲಿಲ್ಲ ಗೋಕುಲದ
ಗೊಲ್ಲ ನಾರಿಯರ ಕರೆಸಿಲ್ಲ ೧೦

ತರಹ ತರಹದ ಜವಳಿ ದುಂಡು ಮುತ್ತಿನ ಪದಕ
ಪೆಂಡಿ ಸರಗಳ ನಡುವಿಟ್ಟು
ಪೆಂಡಿ ಸರಗಳ ನಡುವಿಟ್ಟು ರಾಮೇಶ
ನಿನ್ನ ಪಂಡಿತರಿಗೆಲ್ಲ ಉಡುಗೊರೆ ೧೧

## ೧೧೦

ಹೋಗಿ ಬರತೇವ ಸಾಗರನ ಮಗಳೆ
ಹೋಗಿ ಬರತೇವ ಪ.

ರುಕ್ಮಿಣಿದೇವಿ ನಿನ್ನ ದುರ್ಗೆರೂಪವ ಕಂಡು
ಅಬ್ಬರಿಸುತಾರೆ ಜನರೆಲ್ಲ
ಅಬ್ಬರಿಸುತಾರೆ ಜನರೆಲ್ಲ ಮುಯ್ಯಕ್ಕೆ
ನಿರ್ಭಯದಿಂದ ಬರಬೇಕು ಸಖಿಯೆ ೧

ಸೀತೆಗೆ ಹಿಂದಕ್ಕೆ ಪ್ರೀತಿಯ ಬಡಿಸಿದ
ಕೋತಿಯ ಹಿಂಡು ಕರೆಸವ್ವ
ಕೋತಿಯ ಹಿಂಡು ಕರೆಸಿ ಕುಣಿಸುತ
ಖ್ಯಾತಿಲೆ ಮುಯ್ಯ ತಿರುಗಿಸೆ ಸಖಿಯೆ ೨

ಮಡದಿ ಜಾಂಬವಂತಿ ಸಡಗರದಿ ಬರುವಾಗ
ಒಡಗೂಡಿ ಯಾರು ಬರಬೇಕು
ಒಡಗೂಡಿ ಯಾರು ಬರಬೇಕು ತವರೂರ
ಕರಡಿಯ ಹಿಂಡು ಕರೆಸವ್ವ ಸಖಿಯೆ ೩

ರಂಭೆ ಸತ್ಯಭಾವೆ ಸಂಭ್ರಮದಿ ಬರುವಾಗ
ಒಂಭತ್ತು ವಾದ್ಯ ನಿನಗೆಲ್ಲೆ
ಒಂಭತ್ತು ವಾದ್ಯ ನಿನಗೆಲ್ಲೆ ಮುಯ್ಯಕ್ಕೆ
ಡೊಂಬರ ಡೊಳ್ಳು ಹೊಯಿಸವ್ವ ಸಖಿಯೆ ೪

ಲಕುಮಿ ರಮಣನ ಚಿಕ್ಕ ಮಡದಿ ಭಾವೆ
ಅಕ್ಕರದಿಂದ ಬರುವಾಗ
ಅಕ್ಕರದಿಂದ ಒಡಗೂಡಿ ಬರುವಾಗ
ಬೆಕ್ಕಿನ ಹಿಂಡು ಬರಲೆವ್ವ ಸಖಿಯೆ ೫

ಆವ್ವ ರುಕ್ಮಿಣಿ ನಿನಗೆ ದಿವ್ಯವಾಹನ ವೆಲ್ಲಿ
ಸಿಂಹ ಶಾರ್ದೂಲ ಕರೆಸವ್ವ
ಸಿಂಹ ಶಾರ್ದೂಲ ಕರೆಸಿ ಏರಿಕೊಂಡು
ಬಾವಾನ ಹಾಂಗೆ ಬಾರವ್ವ ಸಖಿಯೆ ೬

ಕೋಗಿಲ ಸ್ವರದಂತೆ ರಾಗದಿ ರಾಮೇಶನ
ಪಾಡಿ ಕೊಂಡಾಡಿ ಅರಿತಿಲ್ಲ
ಪಾಡಿ ಕೊಂಡಾಡಿ ಅರಿತಿಲ್ಲ ಒಡಗೂಡಿ
ಕಾಗೆ ಕೂಗಾಡಿ ಬರಲೆವ್ವ ಸಖಿಯೆ ೭

## ೧೧೧

ಶ್ರೀನಿವಾಸ ನಡೆದ ಕಾಮಧೇನುವಿನಂತೆ
ಕಾಮಧೇನುವಿನಂತೆ ಇನ್ನೇನು
ಬೇಕಾದುದು ಕೊಡುವ
ಮಾನಿನಿ ಕಾಂತೆ ಪ.

ಕಾಂತ ಕೃಷ್ಣರಾಯ ನಮಗೆ
ಚಿಂತಾಮಣಿಯಂತೆ ಕೊಡುವ
ಚಿಂತಾಮಣಿಯಂತೆ ಅನಂತ ಸುಖವಿತ್ತು
ಭಕ್ತರ ಸಂತೈಸುವನಂತೆ ೧

ಲಕ್ಷ್ಮಿರಮಣ ಕಲ್ಪವೃಕ್ಷ ತಾನಂತೆ
ಕಲ್ಪವೃಕ್ಷ ತಾನಂತೆ ಅಕ್ಷಯ

ಸುಖವಿತ್ತು ಭಕ್ತರ
ಸಂತೈಸುವನಂತೆ ೨

ಮುಂದು ಸಂಚಿತಗಾಮಿಯು
ಹಿಂದಾದುವಂತೆ
ನಮಗೆ ಹಿಂದಾದುವಂತೆ
ತಂದೆ ರಾಮೇಶನ ಪಾದಕ್ಕೆ ಹೊಂದಿವೆಯಂತೆ ೩

# ಮುಯ್ಯಾ ತಿರುಗಿಸಿದ ಹಾಡುಗಳು

## ೧೧೨

ಕಾಲಕಾಲಕ್ಕೆ ಗುರುಗಳ ಕಾಲಿಗೆ ಎರಗುವೆ
ಕೋಲೆನ್ನಿ ಕೆಲದೆಯರು ಕೋಲೆನ್ನಿರೆ ಪ.

ಫುಲ್ಲನಾಭನೆಂಬೊ ಮಲ್ಲಿಗೆ ಸರಮುಡಿದು
ಉಲ್ಲಾಸ ಬಡವೊ ಗುರುಗಳ
ಸೊಲ್ಲು ಸೊಲ್ಲಿಗೆ ನಮಿಸಿ ೧

ವೀತ ದೋಷನೆಂಬೊ ನೂತನ
ಪುಷ್ಪ ಮುಡಿದು ಪ್ರೀತಿ ಬಡುವ
ಗುರುಗಳ ಮಾತು ಮಾತಿಗೆ ನಮಿಸಿ ೨

ಬಾಲೆ ಗುರುಗಳ ಹೃದಯ ಆಲಯ
ವಶವಾದ ಬಾಲಗೋಪಾಲನೆಂಬೊ
ನೀಲ ಮಾಣಿಕವೆ ಬಿಗಿದು ೩

ಮತ್ತೆ ನಮ್ಮ ಗುರುಗಳ ಚಿತ್ತದಲಿ ವಶವಾದ
ನಿತ್ಯ ಮೂರುತಿ ಎಂಬೊ
ಮುತ್ತು ಮಾಣಿಕವೆ ಬಿಗಿದು ೪

ಗುರುಗಳ ಹೃದಯವೆಂಬೊ
ಅರಮನೆ ವಶವಾದ
ಸಿರಿ ರಮೆಯರಸನೆಂಬೊ ಬರಿಯ ಮಾಣಿಕವೆ ಬಿಗಿದು ೫

## ೧೧೩

ಕೋಲ ಕೋಲೆನ್ನಿ ಮುತ್ತಿನ ಕೋಲ ಕೋಲೆನ್ನಿ
ಆ ಬಾಲೆ ಭಾವೆಯ ಈಗ ಸೋಲಿಸಿದೆವೆನ್ನಿ ಪ.

ಕೊಟ್ಟುತಾ ಮುಯ್ಯ ರುಕ್ಮಿಣಿಗೆ ಇಟ್ಟರು ಆಣಿಯ
ಥಟ್ಟನೆ ತಿರುಗಿಸದಿದ್ದರೆ ಕೃಷ್ಣ ನಿಮ್ಮಯ ಅ.ಪ

ತಂದ ಮುಯ್ಯವ ಹಿಂದಕೆ ತಿರುಗಿಸದಿದ್ದರೆ
ಇಂದಿರಾಪತಿಭಾಮೆಗೆ ತಂದೆಯಾಗುವ ೧

ಬಾಲಿಯರು ಆಣೆಯ ಮೇಲೆ ಮೇಲೆ ಇಟ್ಟರೆ
ಆಲಿಸಿ ಕೇಳುತ ರೋಹಿಣಿ ಬಾಲ ನಕ್ಕನು ೨

ಇಂಥ ಆಣೆಗೆ ಭಾಮೆ ಇನ್ನೆಂತು ಮಾಡುವಿ
ಪಂಥಗಾರಳೆ ಬಂದು ಚಿಂತಿಸೆಂದನು ೩

ಭದ್ರೆ ದ್ರೌಪತಿ ತಿದ್ದಿ ಆಣೆ ನಿಟ್ಟರೆ
ಮುದ್ದು ರಾಮೇಶ ಇದಕೆ ಬಿದ್ದು ನಕ್ಕನು ೪

## ೧೧೪

ಪಚ್ಚ ಪವಳದ ಕೋಲ
ಅಚ್ಚ ಮುತ್ತಿನ ಕೋಲ ತುಚ್ಛಗೊಯ್ಸಿ
ದ್ರೌಪತಿಗೆ ಹುಚ್ಚು ಹಿಡಿಸುವ ಕೋಲ ಪ.

ಧಿಟ್ಟೆರಿಬ್ಬರು ನಮಗೆ ಇಟ್ಟರು ಅಣೆಯ
ಕೃಷ್ಣಯ್ಯ ಇದಕೆ ನಗಬಹುದು ಕೋಲ
ಕೃಷ್ಣಯ್ಯ ಇದಕೆ ನಗಬಹುದು ಮುಯ್ಯವ ಕೊಟ್ಟು
ಬಾಹುದಕೆ ತಡವ್ಯಾಕೆ ಕೋಲ ೧

ಜಾಣೆಯರಿಬ್ಬರು ನಮಗೆ ಆಣೆಯನಿಟ್ಟರು
ವೇಣುಗೋಪಾಲ ನಗಬಹುದು ಕೋಲ
ವೇಣುಗೋಪಾಲ ನಗಬಹುದು ಮುಯ್ಯವ
ಕ್ಷಣದೊಳು ನಾವು ತಿರುಗಿಸುವೆವು ಕೋಲ ೨

ಹರಿಯ ತಂಗಿಯರ ಗರುವಿನ ಮುಯ್ಯವ
ತಿರುಗಿಸಿ ಬಂದು ಉಣಬೇಕು ಕೋಲ
ತಿರುಗಿಸಿ ಬಂದು ಉಣಬೇಕು ಎನುತಲೆ
ಹರಿಣಾಕ್ಷಿ ಭಾಮೆ ನುಡಿದಳು ಕೋಲ ೩

ರಂಗರಾಯರ ಮುದ್ದು ತಂಗಿಯರ
ಹಂಗಿನ ಮುಯ್ಯ ತಿರುಗಿಸುವೆ ಕೋಲ
ಹಂಗಿನ ಮುಯ್ಯ ತಿರುಗಿಸುವೆ ಮುಖವ
ಭಂಗಿಸಿ ಬಾಹೊ ಸಭೆಯೊಳು ಕೋಲ ೪

ಇಂತು ರಾಮೇಶನ ಕಾಂತೆಯರೆಂಬುವರ
ಪಂಥವ ಬಿಡಿಸಿ ಬರಬೇಕು ಕೋಲ
ಪಂಥವ ಬಿಡಿಸಿ ಬರಬೇಕು ಮುಯ್ಯದ
ಭ್ರಾಂತಿಯ ಹಿಡಿಸಿ ಕೊಡಬೇಕು ಕೋಲ ೫

## ೧೧೫

ಆ ಬಾಲೆಯರಬಗೆ ಬಗೆ ಸೋಲಿಸಿ
ಬರುವಂಥ ಮೇಲು ಮೇಲಾದ ಕೋಲ ಪ.

ಸಾಗರನ ತನುಜಳು ಬಳುಕುತ
ಬಾಗುತ ನಾಗವೇಣಿ ರುಕ್ಮಿಣಿ
ಆಗ ಗೋವಿಂದಗೆ ಬೇಗನೆ ವಂದಿಸಿ
ಹೋಗಬೇಕು ಮುಯ್ಯಕ್ಕೆ ೧

ಬಡನಡು ಬಳುಕುತ
ಮಡದಿ ಮೋಹದ ರಾಣಿ
ಖಂಡಿ ಮುದ್ದು ಸುರಿಯುತಲೆ
ನಡೆದು ಬಂದು ಕೃಷ್ಣನಡಿಗೆರಗಿ
ಭಾಮೆ ನುಡಿದಳು ೨

ಪೊಡವಿ ಪಾಲಿಪವಪ್ಪನೀ ನಡೆ
ಮುಯ್ಯಕ್ಕೆನುತಲಿ ನುಡಿದಳು ಸತ್ಯಭಾಮೆ
ಉಡಬೇಕು ವಸ್ತ್ರಂಗಳ
ಇಡಬೇಕು ಭೂಷಣ
ನಡೆ ಬೇಗ ಕೃಷ್ಣರಾಯ ೩

ಚಂದ್ರವದನೆಯರ ಮುಯ್ಯ
ಇಂದೇ ತಿರುಗಿಸಬೇಕ
ಮಂದರೋದ್ಧರ ಮಾಧವ
ಸಿಂಧೂಶಯನ ನೀನು ಬಂದರೆ
ಮುಯ್ಯಕ್ಕೆ ಛಂದ ತೋರುವುದೆಂದರು ೪

ನೀಲ ಮೊದಲಾದ ಬಾಲೆಯರು
ರಂಗಗೆ ಮೇಲೆ ಮೇಲೆ ವಂದಿಸಿ

ಶ್ರೀಲೋಲ ರಾಮೇಶ ನೀ
ಆಲಸ್ಯ ಮಾಡದೆ
ಪಾಲಿಸಬೇಕೆಂದರು ೫

## ೧೧೬

ಚಿತ್ತಜನ್ಯೆಯ ಮಿತ್ರೆರಾಡಿದ ಉತ್ರ
ಮನಸಿಗೆ ತಂದನು
ಅವರ ಉತ್ರ ಮನಸಿಗೆ ತಂದನು
ಮಿತ್ರೆ ದ್ರೌಪತಿ ಸುಭದ್ರೆ ಮುಯ್ಯಿವ
ಇವತ್ತೆ ತಿರುಗಿಸಿರೆಂದನು ಪ.

ಧನ್ಯ ಭಕ್ತರ ಮನೆಗ್ಹೋಗುವ
ಎನ್ನ ಸನ್ಮತವೆಂದನು
ಮುನ್ನ ಆಲಶ್ಯವ ಮಾಡದೆ
ಹೊನ್ನ ರಥ ಹೊರಗಿನ್ನು ಇಡಿಸೆಂದ ೧

ಕುಂತಿ ಮಕ್ಕಳು ಸಂತೋಷಿಸುವುದು
ಎಂಥ ಹರುಷವಿದೆಂದನು ಎನಗ
ಕಾಂತೆಯರೇರುವ ಕುದುರೆ ರಥಗಳು
ಚಿಂತಾಮಣಿ ತಾ ಪಂಥವ ಗೆಲಿಸೆಂದ ೨

ಕಾತಿಲೆ ಐವರು ನೀತಿ ನೋಡಲು
ಪ್ರೀತನಾಗುವೆನೆಂದನು
ಭೂತಳದಿ ಕುಂತಿ ಜಾತರನ ನೋಡೋ ಆತುರದಿ
ಒಂದೂ ಮಾತು ಸೊಗಸದು ೩

ಎನ್ನ ಭಕ್ತರಿಗಿನ್ನು ಸರಿಗಾಣೆ
ಧನ್ಯ ಧನ್ಯರೆಂದನು
ಚನ್ನ ಪಾಂಡವರನ್ನ ನೋಡದೆ
ಅನ್ನ ಸೊಗಸದು ಮುನ್ನ ಮಾನಿನಿ ೪

ಇಂದು ಭಕ್ತರಿಗೆ ಆನಂದ
ಬಡಿಸುವೆ ಸಂದೇಹಬೇಡೆಂದನು
ತಂದೆ ರಮೆಯರಸು ಬಂದು ಜನಸಹಿತ
ಮುಂದೆ ನಡೆದನು ಮೋದ ಸೂಸುತ ೫

## ೧೧೭

ಡಂಕಿ ಹೊಯ್ಸಿದ ನಮ್ಮ ವೆಂಕಟರಾಯನು
ಪಂಕಜಾಕ್ಷರ ಮುಯ್ಯ ತಿರುಗಿಸಿ
ಅಸಂಖ್ಯ ರಾಜರು ಬರಬೇಕೆಂದು ಪ.

ವಾರಿಜಾಕ್ಷರು ಸುರರು ಮೊದಲೆ
ತೀವ್ರದಿಂದ ಬರಬೇಕೆಂದು
ಭೇರಿನಾದವ ಮಾಡಿದ ಕೃಷ್ಣ
ಬಾರೆ ಬಾರೆ ಭಾಗ್ಯನಿಧಿಯೆ ೧

ಬೊಮ್ಮಮೊದಲಾದ ಸುರರು
ತಮ್ಮ ತಮ್ಮ ಸತಿಯರಿಂದ
ಝುಮ್ಮನೆ ಮುಯ್ಯಕ್ಕೆ ಬರಬೇಕೆಂದು
ರಮ್ಯಕಾಳಿ ಹಿಡಿಸಿದ ಕೃಷ್ಣ ೨

ಇಂದ್ರ ಮೊದಲಾದ ಸುರರು
ಚಂದ್ರ ಸೂರ್ಯರೊಡಗೂಡಿ
ತಂದೆ ರಾಮೇಶನರಮನೆಗೆ
ಒಂದು ಕ್ಷಣದಿ ಬರಬೇಕೆಂದು ೩

## ೧೧೮

ಬೊಮ್ಮ ಬಂದನೆಂದು ತಮ್ಮ ಲೋಕದಿ
ನಮ್ಮ ಮಾರುತ ಬಂದನೆ
ಧಿಮ್ಮಿ ಧಿಮ್ಮಿ ಧಿಮ್ಮಿ ಧಿಮಕು ಎನುತಲೆ
ರಮ್ಮಿ ರಮಣಿಯರ ಕುಣಿಸುತ ಪ.

ರುದ್ರ ಬಂದನೆಂದು ಸಿದ್ಧಜನ ಕೂಡಿ
ಪ್ರಸಿದ್ಧ ಇಂದ್ರನು ಬಂದನೆ
ಅಲ್ಲಿದ್ದ ಪರಿವಾರ ಎಲ್ಲ ಸಹಿತಾಗಿ
ಶುದ್ಧ ಅಗ್ನಿಯು ಬಂದನೆ ೧

ಯಮನು ಬಂದನೆಂದು ಯಾಮದಿಂದಲೆ
ಝುಮ್ಮನೆ ನಿರರತಿ ಬಂದನೆ
ವಿಮಲ ವಾಹನ ವರುಣ ಬಂದನೆ
ರಮಣಿ ಗಂಗೆಯು ಬಂದಳೆ ೨

ವಾತ ಬಂದನೆಂದು ಖ್ಯಾತಿಯಿಂದಲೆ
ಆತಪನು ಬಂದನೆ
ವೀತ ದೋಷ ರಮೇಶನಲ್ಲಿಗೆ
ನೂತನದ ಮುಯ್ಯ ನೋಡಲು ೩

## ೧೧೯

ಕೋಲ ಕೋಲೆನ್ನಿ ಕೋಲ
ಕೋಲೆನ್ನಿ ಮುತ್ತಿನ ಕೋಲ
ಕಾಲ ಕಾಲಕೆ ಸುಭದ್ರಿಯ ಮಾನ ಕಳೆದು
ನಾಚಿಸಿ ನಗುತಲೆ ಬನ್ನಿ ಪ.

ದೇವ ನಾರಿಯರೆಲ್ಲ ಬಂದರೆ
ಅಲ್ಲಿರುವೊ ಗಂಧರ್ವರು ಬಂದರೆ
ಪಾವನ ಸುರರೆಲ್ಲ ಬಂದರೆ
ನಮ್ಮ ದೇವರ ನೋಡಬೇಕೆಂದಲೆ ೧

ರಂಭೆ ಊರ್ವಶಿಯರು ಬಂದರೆ
ತಾಳ ತಂಬೂರಿ ಜನರೆಲ್ಲ ಬಂದರೆ
ತುಂಬರ ನಾರದರು ಬಂದರೆ
ನಮ್ಮ ಅಂಬುಜಾಕ್ಷನ ನೋಡೆವೆಂದಾರೆ ೨

ಸಿದ್ದ ಸಾಧ್ಯರೆಲ್ಲ ಬಂದರೆ
ಪ್ರಸಿದ್ಧ ನಾಟಕರೆಲ್ಲ ಬಂದರೆ
ಸನ್ನದ್ಧರಾಯರೆಲ್ಲ ಬಂದರೆ
ನಮ್ಮ ಮುದ್ದುರಮೆ ಅರಸನ್ನ ನೋಡೆವೆಂದಾರೆ ೩

## ೧೨೦

ಕೋಲ ಕೋಲೆನ್ನಿ ಮುತ್ತಿನ ಕೋಲ ಕೋಲೆನ್ನಿ
ಗೋಪಾಲರಾಯನ ನೋಡುವ ಬಾಲೆಯರೆ ಬನ್ನಿ ಪ.

ದಿಕ್ಕು ತುಂಬಿತು ಈ ದಿಕ್ಕು ತುಂಬಿತು
ಲೆಕ್ಕವಿಲ್ಲದ ಜನರು ರುಕ್ಮಿಣಿಯ ಮುಯ್ಯಕ್ಕೆ ೧

ಕಾಶ ತುಂಬಿತು ಎಲ್ಲ ಕೋಶ ತುಂಬಿತು
ಆಶೆ ಬಡುತಲೆ ಜನರು ಸೋಸಿನ ಮುಯ್ಯಕ್ಕೆ ೨

ಹಾದಿ ತುಂಬಿತು ಎಲ್ಲ ಬೀದಿ ತುಂಬಿತು
ಆದರದಿಂದಲೆ ಜನರುಮೋದದಿ ಮುಯ್ಯಕ್ಕೆ ೩

ಅಂಬರ ತುಂಬಿತು ಮ್ಯಾಲೆ ಮ್ಯಾಲೆ ಅಂಬರ ತುಂಬಿತು
ಸಂಭ್ರಮದಿಂದಲೆ ಜನರು ರಂಭೆಯರ ಮುಯ್ಯಕ್ಕೆ ೪

ಪಟ್ಟಣ ತುಂಬಿತು ಒಂದಿಷ್ಟು ಬಿಡದಲೆ
ಕೃಷ್ಣ ರಾಮೇಶನ ಜನರು ಶ್ರೇಷ್ಠದ ಮುಯ್ಯಕ್ಕೆ ೫

## ೧೨೧

ಶ್ರೀಶನ ಭೇರಿ ನಾದಗಳಿಂದ ಬೃಹಸ್ಪತಿ ಬಂದ ಪ.

ಮಿತ್ರೆಯರು ಬೃಹಸ್ಪತಿಗೆ ಮುತ್ತಿನ ಗದ್ದಿಗೆಯನಿಟ್ಟು
ಅರ್ಥಿಲೆ ಚರಣಕ್ಕೆರಗಿದರು
ಅರ್ಥಿಲೆ ಚರಣಕ್ಕೆರಗಿದರು ಬೃಹಸ್ಪತಿ
ಉತ್ತಮ ತಿಥಿಯು ಬರಬೇಕು ೧

ಜಾಣೆಯರು ಬೃಹಸ್ಪತಿಗೆ ಮಾಣಿಕದಕ್ಷತೆನಿಟ್ಟು
ಅಣಿ ಮುತ್ತಿಟ್ಟು ಮೊರ ತುಂಬಿ
ಅಣಿ ಮುತ್ತಿಟ್ಟು ಮೊರತುಂಬಿ ಸುಭದ್ರ
ಆಣಿಯ ಬಿಡಿಸೋ ತಿಥಿ ಬೇಕು ೨

ಎಲ್ಲ ನಾರಿಯರಿಗೆ ಬಲ್ಲಿದತಿಥಿಬೇಕು
ಚಲ್ವ ರಾಮೇಶ ನುಡಿದನು
ಚಲ್ವ ರಾಮೇಶ ನುಡಿದನು ಬೃಹಸ್ಪತಿ
ನಿಲ್ಲದೆ ತೆಗೆದ ಶುಭ ತಿಥಿಯ ೩

## ೧೨೨

ಸುಲಭದಿಂದ ಪಾಂಡವರ ಗೆಲಿದುಕೊಂಡು
ನಗುತಬಾಹೊ ಬಲವ ಹೇಳೆಂದ ಕೃಷ್ಣ ಪ.

ಭರದಿ ಕೃಷ್ಣನಂಘ್ರಿಗಳಿಗೆ ಎರಗಿ
ಬೃಹಸ್ಪತಿಯು ನಗುತ
ಬರುವೋದು ಚಂದ್ರನ ಬಲವ
ಹರಿಯೇ ತೆರಳೆಂದ ೧

ಮತ್ತೆ ಪಾಂಡವರ ಗರುವ ಒತ್ತೇವೋ ಮೂಲೆಗೆ
ಈ ಹೊತ್ತೆ ಸೂರ್ಯನ ಬಲವ ಚಿತ್ತೈಸೆಂದನು
ಬೃಹಸ್ಪತಿ ಚಿತ್ತೈಸೆಂದನು ೨

ಗುರುಬಲ ಎಂಬೋದು ಎಲ್ಲ ಹರದೆಯರಿಗೆ
ತೋರುತಿರೆ ಗರವು ಮುರಿದು ಸುಭದ್ರೆಯ
ಬರುವಿರಮ್ಮಯ್ಯ ನಗುತ ಬರುವಿರಮ್ಮಯ್ಯ ೩

ಶೀಘ್ರದಿ ಸತ್ಯಭಾಮೆ ರುಕ್ಮಿಣಿ
ದೇವಿಯರು ತೆರಳಿ ದುರ್ಗೆರವಿ ದ್ರೌಪತಿಯ ಮಾನ
ತಗ್ಗೋದೆಂದನು ಮಾರಿ ಕುಗ್ಗೋದೆಂದನು ೪

ಹದಿನಾರು ಸಾವಿರ ವೀರ ರಾಮೇಶನ ಮಡದಿಯರು
ಮಾರಿ ಮೇಲಾಗಿ ಬಾಹೋದು ನಿಜವೆಂದ
ಆಮಾತು ನೀರೆ ನಿಜವೆಂದ ೫

## ೧೨೩

ತೆರಳಿದ ನಮ್ಮರಂಗ ಅರಳುಮಲ್ಲಿಗೆ ಹೂವ
ತರುಳೆ ಸೂರ್ಯಾಡಿ ಬಾರೆ ಪ.

ರಾಜ ರಾಜರು ಸಹಿತ ಭೋಜನ ಮಾಡಿ
ಕೃಷ್ಣರಾಜ ಗೋಪಾಲನೀಗ ತೆರಳಿದ ೧

ಅಂಬುಜಾಕ್ಷನು ದಿವ್ಯ ತಾಂಬೂಲ
ಹಾಕಿಕೊಂಡು ಕಂಬು ಕಂದರನೀಗ ತೆರಳಿದ ೨

ಇಂದಿರೇಶ ತಾನು ಚಂದ್ರ ಸಾಲಿಗ
ಳಿಳಿದು ತಂದಿ ಭಕ್ತರ ಮನೆಗೆ ತೆರಳಿದ ೩

ಪ್ರೇಮದಿ ಕೃಷ್ಣರಾಯ ಸೋಮ
ಸಾಲಿಗ ಳಿಳಿದು ಸ್ವಾಮಿ ಭಕ್ತರ ಮನೆಗೆ ತೆರಳಿದ ೪

ಕುಂತಿ ದೇವಿಯರ ಪುಣ್ಯ ಎಂತು ವರ್ಣಿಸಬೇಕು
ಶ್ರೀಕಾಂತನು ಅವರ ಅರಮನೆಗೆ ತೆರಳಿದ ೫

ಮತ್ತೆಪಾಂಡವರ ಪುಣ್ಯ ವಿಸ್ತರಿಸಲೊಶವಲ್ಲ
ಚಿತ್ತಜನೈಯನೀಗ ತೆರಳಿದ ೬

ಪಕ್ಷಿವಾಹನ ಸ್ವಾಮಿ ಲಕ್ಷರೂಪವೆ ಧರಿಸಿ
ಲಕ್ಷ್ಮಿರಮಣ ನೀಗ ತೆರಳಿದ ೭

ಹಾಟಗಾಂಬರ ಧಾರಿ ಕೋಟಿ ರೂಪದಿ
ಜಗನ್ನಾಟಕ ಕೃಷ್ಣನೀಗ ತೆರಳಿದ ೮

ಚನ್ನರಾಮೇಶ ತಾನು ಅನಂತ ರೂಪವಧರಿಸಿ
ತನ್ನ ಭಕ್ತರ ಮನೆಗೆ ತೆರಳಿದ ೯

## ೧೨೪

ಘಿಲಕು ಅಂದಾವಮ್ಮ
ಗೆಜ್ಜೆ ಗಿಲಕು ಅಂದಾವೆ
ಕಲಕು ಮಾಡಿ ದೈತ್ಯರನ್ನ
ನೆಲಕ ಒತ್ತಿದ ಪಾದವಮ್ಮ ಪ.

ಸಿಟ್ಟಿಲೆ ದೈತ್ಯರ ಶಿರವ ಕುಟ್ಟಿ
ಸವರಿದ ಪಾದವೆಂದು
ಅಷ್ಟ ಸೌಭಾಗ್ಯ ಸುರರಿಗಿಟ್ಟ ಪಾದವೆಂದು ೧

ಅಂಗಾಲಿಲೆ ಬಲಿರಾಯಗೆ
ಹಿಂಗದ ಸುಖವಿತ್ತ ಪಾದ
ಗಂಗಾದೇವಿ ಪಡೆದ ಶ್ರೀರಂಗನ ಪಾದವೆಂದು ೨

ಭಂಡಿಲಿದ್ದ ಸುರನ ಶಿರವ
ತುಂಡರಿಸಿದ ಪಾದವೆಂದು
ಕೊಂಡಾಡಿ ಅಕ್ರೂರ ತಿಳಿದುಕೊಂಡ ಪಾದವೆಂದು ೩

ಮರಣ ತಪ್ಪಿಸಿ ಪಾರ್ಥನಿಗೆ
ಕರ್ಣನ ನಾಚಿಸಿದ ಪಾದ
ತರುಳೆರ ಕುಚಕಿತ್ತ ಆ ಅರುಣನ ಪಾದವೆಂದು ೪

ಮಣಿಗಣ ಭೂಷಣ ಸರ್ಪನ
ಫಣಿಯಲ್ಲಿ ಕುಣಿದಿದ್ದ ಪಾದ
ಗುಣಪೂರ್ಣ ರಾಮೇಶ ನಮ್ಮ ತಪ್ಪೆಣಿಸದ ಪಾದವೆಂದು ೫

## ೧೨೫

ಲಕುಮಿ ರಮಣನು ಹೆಜ್ಜೆನಿಕ್ಕಲು
ಕಿಂಕಿಣಿ ಕಿಂಕಿಣಿ ಎಂದಿವೆ ಟೊಂಕದ ಗೆಜ್ಜೆ ಪ.

ಲೆಕ್ಕವಿಲ್ಲದ ಹಗ್ಗ ತಂದು
ಚಕ್ಕನೆ ಕಟ್ಟೋಳು ಬಂದು
ಚಿಕ್ಕಟೊಂಕಲಿಂತೆಂದು
ಅಕ್ಕಜ ಬಟ್ಟಳಾಕೆ ಬಂದು ೧

ಧಿಟ್ಟನು ವರಳೆಳದು ತಂದು
ಥಟ್ಟನೆ ಮರ ಮುರಿದು ಬಂದು
ಸ್ಪಷ್ಟವಾದರೊ ಸೂರ್ಯರೆಂದು
ಕೊಟ್ಟ ಕೃಷ್ಣ ಅಭಯವೆಂದು ೨

ತೊಡೆಯ ನೇರುವಳೆ ಬಂದು
ನಡವ ವರ್ಣಿಸವೆಂದು
ನುಡಿಯಲಾರೆವಿತಂಡ
ನುಡಿದಳುರಮೆ ಬಂದು ೩

## ೧೨೬

ಥಳಕು ಥಳಕು ಹೊಳೆವೋ
ತನ್ನ ಬೆಳಕು ತುಂಬಿಭವನದೊಳು
ಝುಳಕು ಝುಳಕು ಬಂದ ನಮ್ಮ
ಜಾಣರಂಗನ ನೋಡುವ ಬಾರೆ ಅಂಗನೆ ಪ.

ನೀಲ ಮಾಣಿಕ ರತ್ನದಿವ್ಯ
ನಿಲವುಗನ್ನಡಿ ಹೊಳೆವ
ಮಹಲಗಳ ಇಳಿದು ಬಂದ ೧

ಕೋಟಿ ಕೋಟಿ ಸೂರ್ಯರಂತೆ
ಥಾಟತೋರೋ ಅಂಗಳದಿ
ದಾಟಿ ದಾಟಿ ಇಳಿದು ಬಂದ ೨

ನೂರು ಸೂರ್ಯರ ಬೆಳಕು
ತೋರುವಂತೆ ದ್ವಾರಗಳನು
ವಾರಿಜಾಕ್ಷ ಇಳಿದು ಬಂದ ೩

ಮುತ್ತಿನ ತ್ವಾರಣ
ನವರತ್ನ ಹಂದರ ದಾಟಿ
ಚಿತ್ರ ಚಾವಡಿ ಇಳಿದು ಬಂದ ೪

ವಜ್ರ ಮಾಣಿಕವು ಬಹಳ
ಸಜ್ಜ ತೊರೋ ಅಂಗಳದಿ
ನಿರ್ಜರೋತ್ತಮನು ಬಂದ ೫

ಪಚ್ಚದ ಪಾವಟಿಗೆ ರತ್ನ
ಹಚ್ಚಿದ ಹೊಸ್ತಿಲವ ದಾಟಿ
ಅಚ್ಯುತಾನಂತ ಬಂದ ೬

ನಾಗಶಯನ ತನ್ನ ಮನೆಯ
ಬಾಗಿಲ ಮುಂದೊಪ್ಪುತಿರಲು
ಭಾಗವತರ ಮ್ಯಾಳದಿಂದ ಬಂದ ೭

ರುದ್ರಾದಿಗೊಂದ್ಯನ ಮುಂದೆ
ಅಧ್ಯಾನ(ಅಧೀನ) ವೆಂಬುವರು ಕೋಟಿ
ಮುದ್ದು ತೋರೋದಮ್ಮ ಸಭೆಯು ೮

ಅಲ್ಲೆ ಅಲ್ಲೆ ನಿಂತ ಜನರು
ಚಲ್ವರಮೆ ಅರಸನ ಮ್ಯಾಲೆ
ಮಲ್ಲಿಗೆ ಸೂರ್‍ಯಾಡೋರೆಷ್ಟ ೯

## ೧೨೭

ಕೋಲ ಕೋಲೆನ್ನಿ ಕೋಲ ಕೋಲೆನ್ನಿ
ಲಕ್ಷ್ಮೀಲೋಲ ನಿಂತಾನೆಂದು ಕೋಲೆನ್ನಿ ಪ.

ಅಚ್ಚ ಮುತ್ತಿನ ಸರಗಳನಿಟ್ಟು
ಕೃಷ್ಣ ಮಚ್ಛ ರೂಪದಿ ನಿಂತ ಕೋಲೆನ್ನಿ ೧

ಹೇಮ ರತ್ನದಾಭರಣಗಳನಿಟ್ಟು ಕೃಷ್ಣ
ಕೂರ್ಮರೂಪದಿ ನಿಂತ ಕೋಲೆನ್ನಿ ೨

ಸರಸ ಮುತ್ತಿನ ವಸ್ತಗಳಿಟ್ಟು
ಕೃಷ್ಣ ವರಾಹ ರೂಪದಿ ನಿಂತ ಕೋಲೆನ್ನಿ ೩

ಪ್ರೇಮದಿ ರತ್ನದ ವಸ್ತಗಳಿಟ್ಟು
ಕೃಷ್ಣ ನರಸಿಂಹ ರೂಪದಿ ಬಂದ ಕೋಲೆನ್ನಿ ೪

ಶೀಘ್ರದಿ ರತ್ನದ ವಸ್ತಗಳಿಟ್ಟು
ಕೃಷ್ಣ ವಾಮನ ರೂಪದಿ ನಿಂತ ಕೋಲೆನ್ನಿ ೫

ಭರದಿ ಮುತ್ತಿನ ಸರಗಳಿಟ್ಟು ಕೃಷ್ಣ
ಭಾರ್ಗವ ರೂಪದಿ ನಿಂತ ಕೋಲೆನ್ನಿ ೬

ನೂತನ ಮುತ್ತಿನ ಸರಗಳಿಟ್ಟು
ಕೃಷ್ಣ ಸೀತಾರಾಮನು ನಿಂತ ಕೋಲೆನ್ನಿ ೭

ತಿದ್ದಿದ ರತ್ನದ ವಸ್ತಗಳಿಟ್ಟು
ಕೃಷ್ಣ ಮುದ್ದು ರೂಪದಿ ನಿಂತ ಕೋಲೆನ್ನಿ ೮

ಬದ್ಧವಾದ ಮಣಿಗಳನಿಟ್ಟು
ಕೃಷ್ಣಬುದ್ಧ ರೂಪದಿ ನಿಂತ ಕೋಲೆನ್ನಿ ೯

ಹಲವು ರತ್ನದ ವಸ್ತಗಳಿಟ್ಟು
ಕೃಷ್ಣ ಚಲ್ವಕಲ್ಕಿನಿಂತ ಕೋಲೆನ್ನಿ ೧೦

ಚಲ್ವ ರಾಮೇಶ ವಸ್ತಗಳಿಟ್ಟು
ನಮ್ಮ ಸುಲಭ ಮೂರುತಿ ನಿಂತ ಕೋಲೆನ್ನಿ ೧೧

## ೧೨೮

ಗರುಡನೇರುವ ಕೃಷ್ಣ ಹೊರಡುವನೀಗ ಸಖಿ
ನೋಡೋಣ ನಾವೆಲ್ಲ ಈಗ ಬಾರೆ ನೀರೆ ಪ.

ಗಗನದಿ ಬೆಳಗುವ ಹಗಲು ಬತ್ತಿಗಳೆಷ್ಟು
ಹಗಲು ಬತ್ತಿಗಳೆಷ್ಟು ಮುಗಿಲಿಗೆ ಮುಟ್ಟೋ
ಬಿರಸೆಷ್ಟ ಬಹುಶ್ರೇಷ್ಠ
ಮುಟ್ಟೋ ಮಿಂಚಿನಂತೆ ಹೊಡೆವೊ ಬಾಣಗಳು ಕಡಿಯಿಲ್ಲ ನಲ್ಲೆ ೧

ಎಡಬಲ ಭಾವೆ ರುಕ್ಮಿಣಿ ಮಡದಿಯರೊಪ್ಪುವ
ಮಡದಿಯ ಹಿಂದೊಪ್ಪುವ ಬೆಡಗು ವರ್ಣಿಸಲು ವಶವಲ್ಲ ನಲ್ಲೆ
ಬೆಡಗು ವರ್ಣಿಸುವೊ ಅವರಾರೆ ಚತುರ್ಮುಖನು
ಖಡಿಸೋತು ಕೈಯ ಮುಗಿದಾನೆ ತಾನೆ ೨

ಕೃಷ್ಣನರಸಿಯರುಉಟ್ಟ ಪಟ್ಟಾವಳಿಯ ಬೆಳಕು
ಅಷ್ಟು ಇಷ್ಟೆಂಬ ಮಿತಿ ಇಲ್ಲ ನಲ್ಲೆ
ಅಷ್ಟು ಇಷ್ಟೆಂಬ ಮಿತಿ ಇಲ್ಲ ಸೂರ್ಯನಾಚಿ
ಬಿಟ್ಹೋದ ತಮ್ಮ ಮನೆತನಕ ಸುಜನಕೆ ೩

ಚದುರೆಯರು ಕೃಷ್ಣರಾಯ ಹೊದೆವ ಚಾದರದ ಬೆಳಕು
ಹೊದೆವೊ ಚಾದರದ ಬೆಳಕು ಅದ್ಭುತವಾಗಿ ಬೆಳಗೋದೆ
ಹೊಳವೋದೆ ಅದ್ಭುತವಾಗಿ ಬೆಳಗೋದೆ
ಅವರ ಚಲ್ವಿಕೆಗೆ ಮದನ ತಾ ನಾಚಿ ಮನೆಗ್ಹೋದ ಅಗಾಧ ೪

ಕಡಗ ಸರಪಳಿ ಗೆಜ್ಜೆ ನಡುವಿನೊಡ್ಯಾಣ ಪದಕ
ನಡುವಿನೊಡ್ಯಾಣ ಪದಕ ಇಡವೊ
ಕುಂಡಲದ ಮುಕುಟವೆ ಚಂದವು
ಮುಕುಟದ ಕಾಂತಿಗೆ ಅಡಗಿವೆ ತಾರೆ ಗಗನದಿ ಮುದದಿ ೫

ಘುಲ್ಲ ನಯನೆಯರ ಮುತ್ತಿನ ಝುಲ್ಲೆ ವಸ್ತದ ಬೆಳಕು
ಎಲ್ಲೆಲ್ಲು ಇಲ್ಲ ಜಗದೊಳು ಕೇಳು
ಎಲ್ಲೆಲ್ಲೂ ಇಲ್ಲ ಜಗದೊಳು ಚಂದ್ರನಾಚಿ
ಖಡಿ ಸೋತು ಕೈಯ ಮುಗಿದಾನೆ ತಾನೆ ೬

ಶ್ರೀ ವತ್ಸ ಕೌಸ್ತುಭ ಚಾರುವನ ಮಾಲೆ ಹೊಳೆವ
ನೂರು ಸೂರ್ಯರ ಬೆಳಕಿಲೆ ಎನುತಲೆ
ನೂರು ಸೂರ್ಯರ ಬೆಳಕಿಲೆ ವೈಜಯಂತಿ ಹಾರ
ಶೋಭಿಸುವ ಬೆಳಕೆಷ್ಟು ಬಹುಶ್ರೇಷ್ಠ ೭

ಮಂದಗಮನೆಯರು ಹರಿಯ ಗಂಧ ಕಸ್ತೂರಿ ಸೊಬಗು
ಛಂದ ವರ್ಣಿಸುವವರ್‍ಯಾರ ತೋರೆ
ಛಂದ ವರ್ಣಿಸುವ ಅವರ್‍ಯಾರೆ ಚತುರ್ಮುಖನ
ಛಂದಾಗಿ ನಾಚಿ ಕೈ ಮುಗಿದ ಸುಕರ ೮

ನಲ್ಲೆಯರು ರಮೆ ಅರಸು ಮಲ್ಲಿಗೆ ಮುಡಿದ ಚಂದ
ಮಲ್ಲಿಗೆ ಮುಡಿದ ಚಂದ ಎಲ್ಲೆಲ್ಲೂ ಇಲ್ಲಧರೆ ಮ್ಯಾಲೆ
ಎಲ್ಲೆಲ್ಲೂ ಇಲ್ಲ ಧರೆ ಮ್ಯಾಲೆ ಸರಸ್ವತಿಯು
ಚಲ್ವಿ ತಾ ನಾಚಿ ನಡೆದಾಳೆ ಕೇಳೆ ೯

## ೧೨೯

ನೋಡೋರು ಕೃಷ್ಣನ ನಾಡಿನ ಪ್ರಜರೆಲ್ಲ
ಮೂಡಲಗಿರಿವಾಸನ ಬೇಡಿದ
ವರಗಳ ನೀಡುವ ದಯದಿ
ಕೊಂಡಾಡುವರು ವೆಂಕಟರಾಯನ ಪ.

ಶ್ರೀನಿವಾಸನ ಕೋಟಿ ಆನೆ
ಶೃಂಗರಿಸ್ಯಾವ ನಾನಾರತ್ನಗಳಿಂದ
ಭಾನು ಕೋಟಿ ತೇಜ ತಾನು
ನಿರ್ಮಿಸಿದನು ಏನೆಂಬೆನು ಛಂದ ೧

ಚಿತ್ರ ವಿಚಿತ್ರದ ಮುತ್ತಿನ
ಪಲ್ಲಕ್ಕಿ ರತ್ನ ಮಾಣಿಕ ಹಚ್ಚಿ
ಚಿತ್ತ ಜನ್ಯೆಯನ ಪ್ರತ್ಯೇಕ
ವಿವರಿಸಿ ಅರ್ಥಿಹೇಳುವೆನಂದ ೨

ಎಂಟು ದಿಕ್ಕಿಗೆ ಒಪ್ಪೊ
ಒಂಟಿ ಸಾಲಗಳು ವೈಕುಂಠ
ಪತಿಯ ಮುಂದೆ ಕಂಠಿ ಚಿತ್ರವ
ಬರೆಸಿ ಕರುಣಿ ವೆಂಕಟದಿವ್ಯಗಿಲೀಟು ವಸ್ತ್ರಗಳ ಹೊಚ್ಚಿ ೩

ಹೇಳಲು ವಶವಲ್ಲ ಕಾಲೊಳು
ಆಭರಣವ ಭಾಳ ಮುತ್ತಿನ ಕುಚ್ಚು
ವ್ಯಾಳಾಶಯನನು ಅವರಿಗೆ ಹೇಳಿ
ನೇಮಿಸಿದನು ಆಳುಮಂದಿಯು ಮೆಚ್ಚ ೪

ರಥಿಕಾ ರಥಿಕರು ಏರೋ ರಥ
ಕೋಟಿಗಳಿಗೆ ರತ್ನಮಾಣಿಕ ಹಚ್ಚಿ
ಮಿತಿಯಿಲ್ಲದ ವಾಹನ ಸುತ
ಸತಿಯರಿಗಿತ್ತು ಅತಿ ಸೇವ್ಯರು ಮೆಚ್ಚಿ ೫

ಕೆಂಚೆ ಕೃಷ್ಣನ ರಥಕೆ
ಗೊಂಚಲ ಮುತ್ತುಗಳೆಷ್ಟ
ಮಿಂಚುವ ಸೂರ್ಯನಂತೆ ಮುಂದೆ ನೊಡುಣು ಬಾರೇ
ಚಂಚಲಾಕ್ಷಿ ಕೇಳೇ ವಿರಂಚಿ ಬೆರಗಾಗೋನಂತೆ ೬

ಚದುರ ರಾಮೇಶನ ಕುದುರೆ ಸಾಲುಗಳಿಗೆ
ಅದ್ಭುತ ರತ್ನಗಳೆ ಮದನಜನಯ್ಯನು
ಮುದದಿ ನಿರ್ಮಿಸಿದನು
ಸುದತೆ ಹೇಳುವೆ ಕೇಳೆ ೭

## ೧೩೦

ಕೋಲ ಕೋಲೆನ್ನ ಕೋಲ ಕೋಲ ಕೋಲೆನ್ನ ಕೋಲ
ಕೋಲೆಂದು ಪಾಡುವರೆಷ್ಟು ಕೇಳ ವಯ್ಯಾರಿ ಪ.

ಚಿತ್ರ ವಿಚಿತ್ರದ ಮುತ್ತು ಮಾಣಿಕ ಎಸವೋ
ಛತ್ರ ಹಿಡಿದವರೆಷ್ಟ ಕೇಳ ವೈಯಾರಿ ೧

ವೀತ-ದೋಷನ ಮುಂದೆ ಶ್ವೇತ ಛತ್ರವು
ಕೋಟಿ ಪ್ರೀತಿಲಿ ಹಿಡಿದವರೆಷ್ಟ ಕೇಳವಯ್ಯಾರಿ ೨

ಸೂರ್‍ಯ ಮಂಡಲಕೊಪ್ಪೊ ಸೂರ್‍ಯ ಪಾನವು
ಕೋಟಿಸಾರೆ ಹಿಡಿದವರೆಷ್ಟ ಕೇಳ ವಯ್ಯಾರಿ ೩

ಎಡಬಲ ಚಾಮರ ಹಿಡಿಕೆ ನವರತ್ನ ಹೊಳೆವ
ಹಿಡಿದು ಬೀಸುವರವರೆಷ್ಟ ಕೇಳ ವಯ್ಯಾರಿ ೪

ರತ್ನ ಮಾಣಿಕ ಬಿಗಿದ ಬೀಸಣಿಕೆಯ ಹಿಡಿದು
ಚೆನ್ನಾಗಿ ಬೀಸುವವರೆಷ್ಟ ಕೇಳ ವಯ್ಯಾರಿ ೫

ಚಲುವ ರಂಗನ ಮುಂದೆ ನಲಿಯುತ ನವಿಲಗರಿಯ
ಸುಳಿಸುವವರೆಷ್ಟ ಕೇಳ ವಯ್ಯಾರಿ ೬

ಅಚ್ಚ ಜರತಾರಿ ವಸ್ತ್ರ ಜತ್ತಾಗಿ ನಿರಿ ಹೊಯ್ದು
ಬಿಚ್ಚಿಹಾರಿಸುವರೆಷ್ಟ ಕೇಳ ವೈಯ್ಯಾರಿ ೭

ಫುಲ್ಲನಾಭನ ಮುಂದೆ ಮಲ್ಲ ಮುಷ್ಟಿಕರು
ತಮ್ಮೆಲ್ಲವಿದ್ಯೆಯನು ತೋರಿಸುವರೆಷ್ಟ ಕೇಳ ವೈಯಾರಿ ೮

ಬಂದಿಗಳು ರಾಮೇಶನ ಒಂದೊಂದು ಗುಣ ರಚಿಸಿ
ಚಂದಾಗಿ ಹೊಗಳುವರೆಷ್ಟ ಕೇಳ ವೈಯ್ಯಾರಿ ೯

## ೧೩೧

ಕೋಲ ಕೋಲೆನ್ನಿ ಕೋಲ ಕೋಲ ಕೋಲೆನ್ನಿ ಕೋಲ
ಕೋಲೆಂದು ಹರಿಯ ಪಾಡುವರು ಎಷ್ಟ ಪ.

ನಾಗಶಯನನ ಮುಂದೆ ಪೂಗಿ ಫಲಗಳ ಇರಿಸಿ
ನಾಗವೇಣಿಯರು ಸಾಗುವರು ಎಷ್ಟ ೧

ಪಂಕಜಾಕ್ಷನ ಮುಂದೆ ಕುಂಕುಮ ಅರಿಷಿಣ ಪಿಡಿದು
ಕಂಕಣದ ಕೈಯ ಶಂಕಿನಿಯರೆಷ್ಟ ೨

ಅಂಬುಜಾಕ್ಷನ ಮುಂದೆ ತಾಂಬೂಲ ತಬಕಗಳು
ಸಂಭ್ರಮದಿ ಧರಿಸಿದ ರಂಭೆಯರು ಎಷ್ಟ ೩

ಮಂದಗಮನೆಯರ ಮುಂದೆಗಂಧ ಕಸ್ತೂರಿ ಪುನಗು
ಛಂದದಲಿ ಧರಿಸಿ ಮುಂದಾಗುವರೆಷ್ಟ ೪

ಚಲ್ವ ರಂಗನ ಮುಂದೆ ಮಲ್ಲಿಗೆ ಹೂವಿನ
ಝಲ್ಲೆಗಳ ಧರಿಸಿದ ನಲ್ಲೆಯರು ಎಷ್ಟ ೫

ಬುಕ್ಕಿಟ್ಟು ಮೊದಲಾಗಿ ವಿಶಿಷ್ಠ ಪರಿಮಳ ಧರಿಸಿ
ಕೃಷ್ಣರಾಯನ ಮುಂದೆ ನಡೆವೋರು ಎಷ್ಟ ೬

ಕ್ಯಾದಿಗೆ ಸಂಪಿಗೆ ಊದಿನ ಖಡ್ಡಿಗಳು
ಮುದದಲಿ ಧರಿಸಿ ಮುಂದಾಗುವರಷ್ಟ ೭

ಉತ್ತತ್ತಿಕದಳಿ ಜಂಬುದ್ರಾಕ್ಷ ಚೂತ ಫಲ ಹೊತ್ತು
ಹರುಷದಲ್ಲಿ ಮಿತ್ರೆಯರು ಸಾಗುವರೆಷ್ಟ ೮

ಹಾಲು ಮೊಸರಿನ ಕುಂಭ ಬಾಲೆಯರು ಧರಿಸುತ
ಸಾಲು ಸಾಲಾಗಿ ಸಾಗುವರೆಷ್ಟ ೯

ಬೆಂಡು ಬತ್ತಾಸ ದುಂಡುಗಡಲೆ ಕಬ್ಬು
ತಂಡ ತಂಡದಲಿ ಹಿಡಿದವರು ಎಷ್ಟ ೧೦

ರಂಗರಾಯನ ಮುಂದೆ ಗಂಗೋದಕ ಧರಿಸಿ
ಶೃಂಗಾರದಿಂದ ಸಾಗಿದವರು ಎಷ್ಟ ೧೧

ಚಲ್ವರಮಿಅರಸಗೆ ಸಲ್ಲಿಸಬೇಕೆಂದು
ಕಲ್ಲು ಸಕ್ಕರೆ ಹೊತ್ತ ನಲ್ಲೆಯರು ಎಷ್ಟ ೧೨

## ೧೩೨

ನಾಗಲೋಕದ ಕಾಳಿ ಈಗಳೆ ಹಿಡಿಸುತ
ನಾಗವೇಣಿಯರೆಲ್ಲ ಸಾಗಿ ಹೆಜ್ಜೆ ನಿಕ್ಕುತ
ಈಗ ನೋಡುಣು ಬಾರೆ ಬ್ಯಾಗಸೆ
ದ್ವಾರಕಾಸಾಗರ ಶಯನನಿನ್ನು ಪ.

ಅಂಬುಜಾಕ್ಷನು ತಾನು ಅತಿ ಬೇಗ ಹೊಯ್ಸಿದ
ಜಂಬುದ್ವೀಪದ ಜಯಭೇರಿ
ಜಂಬುದ್ವೀಪದ ಜಯಭೇರಿ ಹೊಯಿಸಲು
ಕುಂಭಿಣಿ ಜನರೆಲ್ಲ ಕೂಡಿತು ಎಲೆ ಸಖಿ ೧

ಏಳು ಲೋಕದ ಕಾಳಿಭಾಳೆ ರೌಸದಿ ಹಿಡಿಯೆ
ಕಾಳಿ ಮರ್ದನನ ಮನೆಮುಂದೆ
ಕಾಳಿ ಮರ್ದನನ ಮನೆಮುಂದೆ ಹಿಡಿಸಲು
ಏಳು ಲೋಕದ ಜನ ಮೇಳವ ನಮಗೆ ಎಲೆ ಸಖಿ ೨

ಕೋಟಿ ಕೋಟಿ ಹಿಲಾಲು ಥಾಟಾಗಿ ತೋರುವ
ಹಾಟಗಾಂಬರನ ಮನೆಮುಂದೆ
ಹಾಟಗಾಂಬರನ ಮನೆಮುಂದೆ ಬೆರಗಾಗಿ
ಪಾಟಿಸಿ ನೋಡೋ ಪ್ರಜರೆಷ್ಟ ಎಲೆ ಸಖಿ ೩

ಹತ್ತು ಕೋಟಿ ಹಿಲಾಲು ಜತ್ತಾಗಿ ತೋರುತ
ಚಿತ್ತಜನ್ಯೆಯನ ಮನೆಮುಂದೆ
ಚಿತ್ತಜನ್ಯೆಯನ ಮನೆಮುಂದೆ ಬೆರಗಾಗಿ
ಅರ್ಥಿಲೆ ನೋಡೋ ಪ್ರಜರೆಷ್ಟ ಎಲೆ ಸಖಿ ೪

ನೂರು ನೂರು ಸಾವಿರ ತೋರುವ ಬಾಣ ಬಿರುಸು
ವಾರಿಜಾಕ್ಷನ ಮನೆಮುಂದೆ
ವಾರಿಜಾಕ್ಷನ ಮನೆಮುಂದೆ ಈ ಸೊಬಗು
ಆರುವರ್ಣಿಸಲು ವಶವಲ್ಲ ಎಲೆಸಖಿ ೫

ಸಿಡಿಲು ಘರ್ಜಿಸಿದಂತೆ ಬಿಡುವ ಬಾಣಗಳೆಷ್ಟ
ಧಡ ಧಡ ಹಾರುವ ಬಿರುಸೆಷ್ಟ
ಧಡ ಧಡ ಹಾರುವ ಬಿರುಸೆಷ್ಟು ಮುಯ್ಯದ ಬೆಡಗ
ವರ್ಣಿಸಲು ವಶವಲ್ಲ ಎಲೆಸಖಿ ೬

ಗರುಡನ ಆಭರಣವ ಮೃಡನು ವರ್ಣಿಸಲಾರ
ಜಡಿದ ರತ್ನಗಳು ಝಳಪಿಸುತ
ಜಡಿದ ರತ್ನಗಳು ಝಳಪಿಸುವ ವಾಹನವೇರಿ
ಒಡೆಯ ರಾಮೇಶ ಕುಳಿತಾನೆ ಎಲೆಸಖಿ ೭

## ೧೩೩

ಬಂದರೆ ಭಾಗ್ಯ ಲಕ್ಷ್ಮಿಯರು
ಮುಯ್ಯವ ಛಂದಾಗಿ ಗೆಲಿಸೆಂದು
ವಂದಿಸಿ ಹರಿಗೆ ಪ.

ಇಂದು ಮುಖಿಯರೆಲ್ಲ ಛಂದಾದ ವಸ್ತಗಳಿಟ್ಟು
ಚಂದ್ರಗಾವಿಯನುಟ್ಟು ಚಂದ್ರನಂತೆ ಒಪ್ಪುತ ೧

ನೀಲ ಕುಂತಳಿಯರು ನೀಲ ಮಾಣಿಕದ್ವಸ್ತ್ರ
ಮೇಲುದು ಧರಿಸುತ ನೀಲಾದಿಗಳೆಲ್ಲ ೨

ವಸ್ತ ಮುತ್ತಿನ ಇಟ್ಟು ಕಸ್ತೂರಿ ಬೊಟ್ಟಿಟ್ಟು
ಮಸ್ತಕದಲಿ ಮಾಣಿಕ್ಕಿಟ್ಟು ಭದ್ರಾದಿಗಳು ೩

ಹಸ್ತಾಭರಣ ಸಮಸ್ತ ವಸ್ತಗಳಿಟ್ಟು
ಸ್ವಸ್ತ ಚಿತ್ತದಿಂದ ಮಿತ್ರ ವೃಂದಾರಕಾದಿಗಳು ೪

ಕಾಲಿಂದ್ಯಾದಿಗಳೆಲ್ಲ ಬಹಳೆ ವಸ್ತಗಳಿಟ್ಟು
ವೈಯಾರಿಯರು ಒಲಿಯುತ ವ್ಯಾಲಾಶಯನನ ಬಳಿಗೆ ೫

ಲಕ್ಷಣಾದಿಗಳೆಲ್ಲ ಲಕ್ಷ ವಸ್ತಗಳಿಟ್ಟು
ಲಕ್ಷ್ಮಿರಮಣನೆ ಪಂಥ ವೀಕ್ಷಿಸಿಗೆಲಿಸೆಂದು ೬

ಜಾಂಬವಂತ್ಯಾದಿಗಳು ತುಂಬಿದೊಸ್ತಗಳಿಟ್ಟು
ಸಂಭ್ರಮ ಸೂಸುತ ಅಂಬುಜಾಕ್ಷನ ಬಳಿಗೆ ೭

ಹದಿನಾರು ಸಾವಿರ ಚದುರೆಯರು ವಸ್ತಗಳಿಟ್ಟು
ಮದನ ಜನಕನ ಮುಯ್ಯ ಮುದದಿಂದ ಗೆಲಿಸೆಂದು ೮

ವೀರ ರಾಮೇಶ ನಾರಿಯರ ಸೋಲಿಸೋ ಭಾರ
ನಿನ್ನದೆಂದು ನೂರು ಮಂದಿನುಡಿದಾರು ೯

## ೧೩೪

ಕೋಲ ಕೋಲನ್ನ ಕೋಲ
ಕೋಲ ಕೋಲನ್ನ ಕೋಲ
ಕೋಲ ಹೊಯ್ದುಪಾಡಿ ನಮ್ಮ ಜಾಣರಂಗಗೆ ಪ.

ಲೋಕನಾಯಕ ವ್ಯಾಸ ಮುನಿಗಳಿಗೆ
ಏಕೋ ಭಾವದಿಂದ ನಮಿಸಿ
ಹಾಕಿರೆಮ್ಮ ಕೋಲ ಹೊಯ್ದು
ವಾಕ್ಯಗೆಲಿಸೆಂದು ೧

ಮಿತ್ರೆ ರುಕ್ಮಿಣಿದೇವಿ ಕರೆದು
ಮಿತ್ರಾದಿಗಳಿಗೆ ಹೇಳಿದಳು
ಮುತ್ತಿನ ಕೋಲ ತೊಳಿಯಿರವ್ವ
ಉತ್ತಮ ಜಲದೊಳು ೨

ರಾಸ ಕ್ರೀಡೆಯಲ್ಲಿ ವನಿತೆಯರು
ವಾಸುದೇವ ಪಿಡಿದ ಕೋಲ
ಸೋಸಿಲೆ ಪೂಜಿಸಿರಮ್ಮ
ಲೇಸು ಕೊಡಲೆಂದು ೩

ಮಂದಗಮನೆಯರೆಲ್ಲ ಕೋಲಿಗೆ
ಗಂಧ ಅಕ್ಷತೆ ಏರಿಸಿರೆ
ಮುಂದಾಗಿ ಬಲಗೊಳ್ಳಿರೆಲ್ಲ
ವೃಂದಾರಕರನ್ನ ೪

ನಲ್ಲೆಯರು ಮುತ್ತಿನ ಕೋಲಿಗೆ
ಮಲ್ಲಿಗೆ ಸಂಪಿಗೆ ಏರಿಸಿರೆ
ಎಲ್ಲಾ ಫಲಗಳಿಟ್ಟು ಕೈಯ್ಯ
ನಲ್ಲೆಯರು ಮುಗಿದಿರೆ ೫

ಜಾಣೆಯರು ನೀವೆಲ್ಲ ಮೊದಲೆ
ವಾಣಿಯ ಬಲಗೊಳ್ಳಿರೆ
ಕಲ್ಯಾಣವಾಗಲೆಂದು ಕೈಯ್ಯ
ಮಾಣಗೆ ಮುಗಿದಿರೆ ೬

ಮೃಡನ ಮಗನ ಮೊದಲೆ ನೆನೆದು
ಪಿಡಿಯಿರಮ್ಮ ಕೋಲ ನಿಮ್ಮ
ನುಡಿಯಗೆಲಿಸಲೆಂದು
ದ್ರವ್ಯವಕೊಡಿರೆ ದಾನವ ೭

ಇಂದಿರಾದೇವಿಗೆ ನಮಿಸಿ
ಬಂದು ರಾಮೇಶಗೆ ಎರಗಿ
ಛಂದಾಗಿ ಕೋಲ ಹೊಯಿದು
ಪಂಥ ಇಂದು ಗೆಲಿಸೆಂದು ೮

## ೧೩೫

ಮಂದರ ಧರನೆಂಬೊ ಕೋಲ
ಸುಂದರಾಂಗನೆಂಬೊ ಯಾದವೇಂದ್ರ
ಚಂದ್ರನೆಂಬೊ ಕೋಲ ಪಿಡಿದು ನಿಂತಾರು ಪ.

ಹದಿನಾರು ಸಾವಿರ ಮಂದಿ
ಮುದದಿಂದ ಹೆಜ್ಜೆಯನಿಕ್ಕುತ
ಚದುರೆಯರು ಕೋಲಾಟಕ್ಕಾಗಿ
ಒದಗಿ ನಿಂತಾರು ೧

ನೂರು ಮಂದಿ ನಾರಿಯರೆಲ್ಲ
ಹಾರಭಾರ ಅಲಿಯುತಲೆ
ಮುರಾರಿಯ ಮುಂದೆಲ್ಲ
ಸಾಲು ಸಾಲಿಲೆನಿಂತರು ೨

ನೀಲ ವರ್ಣನ ಮಡದಿಯರೆಲ್ಲ
ಮೇಲಾದ ಕೋಲಾಟಕ್ಕಾಗಿ
ಬಾಲೆಯರು ಬಂದೆಲ್ಲ
ಸಾಲಾಗಿ ನಿಂತರು ೩

ಚಕ್ರಧರನ ಮಡದಿಯರೆಲ್ಲ
ಚಕ್ಕನೆ ಕೋಲಾಟಕ್ಕಾಗಿ
ನಕ್ಕು ಮುಗುಳನಗೆಯ
ಸಖ್ಯದಲೆ ನಿಂತರು ೪

ಪ್ರೇಮದಿಂದ ನಾರಿಯರೆಲ್ಲ
ಭಾವೆ ರುಕ್ಮಿಣಿಗೆ ಎರಗಿ
ಶ್ರೀಮಂತ ಧೀಮಂತ ನಮ್ಮ
ಸ್ವಾಮಿ ಗೆಲಿಸೆಂದು ೫

ಅಂಗನೆಯರು ರಾಮೇಶನ
ಮಂಗಳ ಮಹಿಮೆಯ
ಬೆಳದಿಂಗಳ ತುಂಬಿದರು
ಮೋಹನಾಂಗ ಚಂದ್ರಗೆ ೬

## ೧೩೬

ದುಂಡುಗಟ್ಟಿ ನಿಂತರಮ್ಮ
ದುಂಡುಗಟ್ಟುತ ಎಲ್ಲರೂ
ದುಂಡುಗಟ್ಟುತ ಪೆಂಡೆಯ
ಗೆಜ್ಜೆಗಳು ಘಿಲ್ಲು ಘಿಲಕು ಎನ್ನುತ ಪ.

ಕೋಗಿಲಂತೆ ಸ್ವರವನೆತ್ತಿ
ಬಾಗಿ ಬಳಕುತ್ತ ಎಲ್ಲರೂ
ಬಾಗಿ ಬಳುಕುತ್ತ ನಾಗವೇಣಿಯರು
ಚಂದ್ರನ್ನಾಂಗೆ ಒಪ್ಪುತ ಚಂದ್ರನ್ನಾಂಗೆ ಒಪ್ಪುತ ೧

ಚಿತ್ರ ಚಕೋರದಂತೆ ನಲಿದು ನರ್ತನಾಡುತ
ನಲಿದು ನರ್ತನಾಡುತ ಹಸ್ತವೆಂಬೊ ಕಮಲ
ಮುದದಿ ಎತ್ತಿಮುಗಿಯುತ
ರಂಗಗೆ ಎತ್ತಿ ಮುಗಿಯುತ ೨

ಲಕುಮೇಶನಲ್ಲೆ ಸ್ನೇಹ ಉಕ್ಕಿ ಚೆಲ್ಲುತ
ಶರದಿ ಉಕ್ಕಿಚಲ್ಲುತ ಅಕ್ಕ
ನೇತ್ರವೆಂಬೊ ಕುಮುದ
ಚಕ್ಕನೆ ಅರಳುತ ಚಕ್ಕನರಳುತ ೩

ರಂಗನಂಘ್ರಿಗೆರಗುವಂತೆ ಭೃಂಗವಾಗುತ
ಎರಗಿಭೃಂಗವಾಗುತ ತಮ್ಮ
ಅಂಗ ಮರೆದು ಮುದದಿ
ಉತ್ತುಂಗರಾಗುತ ಉತ್ತುಂಗರಾಗುತ ೪

ಹರವಿದ ಕ್ಯಾದಿಗೆಯು ನವಿಲು ಗರಿಯಂತೊಪ್ಪುತ
ನವಿಲುಗರಿಯಂತೊಪ್ಪುತ
ಶ್ರೀ ರಾಮೇಶನೆಂಬೊ ಮುಗಿಲಿಗೆ
ಪರಿವೆ ನಲಿಯುತ ಪರಿವೆನಲಿಯುತ ೫

## ೧೩೭

ಕೋಲೆಂದು ಪಾಡಿರೆ ಕೋಮಲೆಯರೆಲ್ಲ ಅಮ್ಮಯ್ಯ
ಬಾಲೆಯರು ಅರಿಷಿಣ ಕುಂಕುಮ ಹಚ್ಚಿ
ಹೊಯಿದಾರಮ್ಮಯ್ಯ ಕೋಲ ಹೊಯಿದಾರಮ್ಮಯ್ಯ ಪ.

ಹಿಂಡು ನಾರಿಯರೆಲ್ಲ ಕೂಡಿ ದುಂಡು ಗಟ್ಟುತ
ಕೊಂಡಾಡಿ ಕೃಷ್ಣನ ಕೋಲ ಹೊಯಿದಾರಮ್ಮಯ್ಯ ೧

ಹಸ್ತ ಕಡಗ ಹರಡಿ ದೋರೆ ಹವಳ ಕಂಕಣ
ಹಸ್ತಿಗಮನೆಯರು ಎತ್ತಿ ಕೋಲ ಹೊಯಿದಾರಮ್ಮಯ್ಯ ೨

ಮುತ್ತಿನ ವಾಲೆ ಮೂಗುತಿ ಮುದ್ದು ಸುರಿಯುತ್ತ
ಜತ್ತಾಗಿ ಜಾಣೆಯರು ಕೋಲ ಹೊಯಿದಾರಮ್ಮಯ್ಯ ೩

ಹೆರಳು ಬಂಗಾರ ಕ್ಯಾದಿಗೆ ಹೆಳಲು ಅಲೆಯುತ
ನಳಿನ ಮುಖಿಯರಿಟ್ಟು ಕೋಲ ಹೊಯಿದಾರಮ್ಮಯ್ಯ ೪

ಮಲ್ಲಿಗೆ ಸಂಪಿಗೆ ಮುಡಿದ ನಲ್ಲೆಯರೆಲ್ಲರು
ನಮ್ಮ ಫುಲ್ಲನಾಭನ ಪಾಡಿ ಕೋಲ ಹೊಯಿದಾರಮ್ಮಯ್ಯ ೫

ಚವರಿ ರಾಗಟೆ ಚಲ್ವಗೊಂಡ್ಯ ಛಂದಾಗಿ ಒಪ್ಪುತ
ಚದುರೆಯರು ಛಂದಾಗಿ ಕೋಲ ಹೊಯಿದಾರಮ್ಮಯ್ಯ ೬

ಥೋರ ಮುತ್ತಿನಹಾರ ಪದಕ ಭಾರ ಧರಿಸುತ
ರಘುವೀರನ ಕೊಂಡಾಡಿ ಕೋಲ ಹೊಯಿದಾರಮ್ಮಯ್ಯ ೭

ನಡುವಿಗೆ ಒಡ್ಯಾಣವಿಟ್ಟು ನಾರಿಯರೆಲ್ಲರು ತಮ್ಮ ಬಡನಡ
ಬಳುಕುತ ಕೋಲ ಹೊಯಿದಾರಮ್ಮಯ್ಯ ೮

ಉಟ್ಟ ಪೀತಾಂಬರ ಕಾಲಿಗಿಟ್ಟ ಗೆಜ್ಜೆಯು
ನಮ್ಮ ಧಿಟ್ಟರಮಿಅರಸನೆಂದು ಕೋಲ ಹೊಯಿದಾರಮ್ಮಯ್ಯ ೯

## ೧೩೮

ಮಣಿಗಣ ಭೂಷಣ ಅಣಿಗಾಣೆ
ನಿಮಗಿನ್ನು ಗಣರಾಯ ಗಣರಾಯ ಪ.

ರುದ್ರ ಕುಮಾರನೆ ಸಿದ್ಧಿ ವಿನಾಯಕ
ವಿದ್ಯವಪಾಲಿಸೊಬುದ್ಧಿದಾತನೆ ಅ.ಪ.

ಆನೆಯ ಮುಖದವನ ಧೇನಿಸಿ
ನಮಿಸುವೆ ಗಣರಾಯ ೧

ಶ್ರೀನಿವಾಸನ ಪ್ರಿಯ ನೀ
ನಮ್ಮಗೆಲಿಸೆಂದು ಗಣರಾಯ ೨

ಹಸ್ತಿಯ ಮುಖದವಗೆ ಹಸ್ತವ ಮುಗಿದೆವ
ಸ್ವಸ್ಥ ಮನಸು ಕೊಡು ವಿಸ್ತರ ಉದರನೆ ಗಣರಾಯ ೩

ಗಂಧ ಅಕ್ಷತೆ ಪುಷ್ಪ ತಂದೆ ದುರ್ವಾಂಕುರ
ಚಂದದ ವಸ್ತ್ರಗಳ ಒಂದೊಂದು ಕೈಕೊಳ್ಳೊ ಗಣರಾಯ ೪

ರನ್ನ ಮಾಣಿಕ ಬಿಗಿದ ಚಿನ್ನದಾಭರಣವ
ನಿನ್ನ ಪೂಜೆಗೆ ತಂದೆ ಚೆನ್ನಾಗಿ ಕೈಕೊಳ್ಳೊ ಗಣರಾಯ ೫

ಚಕ್ಕಲಿ ತರುಗುಮಿಕ್ಕಾಗಿ ಲಡ್ಡುಗೆ
ಚಿಕ್ಕಗಣಪ ಉಂಡು ಚಕ್ಕನೆ ವರಕೊಡು ಗಣರಾಯ ೬

ಚಲ್ವ ರಾಮೇಶನನೆಲೆಕಂಡ ಪುರುಷನೆ
ಇಲಿವಾಹನ ನಮ್ಮ ಸಲುಭದಿ ಗೆಲಿಸಯ್ಯ ೭

## ೧೩೬

ಶಾರದೆ ನಿನ್ನ ಪಾದವ ಆರಾಧಿಸುವೆವು
ವಾರಿಜ ಭವಕ್ಕೆ ಸೇರಿಸು ಹರಸು ಪ.

ಸ್ವಚ್ಛ ಮನದಿ ನಿನ್ನ ನಿತ್ಯ ಭಜಿಸುವೆವು
ಸಚ್ಚಿದಾನಂದನ ಚಿತ್ತದಿ ನಿಲ್ಲಿಸ ೧

ರಂಭೆ ನಮ್ಮಯ ಹೃದಯ ಅಂಬರದೊಳು ನಿಂತು
ಅಂಬುಜನಾಭನ ತುಂಬಿಸು ಮನದಿ ೨

ಅರಿಷಿಣ ಕುಂಕುಮ ಬೆರೆಸಿದ ಪರಿಮಳ
ಸರಸದಿ ಕೈ ಕೊಂಡು ಅರಸಿಯರ ಗೆಲಿಸ ೩

ಅತ್ತಿ ಹೂವಿನಸೀರೆ ಮುತ್ತಿನಾಭರಣವ
ಅರ್ಥಿಲೆ ಕೈ ಕೊಂಡು ಮಿತ್ರೆಯರ ಗೆಲಿಸ ೪

ರುಕ್ಮಿಣಿ ಪತಿ ಸೌಭಾಗ್ಯವ ರಚಿಸಲು
ಶೀಘ್ರದಿ ತೋರಿಸೆ ಕುಗ್ಗದೆ ನಮಗೆ ೫

ಸತ್ಯಭಾಮಾ ಪತಿ ನಿತ್ಯ ರಾಮೇಶನ ತತ್ವವ ರಚಿಸುವೆ
ಸತ್ಯವ ನುಡಿಸೆ ಶಾರದಾದೇವಿ ೬

## ೧೪೦

ಜಗದೋದ್ಧಾರನ ಸಖಿ ಮೊದಲಿಗೆ ಬಲಗೊಂಬೆ
ಮುದದಿಂದ ಮುಯ್ಯ ಗೆಲಿಸೆಂಬೆ
ನಲ್ಲೆ ನಮೋ ಎಂಬೆ
ಸುರರ ಎಲ್ಲರ ಬಲಗೊಂಬೆ ಪ.

ನಿಗಮ ತಂದವನಿಗೆ ಮುಗಿವೆವು ಕರಗಳ
ನಗವ ಪೊತ್ತವನ ಬಲಗೊಂಬೆ ೧

ಜಗವನೆತ್ತಿದವಗೆ ಜಾಣೆ ವಂದಿಸಿ
ಕರುಳು ಬಗೆದ ನರಸಿಂಹನ ಬಲಗೊಂಬೆ ೨

ಪೊಡವಿಯನಾಳಿದವಗೆ ಬಿಡದೆ ವಂದಿಸಿ
ಕೊಡಲಿಯ ಪಿಡಿದ ಭಾರ್ಗವನ ಬಲಗೊಂಬೆ ೩

ಸೇತುವೆ ಕಟ್ಟಿದವಗೆ ಪ್ರೀತಿಲೆ ನಮಿಸಿ
ಪಾರಿಜಾತ ತಂದವನ ಬಲಗೊಂಬೆ ೪

ವಸ್ತ್ರ ಹೀನಗೆ ನಾವು ಅತ್ಯಂತ ನಮಿಸಿ
ಕುದುರೆಹತ್ತಿದ ರಾಮೇಶನ ಬಲಗೊಂಬೆ ೫

## ೧೪೧

ಕೇಶವ ನಾರಾಯಣ ಶ್ರೀಶ ಮಾಧವ
ಸರ್ವೇಶ ಗೋವಿಂದಗೆಲಿಸೆಂದು ಕೋಲ
ಸರ್ವೇಶ ಗೋವಿಂದಗೆಲಿಸೆಂದು ವಿಷ್ಣುವಿನ
ಸೋಸಿಲೆ ಮೊದಲೆ ಬಲಗೊಂಬೆ ಕೋಲ ೧

ಮಧುಸೂದನ ತ್ರಿವಿಕ್ರಮ ವಿಧಿಪಿತ ವಾಮನ
ಸುದತೆ ಶ್ರೀಧರ ಋಷಿಕೇಶ ಕೋಲ
ಸುದತೆ ಶ್ರೀಧರ ಋಷಿಕೇಶನ ನೆನೆದರೆ
ಹದಕಾನೆ ವರವ ಕೊಡುವೊನು ಕೋಲ ೨

ಪದ್ಮನಾಭ ದಾಮೋದರ ಮುದ್ದು ಸಂಕರ್ಷಣ
ವಸುದೇವ ನಮ್ಮ ಗೆಲಿಸೆಂದು ಕೋಲ
ವಸುದೇವನಮ್ಮ ಗೆಲಿಸೆಂದು ಪ್ರದ್ಯುಮ್ನ
ಅನಿರುದ್ಧರ ಮೊದಲೆ ಬಲಗೊಂಬೆ ಕೋಲ ೩

ಪುರುಷೋತ್ತಮ ಅಧೋಕ್ಷಜ ಹರುಷಾಗೊ ನಾರಸಿಂಹ
ಪುರುಷ ಸೂಕ್ತದಲೆ ಪ್ರತಿಪಾದ್ಯ ಕೋಲ
ಪುರುಷಸೂಕ್ತದಲೆ ಅಚ್ಯುತ
ಹರುಷದಿ ನಮ್ಮ ಗೆಲಿಸೆಂದು ಕೋಲ ೪

ಜನಾರ್ದನ ಉಪೇಂದ್ರ ಘನಮಹಿಮ ಹರೆ ಕೃಷ್ಣ
ಮುನಿಜನ ವಂದ್ಯ ರಮಿ ಅರಸು ಕೋಲ

ಮುನಿಜನ ವಂದ್ಯರಮಿಯರಸು
ನಿನ್ನ ಪಾದ ನೆನದೆವ ಪಂಥಗೆಲಿಸೆಂದು ೫

## ೧೪೨

ನಿನ್ನನೆ ನಮೊ ಎಂಬೆವ ಇಂದಿರಾ ದೇವಿ
ನಿನ್ನನೆ ನಮೊ ಎಂಬೆವ ಬಿನ್ನಹ ಲಾಲಿಸು
ಪನ್ನಗ ಶಯನನ ಘನ್ನ ಪಟ್ಟದ ರಾಣಿ ಪ.

ಬಾಲೆ ಇಂದಿರೆ ನಿನ್ನ ಕಾಲಿಗೆ ವಂದಿಸಿ
ಜಾಲಗಾರುತಿಯರ ಸೋಲಿಸಬೇಕೆಂದು ೧

ಗುಜ್ಜಿ ಇಂದಿರೆ ನಿನ್ನ ಹೆಜ್ಜೆ ಹೆಜ್ಜೆಗೆ ನಮಿಸಿ
ಅರ್ಜುನನ ಮಡದಿಯರ ಲಜ್ಜೆಗ್ಹೈಸೆವೆಂದು ೨

ನಿತ್ಯ ಮುಕ್ತಳೆ, ನಿನ್ನ ಅತ್ಯಂತ ಬಲಗೊಂಬೆ
ಉನ್ಮತ್ತೆಯರ ಗರವು ಒತ್ತಿಬಂದೆವೆಂದು ೩

ವ್ಯಾಲಾಶಯನನ ರಾಣಿ ಬಹಳೆವಂದಿಸಿ
ಗೈಯ್ಯಾಳಿಯರ ಮುಯ್ಯಾ ನಿವಾಳಿಸಬೇಕೆಂದು ೪

ಪ್ರಾಣೇಶ ನರಸಿಯ ಕಾಣುತ ವಂದಿಸಿ
ಜಾಣೆಯರ ಮನೆಗ್ಹೋಗಿ ಆಣಿ ಬಿಡಿಸೇವೆಂದು ೫

ಜರದ ಕುಪ್ಪುಸಸೀರೆ ಸರಿಗೆ ದೋರೆಯನಿಟ್ಟು
ಕರಗಳ ಮುಗಿದೆವ ವರಗಳ ಪಾಲಿಸು ೬

ಥೋರ ಮುತ್ತಿನ ದಿವ್ಯಹಾರ ಭಾರವನಿಟ್ಟು
ನಾರಿಯರ ಗೆಲಿಸುವ ಭಾರವ ರಾಮೇಶಗೆ ವಹಿಸೆಂದು ೭

## ೧೪೩

ಬೊಮ್ಮಗೆ ಶರಣೆಂಬೆವಮ್ಮ ನಮ್ಮ ಗುರು ಎಂದು
ಹಮ್ಮಿನ ಸುಭದ್ರಾ ದೇವಿಗೆ ದಮ್ಮಯ್ಯ ಎನಲೆಂದು ಪ.

ವಾಚಾಭಿಮಾನಿ ನಿಜ ಬುದ್ಧಿ ಸೂಚಿಸು ನಮಗೆಂದು
ನಾಚಿಸಿ ದ್ರೌಪತಿಯ ಆಣೆ ಅಚೆ–ಲಿಟ್ಟೆವೆಂದು ೧

ಮಂದ ಜಾಸನ ಜಗಕೆ ನೀವು ತಂದೆ ಹೌದೆಂದು
ನಿಂದಿಸಿ ಸುಭದ್ರೆ ಪಂಥ ಹಿಂದಕ್ಕೆ ಹಾಕೆವೆಂದು ೨

ಸರಸಿಜಾಸನ ರಾಮೇಶನ ಅರಸಿಯರ ಗೆಲಿಸೆಂದು
ಸರಸದಿ ಸುಭದ್ರಾ ಪಂಥ ಬಿರುಸು ಮಾಡೆವೆಂದು ೩

## ೧೪೪

ಹನುಮನ ಬಲಗೊಂಬೆ ಹರುಷದಲೆ
ನಮ್ಮ ತನುಮನ ಧನ ಈತಗೊಪ್ಪಿಸುತಲೆ ಪ.

ರಾಣಿಗೆ ಮುದ್ರೆಯನಿಟ್ಟ ಜಾಣನೆನುತಲೆ
ಮುಖ್ಯ ಪ್ರಾಣ ಮುಯ್ಯಾ ಗೆಲೆಸೋ ಈ ಕ್ಷಣ ಎನುತಲೆ ೧

ಕೋತಿಯ ಸ್ವರೂಪನಾದ ಈತನೆನುತಲೆ
ದೈತ್ಯ ಜಾತಿಯ ಸಂಹರಿಸಿ ಬಂದ ಖ್ಯಾತನೆನುತಲೆ ೨

ಸೀತೆಯ ಮನೆಗೆ ತಂದ ಮಹಾತ್ಮನೆನುತಲೆ
ಈತಗೆ ಜೋಡ್ಯಾರು ಮುಂದೆ ಖ್ಯಾತನೆನುತಲೆ ೩

ಕೃಷ್ಣನ ಸೇವೆಗೆ ಅತಿ ನಿಷ್ಠ ನೆನುತಲೆ
ದುಷ್ಟ ಕೌರವರ ಕೊಂದ ಶ್ರೇಷ್ಠ ನೆನುತಲೆ ೪

ಶ್ರೀಶ ರಾಮೇಶಗೆ ಮುಖ್ಯದಾಸನೆನುತಲೆ
ವಾಸವಾದ ಬದರಿಯಲಿ ಮಧ್ವೇಶನೆನುತಲೆ ೫

## ೧೪೫

ಭಾರತಿದೇವಿ ಭಕ್ತರತಾಯಿ
ಭಾರತಿ ದೇವಿ ನಿಮ್ಮ ಆರಾಧಿಸುವೆವಮ್ಮ
ನಾರಿಯರ ಸೋಲಿಸಮ್ಮ
ಮಾರಿ ಮೇಲಾಗಿಸಮ್ಮ ಪ.

ಮದನನತ್ತಿಗೆ ರಂಭೆ ಮೊದಲಿಗೆ ಬಲಗೊಂಬೆ
ಮುದದಿಂದ ಗೆಲಿಸೆಂಬೆ ಸುದತೆ ಪುತ್ಥಳಿಗೊಂಬೆ ೧

ನೀನೆ ಮುಂದಣ ವಾಣಿ ಪ್ರಾಣದೇವರ ರಾಣಿ
ಪ್ರವೀಣೆ ಸುಪ್ಪಾಣಿ ಕಲ್ಯಾಣಿ ನಿನ್ನನುಗಾಣೆ ೨

ಪ್ರದ್ಯುಮ್ನನ ಮಗಳೆ ರುದ್ರಾದಿವಂದ್ಯಳೆ
ಮುದ್ದು ರಾಮೇಶನ ಪ್ರವಾಳೆ ಶುದ್ಧಪಾತ್ರಳೆ ಕೇಳೆ ೩

## ೧೪೬

ನಲ್ಲೆಯರು ನಮೋ ಎಂಬೆವು ಸುರರ
ಎಲ್ಲರ ಬಲಗೊಂಬೆವು ಪ.

ಚಲ್ವೆ ಕಂಗಳೆಯರಿಗೆ ಹೊಲ್ಲವು ಎನುತಿರೆ
ಹೊಲ್ಲ ತನವೆಲ್ಲ ಹೊರಗ್ಹಾಕಿ ಬಾಹೊ ಅ.ಪ.

ಜಗದುದರನ ನಾವು ಹೆಗಲಲ್ಲಿ ಧರಿಸುತ
ಅಗಣಿತ ಮಹಿಮ ಹೌದೆಂದು
ಅಗಣಿತ ಮಹಿಮಎನುತಿರೆ
ಮಗನ ಮುಂದಾಗಿ ಬಲಗೊಂಬೆ ೧

ಸಾಗರಶಯನಗೆ ಆಗುವ ಹಾಸಿಗೆ
ಬ್ಯಾಗನೆ ವರವ ಕೊಡುವ್ವೋನು
ಬ್ಯಾಗನೆ ವರವ ಕೊಡುವ ನಾಗೇಂದ್ರ
ನಮೋ ಎಂಬೆ ನಮ್ಮ ಗೆಲಿಸೆಂದು ೨

ನಂದಿವಾಹನ ಶಿವನ ಮುಂದಾಗಿ ಬಲಗೊಂಬೆ
ಇಂದಿಗೆ ಪಂಥಗೆಲಿಸೆಂದು
ಇಂದಿಗೆ ಪಂಥಗೆಲಿಸೆಂದು ಬ್ರಹ್ಮನ
ಕಂದನ ಮೊದಲೆ ಬಲಗೊಂಬೆ ೩

ಸೌಪರ್ಣವಾರುಣಿ ಅಪರ್ಣ ದೇವಿಯರು
ಸೌಕರ್ಯದಿಂದ ನಮ್ಮ ಪಂಥ
ಸೌಕರ್ಯದಿಂದ ನಮ್ಮ ಪಂಥಗೆಲಿಸೆಂದು
ಕರವ ಮುಗಿವೆವು ಕ್ಷಣಕ್ಕೊಮ್ಮೆ ೪

ಇಂದ್ರ ಕುಮಾರನ ನಾವು ಮುಂದಾಗಿ ಬಲಗೊಂಡು
ಇಂದು ರಾಮೇಶನನುಗಾಲ
ಇಂದು ರಾಮೇಶನನುಗಾಲ ನೆನೆಯುತ
ಮುಂದಕ್ಕೆ ಹೆಜ್ಜೆನಿಡುವ್ವೋಣ ೫

## ೧೪೭

ಭಾಗೀರಥಿ ಭಾಗೀರಥಿ
ಬಾಗುವವರಿಗೆ ದಯವಾಗಿರತಿ ಪ.

ಗಂಗೆ ಗೌತುಮೆ ತುಂಗೆ ಮಂಗಳೆ ಕೃಷ್ಣಿ ನಿನ್ನ
ಹಿಂಗದೆ ಅವರನ ರಂಗಿಸುವರೆ ತಾಯಿ ೧

ಮಾನಸ ಸರೋವರನಾನಾ ತೀರ್ಥಗಳೆಲ್ಲ
ಧೇನಿಸಿ ನಿನ್ನಯ ಮಾನ್ಯವ ಪಡೆದಿವೆ ೨

ಬ್ರಮ್ಹಾಂಡ ಬಿಚ್ಚಿ ಪರಬೊಮ್ಮಗ ಮಗಳಾದಿ
ಬೊಮ್ಮನ ತಂಗಿ ನಾವು ನಿನ್ನನು ನೆನೆದೆವು ೩

ಸತ್ಯ ಲೋಕವ ಸ್ಮರಿಸಿ ಮತ್ತೆ ಸ್ವರ್ಗಕೆ ಬಂದಿ
ಪ್ರಾರ್ಥಿಸಿದ ದೈವ ನಿನ್ನ ಅರ್ಥಿಲೆ ಗೆಲಿಸಮ್ಮ ೪

ಭಗೀರಥ ಕರೆಯಲು ನಗದಲ್ಲಿ ಬಿದ್ದು ಕಾಶಿ
ನಗರಕ್ಕೆ ಬಂದ ರಮಿ ಮಗಳ ಬಲಗೊಂಬೆ ೫

## ೧೪೮

ಬಾ ವೆಂಕಟರಮಣ ಭಾಗ್ಯದ ನಿಧಿಯೆ
ಸುರರಿಗೆ ನಿತ್ಯ ಸುಧೆಯೆ ಪ.

ಕೇಶವ ನಾರಾಯಣ ಲೇಸು ಕೊಡು ಮಾಧವ
ಎಲ್ಲ ಕಂಟಕವ ಪರಿಹರಿಸೊ
ಎಲ್ಲ ಕಂಟಕವ ಪರಿಹರಿಸೊ ಗೋವಿಂದ
ಈ ಸಮಯದಿ ಗೆಲಿಸೆಂದು ೧

ವಿಷ್ಣು ಮದುಸೂದನ ಶ್ರೇಷ್ಠತ್ರಿವಿಕ್ರಮ
ತುಷ್ಟವಾಮನ ಗೆಲಿಸೆಂದು
ತುಷ್ಟವಾಮನ ಗೆಲಿಸೆಂದು ಕಾಲಕಾಲಕೆ
ಎಲ್ಲರೂ ಕರವ ಮುಗಿವೆವು ೨

ಶ್ರೀಧರ ಹೃಷಿಕೇಶ ಸಾಧು ಪದ್ಮನಾಭ
ಮುದದಿ ಎನಗೆ ವರಗಳ
ಮುದದಿ ಎನಗೆ ವರಗಳ ಕೊಡುವಂಥ
ದಾಮೋದರಗೆ ಕರವ ಮುಗಿವೆವು ೩

ಸಂಕರ್ಷಣ ವಾಸುದೇವ ಪಂಕಜಾಕ್ಷ ಪ್ರದ್ಯುಮ್ನ
ಶಂಕಿಸದೆ ನಮಗೆ ವರಗಳ
ಶಂಕಿಸದೆ ನಮಗೆ ವರಗಳ ಕೊಡುವಂಥ
ಕುಂಕುಮಾಂಕಿತ ಘನ ಮಹಿಮನೆ ೪

ಅನಿರುದ್ಧ ಪುರುಷೋತ್ತಮ ಹರುಷಾಗೊ ನಾರಸಿಂಹ
ಪುರುಷಸೂಕ್ತದಿ ಪ್ರತಿಪಾದ್ಯ
ಪುರುಷಸೂಕ್ತದಿ ಪ್ರತಿಪಾದ್ಯ ಅಚ್ಯುತ
ಹರುಷದಿ ನಮ್ಮ ಗೆಲಿಸೆಂದು ೫

ಜನಾರ್ದನ ಉಪೇಂದ್ರ ಜಾಹ್ನವಿ ಜನಕನೆ
ಜನನ ರಹಿತನೆ ಹರೇಕೃಷ್ಣ
ಜನನ ರಹಿತನೆ ಹರೇಕೃಷ್ಣ ವೇದವ್ಯಾಸ
ವನಜನಾಭನ ಮೊದಲ ಬಲಗೊಂಬೆ ೬

ಮಚ್ಛ ಕೂರ್ಮ ವರಾಹ ಸ್ವಚ್ಛಾಗೊ ನಾರಸಿಂಹ
ಅಚ್ಚ ಸುಶೀಲ ಬಲಿರಾಯ
ಅಚ್ಚ ಸುಶೀಲ ಬಲಿಗೊಲಿದಂಥ
ಮಚ್ಛನೇತ್ರಿಯರ ಬಲಗೊಂಬೆ ೭

ಭಾರ್ಗವಿ ರಘುವೀರ ಶೀಘ್ರದಿಗೆಲಿಸೆಂದು
ರುಕ್ಮಿಣಿ ಪತಿಗೆನಮೋಯೆಂಬೆ
ರುಕ್ಮಿಣಿ ಪತಿಗೆನಮೋಯೆಂಬೆ ಬೌದ್ಧಕಲ್ಕಿ
ಕುಗ್ಗದೆ ನಮಗೆ ವರಗಳ ೮

ಸೃಷ್ಟಿ ಸ್ಥಿತಿಲಯ ಲವಕೆ ಕಾರಣವಾದ
ಜಗತ್ಪತಿ ಜಾಹ್ನವಿ ಜನಕನೆ
ಜಗತ್ಪತಿ ಜಾಹ್ನವಿ ಜನಕನೆ ರಾಮೇಶನ
ನಗಧರನ ಮೊದಲ ಬಲಗೊಂಬೆ ೯

## ೧೪೯

ನವಖಂಡದ ಸ್ವಾಮಿ ಒಂದು ನಮ್ಮಗೆಲಿಸಲಿ
ಶುಕಬುದ್ಧಿ ಬಾಲೆಯರ ಕುಂದುಗೈಸಲಿ ಪ.

ಚನ್ನನಚಾರಿವಾಸ ಮನ್ನಾರಿ ಕೃಷ್ಣನ ಸಹ
ಮುನ್ನ ಪ್ರಯಾಗಿ ಮಾಧವನ ಬಲಗೊಂಬೆವು ೧

ಇಳಾ ವರ್ತಾ ಭದ್ರಶಾಮ ಈತನ ಬಲಗೊಂಬೆವು
ನಾವು ಈತನ ಬಲಗೊಂಬೆವು ಅವರು ನಮ್ಮ
ಪಂಥ ಗೆಲಿಸೆಂಬೆವು ೨

ಹರಿ ವರುಷ ಕಿಂಪುರುಷ ಭರತ ಖಂಡದಲ್ಲಿದ್ದ
ಭರತ ಖಂಡದಲ್ಲಿದ್ದ ನರಹರಿಯ ಬಲಗೊಂಬೆ
ಪಂಥಗೆಲಿಸುವ ಶುದ್ಧ ೩

ಕೇತು ಮೂಲ ಖಂಡದ ಹರಿಯ ಪ್ರೀತಿಲೆ ಬಲಗೊಂಬೆವು
ಮಾತು ಸೋಲಿಸಿ ಅವರ ನಮ್ಮ ಮಾತುಗಲಿಸೆಂಬೆವು ೪

ರಮ್ಯಕ್ಕೆ ಹಿರಣ್ಮಯ ಈ ಕುರುಖಂಡವೆಂಬೊ
ಕುರುಖಂಡದಲಿ ರಮಿಸಿ ಅಲ್ಲಿರುವ ರಾಮೇಶನ ಬಲಗೊಂಬೆವು ೫

## ೧೫೦

ಇವರಲ್ಲೆ ನೀತಿ ರಾಮದೇವರ ಪ್ರೀತಿ
ವಿದ್ಯಾಧಿಕರ ಮೂರ್ತಿ ಸತ್ಯ ಸಂಧರ ಕೀರ್ತಿ
ಜಗದಲ್ಲಿ ಉದ್ಧರರ ಪ.

ಮಧ್ವರಾಯರು ಪದ್ಮನಾಭ ನರಹರಿ ತೀರ್ಥ
ಶುದ್ಧ ಮಾಧವ ಅಕ್ಷೋಭ್ಯರ ರನ್ನದ

ಶುದ್ಧ ಮಾಧವ ಅಕ್ಷೋಭ್ಯರ ಚರಣವ
ವಿದ್ಯುಕ್ತದಿಂದ ಬಲಗೊಂಬೆ ರನ್ನದ ೧

ಪ್ರಸಿದ್ಧ ಜಯತೀರ್ಥ ವಿದ್ಯಾಧಿವಾದಿ ಕವೀಂದ್ರ
ವಾಗೀಶ ರಾಮಚಂದ್ರ ರನ್ನದ
ವಾಗೀಶ ರಾಮಚಂದ್ರ ವಿದ್ಯಾನಿಧಿಗಳ ಪಾದ ಪದ್ಮವ
ಮೊದಲೆ ಬಲಗೊಂಬೆ ರನ್ನದ ೨

ರಘುನಾಥ ರಘುವರ್ಯ ರಘೋತ್ತಮ ತೀರ್ಥರ
ವೇದವ್ಯಾಸ ವಿದ್ಯಾಧೀಶರೆ ರನ್ನದ
ವೇದವ್ಯಾಸ ವಿದ್ಯಾಧೀಶರ ಚರಣವ
ಜಗದ ಗುರುಗಳನು ಬಲಗೊಂಬೆ ೩

ಉತ್ತಮ ವೇದನಿಧಿ ಸತ್ಯವ್ರತ ತೀರ್ಥರ
ಸತ್ಯನಿಧಿ ಸತ್ಯನಾಥರ ರನ್ನದ
ಸತ್ಯನಾಥರ ಚರಣವ
ಭಕ್ತಿಂದ ಮೊದಲ ಬಲಗೊಂಬೆ ೪

ಸತ್ಯಾಭಿನವ ತೀರ್ಥ ಸತ್ಯಪೂರ್ಣ ತೀರ್ಥರ
ಸತ್ಯವಿಜಯ ಸತ್ಯಪ್ರಿಯರ ರನ್ನದ
ಸತ್ಯಪ್ರಿಯರ ಚರಣವ
ಅತ್ಯಂತವಾಗಿ ಬಲಗೊಂಬೆ ೫

ಸತ್ಯಬೋಧ ಸತ್ಯಸಂಧ ಸತ್ಯವರ
ಚಿತ್ತಶುದ್ಧಿಯಲೆ ಬಲಗೊಂಬೆ
ಚಿತ್ತಶುದ್ಧಿಯಲೆ ಸಭೆಯೊಳು
ಸತ್ಯವಾಕ್ಯಗಳ ನುಡಿಸಲು ರನ್ನದ ೬

ಸತ್ಯವರ್ಯರೆಂಬ ಉತ್ತಮ ಗುರುಗಳ
ಹಸ್ತಕಮಲದಲೆ ನಮಿಸುವೆ ರನ್ನದ

ಹಸ್ತಕಮಲದಲೆ ನಮಿಸುವೆ ಜಗದೊಳು
ಮೆರೆವ ಸತ್ಯಧರ್ಮರನು ಬಲಗೊಂಬೆ ೭

ಮಧ್ವರಾಯರ ಪಾದ ಪೊಂದಿದ್ದ ಗುರುಗಳು
ವಿದ್ಯುಕ್ತದಿಂದ ಬಲಗೊಂಬೆ ರನ್ನದ
ವಿದ್ಯುಕ್ತದಿಂದ ಬಲಗೊಂಬೆ ಅತ್ತಿಗೆಯರ
ಗೆದ್ದು ದುಂಧುಭಿಯ ಹೊಯಿಸೇವ ರನ್ನದ ೮

ಯತಿ ಮುನಿರಾಯರು ಅತಿ ಭಕ್ತರಾಗಿದ್ದ
ಅತಿಪ್ರಿಯರಾದ ಗುರುಗಳು
ಅತಿ ಪ್ರಿಯರಾದ ರಾಮೇಶನ
ಅತಿ ಭಕ್ತರ ಮೊದಲ ಬಲಗೊಂಬೆ ರನ್ನದ ೯

## ೧೫೧

ಯಾದವೇಂದ್ರ ಪರಿಮೋದವ ಸೂಸುತ
ಹಾದಿಯ ಹಿಡಿದಾನು ತಾಗುಣ ಸಾಂದ್ರ ಯಾದವೇಂದ್ರ ಪ.

ಛತ್ರ ಚಾಮರದವರು ಜತ್ತಾಗಿ ನಡೆದರು
ಚಿತ್ತಜನ್ಯೆಯನ ಹತ್ತಿರ ಕೆಲರು ೧

ಆನೆ ಅಂಬಾರಿಯವರು ಶ್ರೀನಿವಾಸನ ಮುಂದೆ
ನಾನಾ ಭೂಷಿತರಾಗಿ ಮಾನದಿ ತೆರಳಿ ೨

ರಾಜಪುತ್ರರು ದಿವ್ಯ ವಾಜಿಗಳೇರುತ
ಬಾಜಾರದೊಳು ವಿರಾಜಿಸಿ ನಡಿಯೆ ೩

ಮಂದಗಮನೆಯರ ರಥ ಮುಂದಾಗಿ ನಡೆದವು
ಇಂದಿರೆ ಅರಸನ ಸಂದಣಿ ನೋಡ ೪

ಎಲ್ಲೆಲ್ಲಿ ನೋಡಿದರೆ ಪಲ್ಲಕ್ಕಿ ಸಾಲಾಗಿ
ಫುಲ್ಲನಾಭನ ಮುಂದೆ ನಿಲ್ಲಿಸಿ ನಡಿಯೆ ೫

ನೋಡ ಬಂದವರೆಲ್ಲ ಗಾಡಿ ವಯಲುಗಳೇರಿ
ರೂಢಿಗೊಡೆಯನ ಮುಂದೆ ಓಡಿಸಿ ನಡಿಯೆ ೬

ತಂದೆ ರಾಮೇಶನು ಬಂದ ಬೀದಿಯ ಸೊಬಗು
ಇಂದಿರೆವಶವಲ್ಲ ಚಂದಾಗಿ ರಚಿಸೆ ೭

## ೧೫೨

ಏನು ಬೇಕಾದದ್ದು ಬೇಡ ಮಾನಿನಿ ಕಾಂತೆ
ಶ್ರೀನಿವಾಸ ನಡೆದ ಕಾಮಧೇನುವಿನಂತೆ ಪ.

ಲಕ್ಷುಮಿ ರಮಣ ನಮಗೆ ಕಲ್ಪವೃಕ್ಷತಾನಂತೆ
ಅಕ್ಷಯ ಸುಖವಿತ್ತು ಭಕ್ತರ ರಕ್ಷಿಪೋನಂತೆ ೧

ಕಾಂತೆ ಕೃಷ್ಣರಾಯ ನಮಗೆ ಚಿಂತಾಮಣಿಯಂತೆ
ಅನಂತ ಸುಖವ ವಿತ್ತು ಭಕ್ತರ ಸಂತೈಸುವನಂತೆ ೨

ಇಂದು ಸಂಚಿತಾಗಾಮಿಯು ಹಿಂದಾದುವಂತೆ
ತಂದೆ ರಾಮೇಶನ ಪಾದಕೆ ಹೊಂದಿವೆಯಂತೆ ೩

## ೧೫೩

ಬಾಗುವ ತೆಂಗಿನ ಮರನೋಡ
ರಂಗನ ಅಂಘ್ರಿಗೆರಗುವಂತೆ ಸಖಿಯೆ ಪ.

ಶೃಂಗಾರದ ವನ ನೋಡ ಪಂಚರಂಗದ ಗಿಳಿ ನೋಡ
ಮಂಗಳ ಸ್ವರ ನೋಡ ಕೋಕಿಲ ರಂಗನ ಪಾಡುತಲಿವೆ ೧

ಜಾತಿ ಹಂಸನೋಡ ವನದೊಳು
ಮಾತಿನ ಗಿಳಿ ನೋಡ ಸಖಿಯೆ
ನೂತನ ಮೃಗ ನೋಡ ಕಸ್ತೂರಿ ಹರಿಪಾದಕೆ
ಆತುರದಿ ಬರುತಲಿವೆ ೨

ನೆಲ್ಲಿ ನೇರಲೆ ನೋಡ ಪುಷ್ಪ ಚೆಲ್ಲಿ ನಲಿಯುತಲಿವೆ
ಮಲ್ಲ ಮಲ್ಲಿಗೆ ನೋಡ ಹರಿಪಾದ ಪಲ್ಲವಕೆ ಎರಗುತಿವೆ ೩

ಚಾರು ಕೋನವ ನೋಡ ಕಮಲವು ತೂರಿ ಬರುತಲಿವೆ
ಸಾರ ಪಕ್ಷಿಗಳ ನೋಡ ಹರಿಗುಣ ಸಾರುತ ನಲಿಯುತಿವೆ ೪

ನಾಗ ಪುನ್ನಾಗ ನೋಡ ಸಂಪಿಗೆ ಪರಿಮಳ ನೋಡ
ಹಾಂಗೆ ಕ್ಯಾದಿಗೆ ನೋಡ ಹರಿಪಾದ ಕ್ಹೋಗಿ ಎರಗುತಿವೆ ೫

ಜಾಜಿ ಕುಸುಮ ನೋಡ ತುಳಸಿ ವಿರಾಜಿಸುವವನ ನೋಡ
ಸಹಜದವನವ ನೋಡ ರಂಗನ ಪೂಜೆಗೆ ಒದಗುವಂತೆ ೬

ಮಂದ ಮಾರುತ ನೋಡ ಪರಿಮಳ ತಂದು ಬೀಸುತಲಿದೆ
ಸುಂದರ ಲತೆ ನೋಡ ರಂಗಗೆ ಫಲ ತಂದು ಅರ್ಪಿಸುವಂತೆ ೭

ಓಕುಳಿ ಕುಣಿನೋಡ ನಿಲ್ಲಿಸಿದ ಜೀಕಳಿ ಗೊಂಬೆಗಳ
ಲೋಕ ನಾಯಕ ಹರಿಗೆ ಚಿಮ್ಮುತ ಹಾಕುವ ಪರಿಯಂತೆ ೮

ಸಾಲು ಮರಗಳ ನೋಡ ರಂಗಗೆ ಫಲ ಮೇಲಾಡಿ ಮೆಲಿಸುವಂತೆ
ಲಾಲಿಮಣಿಯ ನೋಡ ರಾಮೇಶನ ವಾಲೈಸಿ ಕರೆಯುತಿವೆ ೯

# ೧೫೪

ಚಿತ್ತಜನ್ಯೆಯನ ಕೂಡ ಅರ್ಥಿಲೆ ಹೋಗುವಾಗ
ಹಸ್ತಿನಾವತಿಯ ಕಂಡರು ಜತ್ತಾಗಿ ಜನರು ಪ.

ನದ ನದಿಗಳ ದಾಟಿ ಮುದದಿಂದ ಮುಯ್ಯಕ್ಕೆ ಬರಲು
ಅದ್ಭುತವಾಗಿ ಬೆಳಗೋದೆ
ಅದ್ಭುತವಾಗಿ ಬೆಳಗೋದೆ ನಗರಿಯು
ಇದೇ ವೈಕುಂಠ ಹೌದೇನ ೧

ಸಾಲು ವನಗಳ ನೋಡ ಸರಳ ಕಾವಲಿ ನೋಡ
ತರಣಿ ಸರೋವರ ಇವ ನೋಡ
ತರಣಿ ಸರೋವರ ಇವ ನೋಡ
ಗಗನಕ್ಕೆ ಸರಳಾಗಿ ಬೆಳೆದ ಮರನೋಡ ೨

ಆಲ ಅಶ್ವತ್ಥ ಶಾಲ ಶಾಬರ
ವೃಕ್ಷ ಸಾಲು ಮಂಟಪ ನೋಡ
ಸಾಲು ಮಂಟಪ ಇವ ನೋಡ
ದೇವಾಲಯವು ವಿಶಾಲವಾಗಿದ್ದ ಬಗಿ ನೋಡ ೩

ಪ್ಯಾಟಿ ಬಾಜಾರ ಸಾಲು ಥಾಟಾಗಿ ತೋರುವುದೆ
ಕೋಟಿ ಸೂರ್ಯರ ಬೆಳಕಿಲೆ
ಕೋಟಿ ಸೂರ್ಯರ ಬೆಳಕಿಲೆ ಒಪ್ಪೊ ನಗರಿಯ
ಮಾಟ ವರ್ಣಿಸಲು ವಶವಲ್ಲ ೪

ಹತ್ತಿ ಗೋಪುರ ಕೋಟಿ ಹಚ್ಚಿದೆ ಧ್ವಜ ಕೋಟಿ
ಮತ್ತ ಪತಾಕೆಗೆ ಮಿತಿ ಇಲ್ಲ
ಮತ್ತ ಪತಾಕೆಗೆ ಮಿತಿಯಿಲ್ಲ ಹರಿಣಾಕ್ಷಿ
ಸತ್ಯ ಲೋಕವು ಹೌದೇನ ೫

ಅಟ್ಟಾಲದ ಮ್ಯಾಲೆ ಧಿಟ್ಟಾದ ಗೊಂಬೆಗಳು
ಕೃಷ್ಣಗೆ ಕೈಯ್ಯ ಮುಗಿವಂತೆ
ಕೃಷ್ಣಗೆ ಕೈಯ್ಯ ಮುಗಿವಂತೆ ನಿಲ್ಲಿಸಿದ್ದು
ಎಷ್ಟು ವರ್ಣಿಸಲು ವಶವಲ್ಲ ೬

ಜತ್ತಾದ ಮನೆಗಳಿಗೆ ರತ್ನದ ಶೋಭೆ ನೋಡ
ಹತ್ತು ದಿಕ್ಕುಗಳ ಬೆಳಗೋವೆ
ಹತ್ತು ದಿಕ್ಕುಗಳ ಬೆಳಗೋವೆ ಸ್ವರ್ಗವ
ಎತ್ತಿಟ್ಟರೇನ ಐವರು ೭

ಚಂದದ ಮನೆಗಳಿಗೆ ಮುತ್ತಿನ ಹಂದರ ತೋರಣಗಳೆಷ್ಟು
ಶ್ರೀ ಗಂಧದ ಥಳಿಯ ಸೊಬಗೆಷ್ಟು
ಶ್ರೀ ಗಂಧದ ಥಳಿಯ ಸೊಬಗೆಷ್ಟ ರಂಗವಾಲಿ
ಅಂದವಾಗಿದ್ದ ಜಗುಲಿ ಎಷ್ಟ ೮

ತಾರಕ್ಕಿ ಹೊಳವಂತೆ ತೋರೋದೀವಿಗೆ ಎಷ್ಟ
ನೀರೆ ನಿಲಿಸಿದ್ದ ಕನ್ನಡಿ ಎಷ್ಟ
ನೀರೆ ನಿಲಿಸಿದ್ದ ಕನ್ನಡಿ ಎಷ್ಟ ಉಪ್ಪರಿಗಿ
ಏರಿ ನೋಡುವ ಜನರೆಷ್ಟ ೯

ಶ್ರೀಶನ ಮುಖವನೆ ಸೋಸಿಲೆ ನೋಡುತ
ಈಜಾಡಿ ಸುಖದ ನದಿಯೊಳು
ಈಜಾಡಿ ಸುಖದ ನದಿಯೊಳು
ಬಹುಜನ್ಮಕ ಲೇಸಾದ ಪುಣ್ಯ ಫಲಿಸಿತು ೧೦

ಮೇಲಾದ ಮನೆಗಳ ಮ್ಯಾಲೆ ಸಾಲು ಗೊಂಬಿಗಳ ನೋಡ
ಶ್ರೀಲೋಲ ರಾಮೇಶಗೆ ಕೈ ಮುಗಿವಂತೆ
ಶ್ರೀಲೋಲ ರಾಮೇಶಗೆ ಕೈ ಮುಗಿದು
ಹರಿಣಾಕ್ಷಿ ಕಾಲಿಗೆ ಎರಗುವ ಪರಿಯಂತೆ ೧೧

## ೧೫೫

ಆರು ಬಂದರು ಸಖಿ ತೇರಿನ ಬೀದಿಲೆ
ಮಾರಜನಕನ ಸಾರುತ ಹೊಗಳುವರಾರೆ
ಕರಿಪುರದಲಿ ಬಂದವರಾರೆ ಪ.

ದುಷ್ಟ ದೈತ್ಯರ ಶಿರವ ಕುಟ್ಟಿ ತಮಸ್ಸಿಗೆ ಹಾಕಿ
ಅಟ್ಟಹಾಸದಿಂದ ಭೇರಿ ಘಟ್ಯಾಗಿ ಹೊಯಿಸುವರಾರೆ ೧

ಕ್ರೂರ ದೈತ್ಯರ ಶಿರವ ಸೇರಿಸಿ ತಮಸ್ಸಿಗೆ
ಘೋರೆಂಬೊ ತುತ್ತೂರಿ ಕಾಳಿ ಹಿಡಿಸುವರಾರೆ ೨

ವೆಂಕಟನ ದ್ವೇಷಿಗೆ ಸಂಕಟ ಬಿಡದೆಂದು
ಡಂಕರದಿಂದಲೆ ಡಂಕಿಯ ಹೊಯಿಸುವರಾರೆ ೩

ಖೂಳ ದೈತ್ಯರ ಶಿರವ ಸೀಳಿ ತಮಸಿಗೆ ಹಾಕಿ
ಭಾಳಾ ರೌಸದಿಂದ ಕಾಳಿಯ ಹಿಡಿಸುವರಾರೆ ೪

ಭಾಗವತರ ಸುಖ ಹೀಗೆ ಉನ್ನತ ಎಂದು
ಈಗ ತೋರುತ ಭರದಿ ನಾಗಸ್ವರ ಹಿಡಿಸುವರಾರೆ ೫

ಅಂಬುಜನಾಭನ ನಂಬಲು ಸುಖವಿತ್ತು ಬಂಬಂಬೆನುತ
ಶಂಖವ ಸಂಭ್ರಮದಿ ಹಿಡಿಸುವರಾರೆ ೬

ಕೌಂಸಾರಿ ನಿರ್ಜರ ಹಂಸನೀ ಹೌದೆಂದು
ಸಂಶಯ ಬಿಡಿಸುತ ಕಂಸಾಳೆ ಹೊಯ್ಸುವರಾರೆ ೭

ಎಷ್ಟೆಷ್ಟು ಕಾಲಕ್ಕೂ ಕೃಷ್ಣಗೆ ದೊರೆ ಎಂದು
ಶ್ರೇಷ್ಠಾದ ಜಾಂಗುಟಿ ಘಟ್ಯಾಗಿ ಹೊಯಿಸುವರಾರೆ ೮

ಕಬ್ಬು ಬಿಲ್ಲಿನಯ ಒಬ್ಬ ಜಗದೀಶನೆಂದು
ಅಬ್ಬರದಿ ಕರಣೆ ನಿರ್ಭಯದಿ ಹಿಡಿಸುವರಾರೆ ೯

ಮಿತಿಯಿಲ್ಲದೆ ಶೃತಿ ಸಾರುವ ಮಧ್ವ
ಮತವೆ ಅಧಿಕವೆಂದು ಶೃತಿಯನೆ ಹಿಡಿಸುವರಾರೆ ೧೦

ತಂದೆ ರಾಮೇಶನ ಹೊಂದಲು ಸುಖವೆಂದು
ಸುಂದರ ಕೊಳಲನೆ ಮುಂದೆ ಊದಿಸುವರಾರೆ ೧೧

## ೧೫೬

ಘಿಲಿ ಘಿಲಿ ಘಿಲಿಕೆಂದು ಗೆಜ್ಜೆ
ಘಿಲಿ ಘಿಲಿ ಘಿಲಿಕೆಂದು ಗೆಜ್ಜೆ ಪ.

ಘಿಲಿ ಘಿಲಿ ಘಿಲಿ ಘಿಲಿಕು ಎನ್ನುತಲೆ
ಬಲು ಬಲು ರೌಸದಿ ಬಾಲೆ ರಂಭಾ ೧

ಕಿಲಿ ಕಿಲಿ ಕಿಲಿ ಕಿಲಿ ಕಿಂಕಿಣಿ ಜಾಲದಿ
ನಲಿನಲಿದಾಡುತ ಚಲ್ವೆ ರಂಭಾ ೨

ಝುಣ ಝುಣರೆನುತಲಿ ಜಾಣೆ
ಕುಣಿ ಕುಣಿದಾಡುತ ಕುಂಭಿಣಿ ಮ್ಯಾಲೆರಂಭಾ ೩

ಥಳ ಥಳ ಹೊಳೆಯುತ ತಾಳವ ಹಾಕುತ
ಅಳಕಿಸಿ ಸೂರ್ಯನ ಬೆಳಕವ ತಾನು ೪

ತಕ್ಕಡ ತಕ್ಕಡ ತಾಥಾ ಎನುತಲೆ
ಧಿಕ್ಕಿಡಿ ಧಿಕ್ಕಿಡಿ ಧಿಮಕಿಡಿ ಕೃಷ್ಣ ೫

ಘಲು ಘಲು ಘಲುಕು ಎನುತ
ಚಲ್ವ ರಾಮೇಶನ ಸುಲಭದಿ ಒಲಿಸಿ ೬

## ೧೫೭

ಆರು ಬಣ್ಣಿಪರಮ್ಮ
ಶ್ರೀ ಹರಿಯ ದ್ವಾರಕೆಯ ದೊರೆಯ ಪ.

ಆರು ಬಣ್ಣಿಪರಮ್ಮ ಶ್ರೀ ಹರಿಯ
ನೀರ ಪೊಕ್ಕ ಭಾರ ಹೊತ್ತ
ದೊರೆಯನೆತ್ತಿದ ಕರಳು ಕಿತ್ತಿದ
ಚರಿಯ ಹೇಳ ಸಿರಿಯು ಸೋತಳು ೧

ಆರು ಬಣ್ಣಿಪರಮ್ಮ ಶ್ರೀ ಹರಿಯ
ಮೂರು ಪಾದ ಬೇಡಿ ದೊರೆಯ
ಭಾರ ಕೊಡಲಿ ಪೊತ್ತ ಹಿರಿಯ
ನಾರಿ ತಂದ ಧೀರ ವರ್ಯ ೨

ಆರು ಬಣ್ಣಿಪರಮ್ಮ ಶ್ರೀ ಹರಿಯ
ಕ್ರೂರ ಕಂಸನ ಕೊಂದ ಚರಿಯ
ನಾರಿಯರ ವ್ರತವನಳಿದ ಪರಿಯ
ಏರಿದ ರಾಮೇಶ ಕುದುರೆಯ ೩

## ೧೫೮

ಸ್ವಾಮಿ ಬಂದನು ಸತ್ಯಭಾಮೆ
ರುಕ್ಮಿಣಿಯರಿಂದ ಕಾಮಿತ ಫಲವ ಕೊಡುತಲೆ ಪ.,

ತಂದೆ ವಾಸುದೇವ ತಾಯಿ ದೇವಕಿದೇವಿ
ಎಂಭತ್ತುಕೋಟಿ ಯಾದವರು
ಎಂಭತ್ತುಕೋಟಿ ಯಾದವರು ಬರುತಾರೆ
ತೊಂಭತ್ತು ಮಹಲು ತೆರವಿರಲಿ ೧

ಸರ್ಪಶಯನನ ಬದಿಯಲೊಪ್ಪುತ ಬಲರಾಮ
ಛಪ್ಪನ್ನ ಕೋಟಿ ದ್ವಿಜರಿಂದ
ಛಪ್ಪನ್ನ ಕೋಟಿ ದ್ವಿಜರಿಂದ ಬರುತಾರ
ಎಪ್ಪತ್ತು ಮಹಲು ತರವಿರಲಿ ೨

ರಂಗ ಬಂದನು ಸಖಿ ಮಂಗಳಾರುತಿಯ ತಾರೆ
ಕಂಗಳಿಗೆ ಸೂರ್ಯ ಹೊಳೆವಂತೆ
ಕಂಗಳಿಗೆ ಸೂರ್ಯ ಹೊಳೆವಂತೆ ಗರುಡನೇರಿ
ಅಂಗಳಕ ಬಂದ ನರಹರಿ ೩

ನಾಗಶಯನನು ಬಂದ ಬೇಗಆರುತಿ ತಾರೆ
ನೂರು ಸೂರ್‍ಯರ ಬೆಳಕಿಲೆ
ನೂರು ಸೂರ್‍ಯರ ಬೆಳಗೊ ಗರುಡನೇರಿ
ಬಾಗಿಲಿಗೆ ಬಂದ ಯದುಪತಿ ೪

ಮದಗಜಗಮನೆ ಬ್ಯಾಗ ಕಡಲಾರತಿಯ ತಾರೆ
ಚದುರೆ ನೀ ತಾರೆ ಫಲಗಳ
ಚದುರೆ ನೀ ತಾರೆ ಫಲಗಳ ಐವರಿಗೆ
ಎದುರಿಗೆ ಬಾರೆಂದು ಕರಿಯಮ್ಮ ೫

ಕೃಷ್ಣರಾಯನು ಬಂದ ಬುಕ್ಕಿಟ್ಟು ಸೂರ್‍ಯಾಡೆ
ಅಷ್ಟ ಸೌಭಾಗ್ಯ ಇವು ನೋಡ
ಅಷ್ಟ ಸೌಭಾಗ್ಯ ಇವು ನೋಡ ಮಾಡಿದ್ದು
ಎಷ್ಟು ಸುಕೃತವು ಸ್ಮರಿಸಮ್ಮ ೬

ಶ್ರೀದೇವಿಯರಸು ಬಂದ ಕೇದಿಗೆ ಮಲ್ಲಿಗೆ ತಾರೆ
ಆದರದಿತಾರೆ ತುಳಸಿಯ
ಆದರದಿತಾರೆ ತುಳಸಿಯ ಅಕ್ಷತೆಯಿಂದ
ಮಾಧವ ರಾಮೇಶನ ಉಪಚರಿಸೆ ೭

# ೧೫೯

ಬಲು ಬಲು ಬೆರಗಾದ ಬಲರಾಮನು ನೋಡಿ
ಹಲವು ಚಿತ್ರದ ದ್ವಾರ ವೀರ ಪ.

ಕುಂದ ಮಂದಾರವು ಸುಂದರ ಉದ್ಯಾನ
ಅಂದವಾಗಿ ಬೆಳೆದ ತುಳಸಿಯ
ಅಂದವಾಗಿ ಬೆಳೆದ ವೃಂದಾವನ
ಚಂದ ತೋರುವುದೊ ಜನಕೆಲ್ಲ ೧

ಕಾರಂಜಿ ಜಲ ಹಾರಿವೆ ಗಗನಕ್ಕೆ
ನೀರೆ ವರ್ಣಿಸಲು ವಶವಲ್ಲ
ನೀರೆ ವರ್ಣಿಸಲು ವಶವಲ್ಲ ಕಲ್ಪತರು
ವೀರ ಪಾಂಡವರ ವನವಿದು ೨

ಹಸಿರು ಪಚ್ಚದ ಕಲ್ಲು ಕುಸುರಾದ ಗಿಳಿಬೋದ
ಎಸೆವೊ ಮಾಣಿಕದ ಚೌಕಟ್ಟು
ಎಸೆವೊ ಮಾಣಿಕದ ಕಳಸಗಳು
ದೆಸೆಗೆಲ್ಲ ಬೆಳಕು ಎಸೆವೋದು ೩

ಮೇಲಾದ ದ್ವಾರಕ್ಕೆ ಮ್ಯಾಲೆ ಕನ್ನಡಿಗಳು
ಸಾಲು ಕಿಡಕಿಗಳು ಧ್ವಜಗಳು
ಸಾಲು ಕಿಡಕಿಗಳು ಒಳಗಿದ್ದ
ಬಾಲೆರಿನ್ನೆಂಥ ಚಲುವರು ೪

ಮುತ್ತು ಮಾಣಿಕ್ಯ ರತ್ನತೆತ್ತಿಸಿದ ಅರಮನೆಗಳು
ಜತ್ತು ತೋರುವ ಜನಕೆಲ್ಲ
ಜತ್ತು ತೋರುವ ಜನಕೆಲ್ಲ ಒಳಗಿದ್ದ
ಮಿತ್ರೇರಿನ್ನೆಂಥ ಚಲುವರು ೫

ಬರಿಯ ಮಾಣಿಕದ ಗೋಡೆ ಸರಿಯಾದ ಕನ್ನಡಿ
ಪರಿಪರಿ ರತ್ನ ಹೊಳವೋವೆ
ಪರಿಪರಿ ರತ್ನ ಹೊಳೆವವು ಒಳಗಿದ್ದ
ದೊರೆಗಳಿನ್ನೆಂಥ ಚಲುವರು ೬

ವೀರರ ಮನೆ ಮುಂದೆ ಧೀರ ರಾಮೇಶ ಇಳಿದ
ನಾರಿಯರ ಸಹಿತ ಹರುಷದಿ
ನಾರಿಯರ ಸಹಿತ ಹರುಷದಿ ಹೇಳಲು
ತೀವ್ರ ಒಬ್ಬಳನ ಕಳಿಸೆಂದ ೭

## ೧೬೦

ಜಾಣೆ ಕಲ್ಯಾಣಿ ಸುಂದರವಾಣಿ ಪನ್ನಂಗ ವೇಣಿ
ಜಾಣೆ ಹೇಳಮ್ಮ ಹೋಗಿ ಕಾಣಿ ನಿನ್ನಂಥವಳ ಪ.

ಮುದ್ದು ರುಕ್ಮಿಣಿಯು ದೂತೆಗೆ ತಿದ್ದಿ ಮಾತುಗಳ ಹೇಳಿ
ಬುದ್ಧಿವಂತಳೆ ರಾಯಗ ಸುದ್ದಿ ಹೇಳಮ್ಮ ಹೋಗಿ ೧

ಮಾನ ಮಾಡಿ ದೂತೆಗೆ ಆನೆ ಅಂಬಾರಿ ಕೊಟ್ಟು
ನಾನಾ ಭೂಷಣಗಳಿಟ್ಟು ತಾನು ವಸ್ತ್ರಗಳನೆ ಕೊಟ್ಟು ೨

ಹರದಿ ರುಕ್ಮಿಣಿಯು ದೂತೆಗೆ ತುರಗ ಬಿರುದುಗಳೆ ಕೊಟ್ಟು
ಎರಗಿ ಹೇಳಮ್ಮ ಅಷ್ಟು ಹಿರಿತನಗಳಟ್ಟು ೩

ರಂಗ ಬಂದಿಳಿದಾನೆಂಬೊ ಮಂಗಳವಾರ್ತೆಯ
ಸಂಗೀತಲೋಲರಾಯನ ತಂಗಿಗ್ಹೇಳಮ್ಮ ಹೋಗಿ ೪

ಭರದಿ ದ್ರೌಪತಿಗೆ ಮುಯ್ಯಾ ತಿರುಗಿಸಿ ತಂದಾರೆಂದು
ಎರಗಿ ಹೇಳಮ್ಮ ಮೈಯ್ಯ ಮರೆತಿರಬ್ಯಾಡಿರೆಂದು ೫

ಮಂದಗಮನೆಯರು  ಮುಯ್ಯ ತಂದಾರೆ ತಾರಾರೆಂದು
ಸಂದೇಹ ಬಿಟ್ಟು ಊಟ ಚಂದಾಗಿ ಮಾಡಿರೆಂದು ೬

ಧೀರರಾಯಗೆ ಮುಯ್ಯ ನಾರಿಯರು ತಂದಾರೆಂದು
ಬಾರಿ ಬಾರಿಗೆ ನಮಿಸಿ ಸಾರಿ ಹೇಳಮ್ಮ ಹೋಗಿ ೭

ಧಿಟ್ಟೆಯರು ಮುಯ್ಯ ಉತ್ಕೃಷ್ಟದಿ ತಂದಾರೆಂದು
ಕೃಷ್ಣರಾಯನ ಬಂದದ್ದಷ್ಟು ಹೇಳಮ್ಮ ಹೋಗಿ ೮

ಇಂದು ರಾಮೇಶನ ಮಡದಿಯರು ಬಂದರು ದ್ವಾರದಿ
ಒಂದೊಂದು ಮಾತುರಾಯಗೆ ಚಂದಾಗಿ ಹೇಳಮ್ಮ ಹೋಗಿ ೯

## ೧೬೧

ವಾಯಸ ಸಿದ್ಧಿ ಕೊಟ್ಟಾವಮ್ಮ ಒಲಿದಾಳೆ ದೂತೆ
ಶ್ರೀಶನ ದಯ ಸೂಸಿತುಳುಕುತ ಶ್ರೇಯಸ್ಸು ಬರಲೆಂದು ಪ.

ಶುದ್ಧ ಮುತ್ತು ರತ್ನದವಸ್ತ್ರ ತಿದ್ದಿಸೀರಿ ಕುಪ್ಪುಸ ತೊಟ್ಟು
ಬದ್ಧವಾದ ತಳಪಿಲಿಂದ ಮುದ್ದು ಸುರಿಯುತ ೧

ಪುಂಡರಿಕಾಕ್ಷನ ಪಾದಕೆ ದಂಡಪ್ರಣಾಮವ ಮಾಡಿ
ಕೊಂಡಾಡಿ ಕೃಷ್ಣನ ನಡೆದಳು ಪಾಂಡವರರಮನೆಗೆ ೨

ಭಾವೆ ರುಕ್ಮಿಣಿ ದೇವಿಯರಿಗೆ ಭಾವ ಭಕ್ತಿಯಿಂದ ನಮಿಸಿ
ಸ್ವಾಮಿ ಕಾರ್ಯ ಸಾಧಿಸಿ ನಿಸ್ಸೀಮಳು ನಡೆದಾಳೆ ೩

ಅಂದಣ ಏರಿದಳು ದೂತೆ ಬಂದವು ನೀರಿನ ಕುಂಭ
ಚಂದದ ಸೇವಕರು ಮಾರ್ಗ ಮುಂದೆ ನಡೆದರು ೪

ಹಾಲು ಮೊಸರು ಹಲವು ಫಲ ಸಾಲುಸಾಲು ಮುತ್ತೈದೆಯರು
ಮೇಲಾದ ವಿಪ್ರರು ಮೇಲೆ ಮೇಲೆ ಬಂದರು ೫

ಧೀರ ಧರ್ಮರಾಯನ ಸಭೆಯ ದ್ವಾರಪಾಲಕಳಾಗಿ ದೂತೆ
ವೀರ ಮುದ್ರಿಕೆಯ ಕೊಟ್ಟು ನೀರೆ ನಡೆದಳು ೬

ಶ್ರೀದೇವಿ ದೂತೆ ರಾಮೇಶನ ಪಾದಸ್ಮರಣೆಯ ಮಾಡಿ
ಮೋದಭರಿತಳಾಗಿ ರಾಯನ ಪಾದಕ್ಕೆರಗಿದಳು ೭

## ೧೬೨

ರಾಯ ಕಳುಹಿದ ರಂಗ ರಾಯ ಕಳುಹಿದ
ಪ್ರಿಯಭಾವೆ ರುಕ್ಮಿಣಿಯರ
ಪ್ರೇಮಭಾಳೆ ನಿಮ್ಮ ಮ್ಯಾಲೆ ಪ.

ಕೇಳೋರಾಯ ನಿಮ್ಮ ಮ್ಯಾಲಿ ಬಹಳ ಪ್ರೇಮ
ಕೃಷ್ಣರಾಯ ಹೇಳಲ್ಪಶವೆ
ಮುಯ್ಯ ತಂದು ಏಳು ದ್ವಾರ ದಾಟಿ ಬಂದು ೧

ಚಂಚಲಾಕ್ಷಿ ಅರಸಿಯರು ನಿಮಗೆ ಪಂಚಪ್ರಾಣ ಕೃಷ್ಣರಾಯ
ಕೆಂಚಿ ರುಕ್ಮಿಣಿಮುಯ್ಯ ತಂದು
ಮುಂಚಿ ಬಾಗಿಲಮನೆಯೊಳು ಇಳಿದರು ೨

ಕುಂತಿದೇವಿಯರ ಅರಮನೆಗೆ ಚಿಂತಾಮಣಿಯ ತಾನೆ ಬಂದ
ಎಂಥ ಸುಕೃತರಾಯ ನಿಮ್ಮ
ಇಂಥ ಭಾಗ್ಯ ಎಲ್ಲಿ ಕಾಣೆ ೩

ಸುದ್ದಿ ಕೇಳಿ ಧರ್ಮರಾಯ ಗದ್ಗದಿ ನುಡಿಯನೆ ನುಡಿದಾನ
ಮುದ್ದು ಮುಖವ ನೋಡಿ
ಪಾದಕೆ ಬಿದ್ದು ಧನ್ಯರಾದೆವಮ್ಮ ೪

ಅಂದ ಮಾತು ಕೇಳಿರಾಯ ನಂದ ಬಟ್ಟು ನಂದ ಭಾಷ್ಪ
ಬಿಂದು ಉದುರಿ ಬಿಗಿದು ಕಂಠ
ಛಂದದಿ ರೋಮಗಳು ಉಬ್ಬಿ ೫

ಇಂದು ಭದ್ರೆ ದ್ರೌಪತಿಗೆ ತಂದರಮ್ಮ ರುಕ್ಮಿಣಿ ಮುಯ್ಯ
ಆನಂದದಿಂದ ಭಾವೆ ಕೃಷ್ಣ
ಇಂದು ನಿಮ್ಮ ಅರಮನೆಗೆ ೬

ಎಷ್ಟು ಸುಕೃತರಾಯ ನಿಮ್ಮ ಧಿಟ್ಟ ರಾಮೇಶತಾನೆ ಬಂದ
ಅಷ್ಟ ಸೌಭಾಗ್ಯದ ಮುಯ್ಯ
ಶ್ರೇಷ್ಠ ತೋರೋದಮ್ಮ ಸಭೆಯು ೭

## ೧೬೩

ಪನ್ನಂಗ ಶಯನನ ಸುವರ್ಣ ಕವಚ
ಸುಗುಣಿ ಧರಿಸಿ
ಧನ್ಯ ಧನ್ಯಳೆ ದೂತೆಮ್ಮ ಪ.

ಇಂದಿರೇಶನೆಂಬೊ ಶರಧಿಲೆ
ಚಂದ್ರ ಉದಿಸಿದಂತೆ ಬಂದಿ
ಆನಂದಾಮೃತ ತಂದು ಕುಡಿಸಿದಿ
ಬಂದು ನೀ ಇಂದು ನಮಗೆ ೧

ಶೇಷಶಯನನೆಂಬೊ ದಿವ್ಯ
ಭೂಷಣ ಮಾಡಿಟ್ಟ ಬಾಲೆ
ವಿಶೇಷ ಕರುಣ ಮಾಡಿ
ಉತ್ತಮ ಭಾಷ್ಯ ಹೇಳಿ ಹರುಷ ಬಡಿಸಿದಿ ೨

ಅಚ್ಯುತ ರಾಮೇಶನೆಂಬೊ
ಅಚ್ಚ ಬಾಳೆ ಹಣ್ಣು ಮೆಲಿಸಿದಿ

ಉತ್ಸಾಹ ಉನ್ನತಿಯ ಮಾಡಿ
ಸ್ವಚ್ಛ ಚಿತ್ತ ಚಲಿಸಧಾಂಗೆ ೩

## ೧೬೪

ರಾಯ ಹರಿಯ ಪ್ರಿಯ ಕೃಷ್ಣರಾಯದಾರಿ ನೋಡುವನು
ತೊರೆಯದಿ ಅಪ್ಪಣೆಯ ಬೇಡಿ ಎರಗಿ ನಿಂತಳು ಪ.

ಹರಿಯ ಬದಿಯಲಿ ಹೋಗಿ ನೀನು
ಪರಮ ಪ್ರೇಮದಿಂದಲೈವರು ಬರುವರು
ಈ ಕ್ಷಣದಲಿ ಎಂದು ಎರಗಿ ಹೇಳಮ್ಮ ೧

ಚಿತ್ತಜನ್ಯೆಯನ ನೋಡಿ ಚಿತ್ತಹರುಷ ಬಡಿಸೆವಮ್ಮ
ವೃತ್ತಾಂತವ ಹೋಗಿ
ಹೇಳೆ ಕೀರ್ತಿವಂತಗೆ ೨

ಮಿತ್ರೆ ದ್ರೌಪತಿಯು ದೂತೆಗೆ
ತೃಪ್ತಿಪಡಿಸಿ ಭೋಜನಾದಿ
ಮುತ್ತು ರತ್ನದ ವಸ್ತ ವಸ್ತ್ರಗಳೆ ಕೊಟ್ಟಳು ೩

ಅಂಬುಜಾಕ್ಷೆ ದ್ರೌಪತಿಯು
ತಾಂಬೂಲ ಅಡಿಕೆ ಕೊಟ್ಟು
ಸಂಭ್ರಮದಿ ಆನೆ ಅಂಬಾರಿ ಕೊಟ್ಟಳು ೪

ಕುಂತಿದೇವಿ ಮೊದಲಾದವರು
ಕಾಂತೆಯರ ಪರಿವಾರ ಸಹಿತ
ಕಂತುನ್ಯೆಯನ ಕರೆಯ ಬರಲು ನಿಂತಾರಂತ್ವೇಳೆ ೫

ಪಂಚ ಪಾಂಡವರ ಮಡದಿ ಪಾಂಚಾಲಿ ದೇವಿಯು
ತಾನು ಕೆಂಚೆಯರಿಂದ ಕೂಡಿ
ಮುಂಚೆ ಬಾಹೋರಂತ್ವೇಳೆ ೬

ಪನ್ನಂಗ ಶಯನನ ನೋಡದೆ
ಅನ್ನ ಸೊಗಸವಮ್ಮ ನಮಗೆ
ಚನ್ನರಂಗಯ್ಯನ ಮುಂದೆ ಇನ್ನು ನೀ ಹೇಳೆ ೭

ಮುದ್ದು ರಂಗನಮುಖವ ನೋಡದೆ
ನಿದ್ರೆ ಬಾರದಮ್ಮ ನಮಗೆ
ಹದ್ದು ವಾಹನನ ಮುಂದೆ ಸುದ್ದಿ ನೀ ಹೇಳೆ ೮

ವೀತ ದೋಷ ರಾಮೇಶನ ಪ್ರೀತಿ
ಇರಲಿ ಅಂತೆ ಹೇಳಮ್ಮ
ಆತನ ಕಾಣದೆ ಒಂದು ಮಾತು ಸೊಗಸದು ೯

## ೧೬೫

ಮದಗಜಗಮನೆಯರ ಮುದದಿ ಮುಯ್ಯಕ್ಕೆ
ಸರಿ ಹದಿನಾಲ್ಕು ಲೋಕದೊಳಗಿಲ್ಲ
ಕೇಳಮ್ಮ ದೂತೆ ಹೇಳಮ್ಮ ಹೋಗಿ ಈ ಮಾತೆ ಪ.

ಚಂದ್ರ ಉದಿಸಿದಂತೆ ಬಂದರೆ ಐವರು
ಇಂದೆಮ್ಮ ಪುಣ್ಯ ಫಲಿಸಿತೆ
ಇಂದೆಮ್ಮ ಪುಣ್ಯ ಫಲಿಸಿತೆ ಐವರು
ಬಂದೆರಗೋರಮ್ಮ ಕ್ಷಣದೊಳು ೧

ಎಂಥ ದಯವ ಮಾಡಿ ಕಾಂತೆಯರು ಬಂದಾರೆ
ಎಂತು ನಮ್ಮ ಪುಣ್ಯ ಫಲಿಸಿತು
ಎಂತೆಮ್ಮ ಪುಣ್ಯ ಫಲಿಸಿತು
ಲಕ್ಷ್ಮಿಕಾಂತನೆ ಬಂದ ಮನೆತನಕ ೨

ಹರದೆಯರು ಬಂದದ್ದು ಅರಿದು ಎಷ್ಟೇಳಲಿ
ಬೆರಗಾದರಮ್ಮ ಹರಬೊಮ್ಮ

ಬೆರಗಾದರಮ್ಮ ಹರಬೊಮ್ಮ ಕಾಮಧೇನು
ಕರೆದಂತಾಯಿತು ಸುಖವನೆ ೩

ಸಚ್ಚಿತಾನಂತ ಬಂದದಾಶ್ವರ್ಯ ನೋಡ ತಾಯಿ
ಅಚ್ಚ ಕರುಣದಲೆ ಐವರಿಗೆ
ಅಚ್ಚ ಕರುಣದಲೆ ಐವರಿಗೆ ಪರಿಪರಿ
ಉತ್ಸಾಹ ಉನ್ನತಿಯ ಕೊಡುವವನೆ ೪

ಅತಿಶಯ ಮುಯ್ಯವನು ಸುತಿಸಲಾರೆವ ಕೆಲದಿ
ಚತುರಂಗ ಬಲವ ಸಹಿತಾಗಿ
ಚತುರಂಗ ಬಲವ ಸಹಿತಾಗಿ ರಾಮೇಶನ
ಸತಿಯರ ಕರೆಯ ಬರತೇವ ೫

## ೧೬೬

ದಿಗ್ವಿಜಯವಂತೆ ಬಂದಳು
ರುಕ್ಮಿಣಿ ದೂತೆ
ಶೀಘ್ರದಿಂದ ಕೃಷ್ಣರಾಯ
ಮಾರ್ಗನೋಡ್ಯಾನೆಂಬೊ ಭಯದಿ ಪ.

ಕೃಷ್ಣರಾಯನ ಬಿಟ್ಟು
ಎಷ್ಟು ಹೊತ್ತು ಆಯಿತೆಂದು
ಸಿಟ್ಟು ಬರಧಾಂಗೆ ಸುರರಿಗೆ
ಎಷ್ಟು ಸಲುಹಲಿ ಎನುತ ೧

ವೀಕ್ಷಿಸಿ ಎನ್ನ ಮಾರಿಯನು
ಲಕ್ಷ್ಮಿಯರು ಕೋಪಿಸದಿರಲಿ
ಲಕ್ಷ ಕೋಟಿದ್ರವ್ಯ ದಾನ
ಈ ಕ್ಷಣ ಕೊಡುವೆನೆ ಎನುತ ೨

ಮದನಜನ್ನೈಯ್ಯನ ದಯವು
ಮೊದಲ್ಹಾಂಗೆ ಇದ್ದರೆ ನಾನು
ಅದ್ಭುತದ್ರವ್ಯ ದಾನ
ಬುಧರಿಗಿತ್ತೇನೆ ಎನುತ ೩

ಚಿತ್ತಜನ್ನೈಯನ ದಯವು
ಅತ್ಯಂತವಾದರೆ ನಾನು
ವಿತ್ತ ಕೋಟಿ ದಾನವನ್ನು ಮತ್ತೆ
ಕೊಡುವೆನೆ ಎನುತ ೪

ಇಂದಿರೇಶಗೆ ಅಂಜಿಕೊಂಡು
ಚಂದ್ರ ಸೂರ್ಯರು ತಿರಗೋರಮ್ಮ
ಚಂದಾದ ನಕ್ಷತ್ರ ಬಂದು
ಅಂಜಿ ಹೋಗಿವೆ ಎನುತ ೫

ಹರಿಗೆ ಅಂಜಿಕೊಂಡು ಶರಧಿ
ಮರ್ಯಾದಿಲೆ ಇರುವೋ ನಮ್ಮ
ದೊರೆಗೆ ಅಂಜಿಕೊಂಡು ವಾಯು
ತಿರುಗಾಡುವನಮ್ಮ ಎನುತ ೬

ಅಗ್ನಿಅಂಜಿ ತನ್ನ ದರ್ಪ
ತಗ್ಗಿಸಿ ಕೊಂಡಿಹ ನಮ್ಮ
ಭಾಗ್ಯದರಸು ಅಂಜಿ ಮಳೆಯು
ಶೀಘ್ರದಿ ಗರೆಯುವನು ಎನುತ ೭

ಹಾಸಿಗ್ಯಾಗುವ ಶೇಷ ಅಂಜಿ
ದಾಸಿ ಆಗುವಳಂಜಿ ಲಕುಮಿ
ದೇಶಕಾಲ ಅಂಜಿ ಒಂದು
ಲೇಸು ಮೀರ್‍ಯಾವೆ ಎನುತ ೮

ವರಗಿರಿ ವಾಸಗೆ ಅಂಜಿಶೇಷ
ಜಗವ ಪೊತ್ತಿಹನಮ್ಮ
ಗರಿಯ ಹರವಿ ಗರುಡ ಅಂಜಿ
ಹರಿಯ ಧರಸಿಹನೆ ಎನುತ ೯

ಸಂಖ್ಯವಿಲ್ಲದ ಗಜಗಳಂಜಿ
ಫಕ್ಕನೆ ನಿಂತಿಹ ವಮ್ಮ
ದಿಕ್ಪಾಲಕರು ಅಂಜಿ ತಮ್ಮ
ದಿಕ್ಕು ಕಾಯುವರು ಎನುತ ೧೦

ನದ ನದಿಗಳಂಜಿಕೊಂಡು ಒದಗಿ
ಮುಂದಕ್ಕೆ ಹರಿವೋವಮ್ಮ
ಸುದತೆ ವೃಕ್ಷ ಅಂಜಿ
ಪುಷ್ಪಫಲವ ಕೊಡುವೊವೆ ಎನುತ ೧೧

ಕಂತು ನೈಯನ ಅರಸುತನ
ಎಂಥದೆಂದು ಬೆರಗುಬಟ್ಟು
ನಮ್ಮಂಥಾ ಒಣ ಬಳಗ
ಅಂಜಿಲಿವೋದು ಕಾಂತೆ ಅರುವನೆ ಎನುತ ೧೨

ರಮಿ ಅರಸಗಂಜಿಕೊಂಡು
ಬ್ರಮ್ಹ ಸೃಷ್ಟಿ ಮಾಡೋನಮ್ಮ
ಸುಮ್ಮನೆ ಸುರರೆಲ್ಲ ಕೂಡಿ
ದಮ್ಮಯ್ಯ ಎನಲೆಂದು ಹರಿಗೆ ೧೩

## ೧೬೭

ದೊರೆ ಧರ್ಮಗೆ ಶಿರವ ಬಾಗಿ
ಕರವ ಮುಗಿದು ಹೇಳಿದೆ
ನಾ ಕರವ ಮುಗಿದು ಹೇಳಿದೆ
ಹರಿಯ ಭಕ್ತರ ಸಿರಿಯ ದ್ವಾರಕೆ ದೊರೆಗೆ
ಎರಗುವೆನೆಂದಳು ಶ್ರೀ ಹರಿಗೆ ಎರಗುವೆನೆಂದಳು ಪ.

ಇಂದು ನಮ್ಮ ಮಂದಿರಕ್ಕೆ ಮಂದಗಮನೆಯರಿಂದಲೆ ರಂಗ
ಇಂದು ನಿಮ್ಮ ಸುಕೃತ ಬಹಳ ಬಂದು
ಒದಗಿತೆಂದನು ರಾಯ ಬಂದು ಒದಗಿತೆಂದನು ೧

ಅಂದಮಾತು ಕೇಳಿ ಆನಂದ ಪೂರ್ಣನಾದನು ರಾಯ
ಬಂದ ಜನರು ವೃಂದಾರಕರೆಂದು
ಬಂದ ಕೃಷ್ಣ ಎಂದನು ಈಗ ಬಂದ ಸ್ವಾಮಿ ಎಂದನು ೨

ಎಷ್ಟು ಯಜ್ಞವು ಎಷ್ಟು ದಾನವು ಎಷ್ಟು ಜಪ ತಪ ಹೋಮವು
ಮತ್ತೆ ಎಷ್ಟು ತೀರ್ಥಯಾತ್ರೆ ಫಲಿಸಿತು
ಕೃಷ್ಣ ಬಂದನೆಂದು ಈಗ ಕೃಷ್ಣ ಮನೆಗೆ ಬಂದನು ೩

ಧಿಟ್ಟೆರೈವರು ಕೃಷ್ಣನಂಘ್ರಿಯ ಮುಟ್ಟಿ ಮನದಲ್ಲಿಟ್ಟರು
ಕೃಷ್ಣ ಮನೆಗೆ ಬಂದನೆಂದು
ಎಷ್ಟು ಹರುಷ ಬಟ್ಟರು ಅವರು ೪

ಏಳು ಜನ್ಮದ ಸುಕೃತದಿಂದ ಈ ವೇಳೆ ಒದಗಿತೆಂದನು ರಾಯ
ಕೇಳ ರುಕ್ಮಿಣಿ ಭಾವೆ ಬಂದದ್ದು ಹೇಳಲ್ವಶವೆ
ಎಂದನುರಾಯ ಹೇಳಲ್ವಶವೆ ಎಂದನು ೫

ಫುಲ್ಲನಾಭನ ಪಾದ ಕಾಣದೆ ನಿಲ್ಲಲಾರೆವೆಂದರು
ಕ್ಷಣ ನಿಲ್ಲಲಾರೆವೆಂದರು ಚಲ್ವ ರಂಗನ ಬದಿಲೆ ಬಂದು
ನಿಲ್ವೆವೀಗ ಎಂದನು ರಾಯ ೬

ಏಸು ಜನ್ಮದ ಸುಕೃತದಿಂದ ರಾಮೇಶ
ಬಂದನೆಂದನು ಸರ್ವೇಶ ಬಂದನೆಂದನು
ವಾಸುದೇವರ ಪಾದಕಾಂಬುವೆ ಈ ಸಮಯದೊಳು
ಎಂದನುರಾಯ ೭

## ೧೬೮

ಮಲ್ಲೆ ಮಲ್ಲಿಗೆ ಕೋಲ ಝಲ್ಲಿ ಮುತ್ತಿನ ಕೋಲ
ನಲ್ಲೆಯರು ನಲಿ ನಲಿದು ಚಲುವ ರಂಗನ ಪಾಡಿ
ಉಲ್ಲಾಸ ಬಡುವ ಕೋಲ ಅಮ್ಮಯ್ಯ ಪ.

ನಾರಿ ರುಕ್ಮಿಣಿ ಮುದ್ದು ಚಾರು ವದನಳೆ ದಿವ್ಯ
ಘೋರ ಕುಚಗಳ ಆ ಭಾರಕೆ ಬಳಕುವಳೆ
ವಿಸ್ತಾರ ಜಘನಳೆ ಚಲ್ವಳೆ ಅಮ್ಮಯ್ಯ ೧

ನಾರಿಕೇಲದಂತೆ ಕರಗಳೆ ಉರಗಳೆ
ವರಜಾನು ಜಂಗಿಗಳ ಚರಣಗಳ ನಖಗಳ
ಬೆರಳುಗಳಿಗೆ ಎರಗುವೆನು ಅಮ್ಮಯ್ಯ ೨

ಅಂಬುಜಾ ಮುಖಿ ಭಾವೆ ಬಿಂಬಾಧರಳೆ ದಿವ್ಯ
ಕುಂಭ ಕುಚ ಕಟಿ ಸಣ್ಣ ನಿತಂಬಿನಿಮ್ಮೈ ಬಣ್ಣದ ವಿಸ್ತರಳೆ
ಲತೆಯಂತೆ ತೋಳತೊಡೆ ರಂಭೆ ಕಂಬು ನಮ್ಮಯ್ಯ ೩

ಅಂಬುಜಾಂಬಳ ಪಾದವೆಂಬೊ ಕಮಲಗಳ
ಬೆರಳೆಂಬೊ ಹವಳಗಳ ನಖವೆಂಬೊ ಚಂದ್ರಗಳ
ಸಂಭ್ರಮದಿ ಎರಗುವೆ ನಮ್ಮಯ್ಯ ೪

ಮಂದಗಮನೆಯರ ಮುಯ್ಯ ಸುಂದರ ತೋರುವದು
ಚಂದ್ರ ಲೋಕದಲಿಲ್ಲ ನಾಗೇಂದ್ರ ಲೋಕದಲಿಲ್ಲ ಸಿಂಧು ಸಪ್ತದಿ
ಗಂಧರ್ವ ಲೋಕದಲಿಲ್ಲ ಹಿಂದಿಲ್ಲ ಮುಂದಿಲ್ಲವೆಂದೆ ನಮ್ಮಯ್ಯ ೫

ಮಂದಾರ ಗಿರಿಮೇರು ಮಂದಾರದಲೆ
ಮೇಲೆಂಬೊ ಮಾರ್ಜನ ತಪ ಒಂದು ಲೋಕದಲಿಲ್ಲವೆಂದು
ದ್ರೌಪತಿಗ್ಹೇಳಿ ಬಂದೆನಮ್ಮಯ್ಯ ೬

ಮಿತ್ರೆಯರ ಮುಯ್ಯಕ್ಕೆ ಮತ್ತೆಲ್ಲಿ ಸರಿಯಿಲ್ಲ ಸತ್ಯಲೋಕದಲಿಲ್ಲ
ಮೃತ್ಯು ಲೋಕದಲಿಲ್ಲ ಅತ್ಯಂತ ತೆಳಗಿಹೊ ರತ್ನ ಲೋಕದಲಿಲ್ಲ
ಹತ್ತು ದೆಸೆಗಿಲ್ಲವೆಂದೇ ನಮ್ಮಯ್ಯ ೭

ಭಕ್ತವತ್ಸಲ ಸ್ವಾಮಿ ಅತ್ಯಂತ ಪ್ರೇಮದಲೆ
ಸತ್ಯಭಾಂವೆರ ಅರಸು ಅರ್ಥಿಲೆ ಬಂದದ್ದು
ಚಿತ್ತಕ್ಕೆ ತಾ ಎಂದೆ ನಮ್ಮಯ್ಯ ೮

ವೈಭವದ ಮುಯ್ಯವು ವೈಕುಂಠದಲಿಲ್ಲ ಕೈವಲ್ಯವೆನಿಪ
ಸೇತುದ್ವೀಪದೊಳಗಿಲ್ಲ
ಭಯವಿಲ್ಲವೆನಿಪ ಅನಂತಾಸನದಲಿಲ್ಲ
ಐವರ ಅರಸಿಗೆ ಹೇಳಿಬಂದೆನಮ್ಮಯ್ಯ ೯

ಕೈವಲ್ಯಪತಿ ತಾನು ದಯಮಾಡಿ ಬಂದದ್ದು
ದಯವ ಬಹಳಮ್ಮ ಐವರದು ಎನುತಲೆ
ಕೈಮುಗಿದು ಹೇಳಿ ಬಂದೆ ನಮ್ಮಯ್ಯ ೧೦

ನಲ್ಲೆಯರ ಮುಯ್ಯಕ್ಕೆ ಎಲ್ಲೆಲ್ಲೂ ಸರಿಯಿಲ್ಲ ಸಪ್ತದ್ವೀಪದಲಿಲ್ಲ
ಮೇರುವಿನಲಿಲ್ಲ ಈ ಭಾಗ್ಯವೆಲ್ಲ ಸ್ವರ್ಗದಲಿಲ್ಲ
ಚಲ್ವೆ ದ್ರೌಪತಿಗೆ ಹೇಳಿ ಬಂದೆ ನಮ್ಮಯ್ಯ ೧೧

ಬಲ್ಲಿದ ಅತಳ ವಿತಳ ಸುತಳ
ಮಹಾತಳ ತಳಾತಳ ರಸಾತಳದಲಿಲ್ಲ
ಈ ಮುಯ್ಯಕ್ಕೆಲ್ಲಿ ಸರಿ ಹೇಳಿ ಬಂದೆನಮ್ಮಯ್ಯ ೧೨

ನಮ್ಮ ದೇವಿಯರು ತಂದ ರಮ್ಯದ ಮುಯ್ಯವು
ಈ ಮಹಿಮೆಯೊಳಗಿಲ್ಲ ಬೊಮ್ಮ ಲೋಕದಲಿಲ್ಲ
ಸುಮನ ಸಾರಿರುವೋ ಸ್ವರ್ಗಲೋಕದಲಿಲ್ಲ
ಅಮ್ಮಿಳ್ಳ ಪಾತಾಳವೆಂದೆ ನಮ್ಮಯ್ಯ ೧೩

ರಮಿಯರಸನು ತಂದ
ಜಮ್ಮನೇ ನಿಮ್ಮ ಭಾಗ್ಯವು ಬಹಳ
ಅಮ್ಮ ದ್ರೌಪತಿ ಎಂದು ಜುಮ್ಮನೆ ಹೇಳಿ ಬಂದೆನಮ್ಮಯ್ಯ ೧೪

## ೧೬೯

ಏಳು ಲೋಕದಲಿ ಹೇಳುವರು ಅವರಕೀರ್ತಿ
ಕೇಳಿ ಕೇಳಿ ಬಲ್ಲೆವಮ್ಮ ದೂತೆ
ಬಹಳ ಬಹಳ ಭಾಗ್ಯವೇನೆ ದೂತೆ
ಹೇಳಲ್ವಶವಲ್ಲವೇನೆ ದೂತೆ ಪ.

ಕೃಷ್ಣನಂಘ್ರಿ ಕಮಲದಲೆ ನಿಷ್ಠನಾಗಿ ಧರ್ಮರಾಯ
ಅಷ್ಟು ರಾಜ್ಯನಾಳುವನೇನ ದೂತೆ ೧

ದಿಟ್ಟ ಧರ್ಮರಾಯ ದ್ರವ್ಯ ಶ್ರೇಷ್ಟ ದ್ವಿಜರಿಗೆ ಕೋಟಿ
ಕೊಟ್ಟು ಕೊಟ್ಟು ಕಳಿಸೋನೇನೆ ದೂತೆ ೨

ಮಾಧವನ ಭಕ್ತರಿಗೆ ಆದರದಿ ದ್ರವ್ಯ ಸಹಿತ
ಗೋದಾನಗಳು ಕೊಡುವೊನೇನೆ ದೂತೆ ೩

ನೀಲವರ್ಣನ ಭಕ್ತರಿಗೆ ಸಾಲಿಗ್ರಾಮ ಕೋಟಿ ಲಕ್ಷ
ಮ್ಯಾಲೆ ದ್ರವ್ಯ ಕೊಡುವೋನೇನೆ ದೂತೆ ೪

ಶ್ಯಾಮವರ್ಣನ ಭಕ್ತರಿಗೆ ಪ್ರೇಮದಿಂದ ದ್ರವ್ಯ ಸಹಿತ
ಭೂಮಿದಾನ ಕೊಡುವೊನೇನೆ ದೂತೆ ೫

ಪನ್ನಂಗಶಯನನ ಭಕ್ತರ ಮನ್ನಿಸಿ ದ್ರವ್ಯಗಳಿಂದ
ಕನ್ಯಾದಾನ ಮಾಡೋನೇನೆ ದೂತೆ ೬

ಉತ್ತಮ ದ್ವಿಜರಿಗೆ ರಾಯ ಮುತ್ತು ಮಾಣಿಕರತ್ನ ಸಹಿತ
ಛತ್ರ ಚಾಮರ ಕೊಡುವೋನೇನೆ ದೂತೆ ೭

ಆನೆ ಕುದುರೆ ಅಂದಣವು ನಾನಾ ಭೂಷಣಗಳು ವಸ್ತ್ರ
ಜ್ಞಾನಿಗಳಿಗೆ ಕೊಡುವೊನೇನೆ ದೂತೆ ೮

ಸಂಪತ್ತು ದ್ವಿಜರಿಗೆ ಕೊಟ್ಟು ದಂಪತ್ತು ಪೂಜೆಗಳ ಮಾಡಿ
ಗುಂಪು ಗುಂಪು ಕಳುಹೋನೇನೆ ದೂತೆ ೯

ಮಿತಿ ಇಲ್ಲದೆ ಅನ್ನ ಮಧ್ವಮತದ ಜನಕೆ ಕೊಟ್ಟು
ಲಕ್ಷ್ಮೀಪತಿಗೆ ಅರ್ಪಿಸುವನೇನೆ ದೂತೆ ೧೦

ಯದುಪತಿಯ ಭಕ್ತರಿಗೆ ಉದಕ ಪಾತ್ರೆ ಕೊಟ್ಟುರಾಯ
ಅಧಿಕ ಕೀರ್ತಿ ಪಡೆಯುವನೇನೆ ದೂತೆ ೧೧

ತುಷ್ಟರಾಗಿ ಆಶೀರ್ವಾದ ಕೊಟ್ಟುರಾಯಗೆ ದ್ವಿಜರು
ಕೃಷ್ಣಗರ್ಪಿಸೆಂಬೋರೇನೆ ದೂತೆ ೧೨

ರತಿ ಇಟ್ಟು ರಾಮೇಶನಲ್ಲೆ ವ್ರತವ ಕೋಟಿ ಮಾಡಿರಾಯ
ಕೃತ ಕೃತ್ಯನಾಗುವನೇನ ದೂತೆ ೧೩

## ೧೭೦

ಕೀರ್ತಿ ಕೊಂಡಾಡಲ್ವಶವಲ್ಲವ
ಖ್ಯಾತಿ ಕಂಡು ಬೆರಗಾದೆನೆ ದೂತೆ ಪ.

ಗಣನೆ ಇಲ್ಲದೆ ದ್ರವ್ಯ ಕೊಡುವೋನ
ರಾಯಗೆ ಕ್ಷಣ ತೆರವಿಲ್ಲವೆಂಬೊ ಬಿರುದು ೧

ಸಟಿ ಇಲ್ಲದೆ ದ್ರವ್ಯ ಕೊಡುವೋನು
ರಾಯಗೆ ತೃಣ ತೆರವಾಗದೆಂಬೋ ಬಿರುದು ೨

ಹಲವು ದಾನಗಳನ್ನ ಕೊಡುವೋನು
ರಾಯಗೆ ಹಲವು ಕೊಡುವೋನೆಂಬ ಬಿರುದು ೩

ಲೆಕ್ಕವಿಲ್ಲದೆ ದಾನ ಕೊಡುವೋನು
ಕೀರ್ತಿಸಲು ಶಕ್ಯವಿಲ್ಲ ಆತನ ಬಿರುದು ೪

ಮಿತಿ ಇಲ್ಲದೆ ದ್ರವ್ಯ ಕೊಡುವೋನು
ಕೀರ್ತಿ ಅತಿಶಯವಮ್ಮ ಆತನ ಬಿರುದು ೫

ಕರೆದು ಕರೆದು ದ್ರವ್ಯ ಕೊಡುವೋನು
ರಾಯನ ಕರ ತೆರವಾಗದೆಂಬ ಬಿರುದು ೬

ಕೃಷ್ಣಾರ್ಪಣೆಂತೆಂಬೋದು ರಾಯಗೆ ಇಷ್ಟ
ಕರತೆರವಾಗದು ೭

ಅತ್ಯಂತ ಪ್ರೇಮ ಸೂಸುತ ರಾಯ
ದಿವ ರಾತ್ರಿಯಲಿತತ್ವ ಕೇಳುತಲಿವ ೮

ನಿದ್ರೆ ಇಲ್ಲವು ರಾಯಗೆ ಏನೇನು
ನಮ್ಮ ಮುದ್ದು ರಮೇಶ ನಂಘ್ರಿಯ ಧ್ಯಾನ ೯

## ೧೭೧

ಎಂಥ ಧರ್ಮರಾಯ ಸಂತೋಷ ಬಡಿಸುವ
ಅನಂತ ಪ್ರಜರಿಗೆಲ್ಲ ಚಿಂತಾಮಣಿಯು ತಾ
ಎಂಥ ಧರ್ಮರಾಯ ಇಂದಿವರಾಕ್ಷಿ ಪ.

ಒಡಹುಟ್ಟಿದವರೆಲ್ಲ ಬಿಡದೆ ಸೇವಿಸುವರು
ಕಡುಭಕ್ತಿಯಿಂದಲೆ ನಡೆನುಡಿ ಬಿಡದೆ ೧

ಹರದೆಯರು ರಾಯಗೆ ಪರಿಪರಿ ಸೇವಿಸಿ
ಎರಗೋರು ಕಾಲಕಾಲಕೆ ಪರಮ ಭಕ್ತಿಯಲಿ ೨

ಭೃತ್ಯರು ರಾಯಗೆ ಅತ್ಯಂತ ಸೇವಿಸಿ
ಚಿತ್ತವ ಹಿಡಿಯಲು ಉತ್ತಮನೆಂದು ೩

ದಾಸರು ರಾಯಗೆ ಸೋಸಿಲೆ ಸೇವಿಸಿ
ಏಸೇಸು ಕಾಲಕ್ಕೆ ಈ ಸ್ವಾಮಿ ಬಯಸೋರು ೪

ವಿಪ್ರರು ರಾಯಗೆ ಒಪ್ಪೋದು ದೊರೆತನ
ತಪ್ಪದೆ ಇರಲೆಂದು ಗೌಪ್ಯದಿ ಜಪಿಸೋರು ೫

ಮಿಕ್ಕ ಜನರಿಗೆ ಸಕ್ಕರೆ ಹೇರಮ್ಮ
ಲಕ್ಷ್ಮಿ ರಮಣಗೆ ಸಖ್ಯನು ರಾಯ ೬

ಎಲ್ಲ ಜನಕೆ ರಾಯಬೆಲ್ಲದ ಹೇರಮ್ಮ
ಚೆಲ್ವ ರಾಮೇಶನ ನಲಿವಿನ ಮುಂದೆ ೭

## ೧೭೨

ಧನ್ಯ ಧನ್ಯ ರಾಯ ಮಾನ್ಯ ಮಾನ್ಯವೀತ ಮುನ್ನಾರು ಸರಿಯಿಲ್ಲ
ಮುನ್ನೆಲ್ಲ ಕೆಲದಿ ಕೃಷ್ಣನ ಪ್ರಿಯ ಪ.

ಕಾಮ ಕ್ರೋಧಗಳೆಲ್ಲ ಸೀಮೆಯ ದಾಟಿಸಿ
ಭೂಮಿಯನಾಳುವನೆಪ್ರೇಮದಿರಾಯ ೧

ಚಲ್ವನರಾಜ್ಯದಿ ಇಲಿಗೆ ಬೆಕ್ಕಿಗೆ ಹಿತ
ಹುಲಿಗೆ ಮೊಲಕೆ ಹಿತ ಬಲು ಕೌತುಕವ ೨

ಅಪ್ಪನ ರಾಜ್ಯದಿ ಸರ್ಪಕಪ್ಪೆಗೆ ಹಿತ
ತಪ್ಪು ಗುಣಗಳೆಲ್ಲ ಒಪ್ಪರು ಕೆಲದಿ ೩

ಮಾನ್ಯನ ರಾಜ್ಯದಿ ಆನೆ ಸಿಂಹಕೆ ಹಿತ
ಏನೆಂಬ ಸವತೆಯರ ಹೀನತೆ ಇಲ್ಲ ೪

ಮುನ್ನ ಕಲಿಯಕಟ್ಟಿ ಚನ್ನರಾಮೇಶನ
ಅನಂತ ದಯಪಡೆದ ಉನ್ನತಿ ನೋಡ ೫

## ೧೭೩

ಭೂಮಂಡಲಕೆ ಮಿಗಿಲೆನಿಸಿದ ತಾಯಿ
ಕಂಡು ಬಂದೆನೆ ಪಾಂಡವರ ಭಾಗ್ಯವ ಪ.

ಸಂಭ್ರಮದಿರಾಯನು ತುಂಬಿಸಿದ ಮನೆಯೊಳಗೆ
ಉಂಬೊ ಪದಾರ್ಥ ಕೋಟಿ ಫಲಕದಳಿ
ತಿಂಬೊ ಪದಾರ್ಥ ಕೋಟಿ
ಷಡ್ರಸವೆಂಬೊ ಪದಾರ್ಥ ಕೋಟಿ
ಈ ತೂಗಿಕೊಂಬ ಮಣಿಮಂಚ ಕೋಟಿ ತಾಯಿ ೧

ಅರ್ಥಿ ಮನಿಒಳಗೆ ಮುತ್ತು ರತ್ನದ ರಾಶಿ
ಮತ್ತೆ ನವ ಧಾನ್ಯರಾಶಿ
ಧನದ್ರವ್ಯ ವಿತ್ತ ಕೋಟಿಯು ರಾಶಿ
ರಾಯನಚಿತ್ತ ಸಂತೋಷ ರಾಶಿ ೨

ಏಸುಮುನಿ ಬಳಗ ದಾಸರು ದಾಸಿಯರು ಬೀಸಿ ತೊಟ್ಟಿಲವ
ತೂಗುವರು
ಮಕ್ಕಳನ ಸೋಸಿಲೆ ಕರೆದೊಯ್ಯುವರು
ಮಂಚದಲಿ ಹಾಸಿಗೆ ಹಾಸುವರು
ರಾಯಗೆ ಈ ಬಗೆ ಸೇವಕರು ತಾಯೆ ೩

ಎಲ್ಲ ಮನೆಯೊಳಗೆ ಮಲ್ಲಿಗೆ ಸಂಪಿಗೆ ಅಲ್ಲೆ ಕ್ಯಾದಿಗೆದವನವು
ಬುಕ್ಕಿಟ್ಟು ಅಲ್ಲಲ್ಲೆ ಶ್ರೀಗಂಧವು
ಎಲಿ ಅಡಕಿ ಅಲ್ಲಲ್ಲಿ ತಬಕಿಹೋದು
ರಾಯಗೆ ಈ ಬಗೆ ಸೇವಕರು ತಾಯೆ ೪

ಅಷ್ಟು ಮನೆಗಳ ಮುಂದೆ ಪಟ್ಟದ ಆನೆಗಳು
ಕಟ್ಯಾವ ಕುದರಿಯ ಸಾಲು ರಥಗಳು ಇಟ್ಟಾವ ಬಿಲ್ಲುಗಳು
ಪಲ್ಲಕ್ಕಿ ಧಿಟ್ಟಾದ ವಯಿರಗಳು
ರಮೆ ಅರಸಗಿಷ್ಟು ಉಪಚಾರಗಳು ತಾಯೆ ೫

## ೧೭೪

ಸೊಂಡಿಲಾನಗರದ ಭೂಪನ ಕೊಂಡಾಡಲ್ವಶವಲ್ಲ ತಾಯಿ
ಕಂಡು ಬಂದೆನೆ ಪಾಂಡವರ ಭಾಗ್ಯವ ಪ.

ಘೋರ ಮುತ್ತಿನ ಝುಲ್ಲೆ
ಬಿಗಿದ ತೇರುವಾಜಿ ಶೃಂಗರಿಸಿದ
ದಾರಿ ಮ್ಯಾಲ ನಿಂತಾವ ನಮ್ಮ ವೀರ
ರಂಗನ ಕರೆಯ ಬರಲು ೧

ಅಚ್ಚ ಮುತ್ತಿನ ಝುಲ್ಲೆ ಬಿಗಿದ
ಹೆಚ್ಚಿನ ರಥಗಳುವಾಜಿ
ಜತ್ತಾಗಿ ನಿಂತಾವಮ್ಮ
ಅಚ್ಯುತನ ಕರೆಯ ಬರಲು ೨

ಬರಿಯ ಮಾಣಿಕ ರತ್ನ ಬಿಗಿದ
ದೊರೆಗಳೇರೊ ರಥ ವಾಜಿ
ಸರಿಯಾಗಿ ನಿಂತಾವಮ್ಮ ನಮ್ಮ
ಹರಿಯ ಕರೆಯ ಬರಲು ೩

ನಾನಾ ಮುತ್ತು ರತ್ನ ಬಿಗಿದ
ಆನೆ ಅಂಬಾರಿಗಳು ಕೋಟಿ
ಮಾನವಂತರು ಏರಬೇಕು
ಶ್ರೀನಿವಾಸನ ಕರೆಯ ಬರಲು ೪

ಮುತ್ತು ಮಾಣಿಕ ರತ್ನ ಬಿಗಿದ
ಹೆಚ್ಚಿನ ರಥಗಳು ವಾಜಿ
ಮಿತ್ರೆಯರಿಂದ ಬರತಾರಮ್ಮ
ನಮ್ಮ ಅಚ್ಯುತನ ಕರೆಯ ಬರಲು ೫

ಏಳು ಕೋಟಿ ಕಾಲಾಳುಗಳು
ಭಾಳ ಮುತ್ತಿನ ರತ್ನವಿಟ್ಟು
ತಾಳ ಮೇಳದಿ ನಿಂತಾರಮ್ಮ
ವ್ಯಾಳಾ ಶಯನನ ಕರೆಯ ಬರಲು ೬

ಸಾವಿರ ಬಂಡಿಯ ಮ್ಯಾಲೆ
ಹೇರಿ ಬುಕ್ಕಿಟ್ಟು ಗುಲಾಲು
ಸೂರ‍್ಯಾಡಿ ರಂಗನ ಕರೆಯಲು
ವೀರರೈವರು ಬರುತಾರಮ್ಮ ೭

ಕೊಲ್ಹಾರಿ ಬಂಡಿಯ ಮ್ಯಾಲೆ
ಮಲ್ಲಿಗೆ ಸಂಪಿಗೆ ಹೇರಿ
ಚೆಲ್ಲಾಡಿ ರಂಗನ ಕರೆಯ
ಬಲ್ಲಿದ ಐವರು ಬರುತಾರಮ್ಮ ೮

ಮದ್ದು ಬಾಣ ಬಿರುಸು ಕೋಟಿ
ಶೀಘ್ರವಾಗಿ ನಿಂತಾವಮ್ಮ
ಮುದ್ದು ರಂಗನ ಕರೆಯ ಬರಲು
ಮಧ್ವ ಮತದ ಬಿರುದು ಹಿಡಿಸಿ ೯

ಬಿಡವೋ ಬಾಣ ಬಿರುಸು ಕೋಟಿ
ಕಡು ಭಾಗವತರು ಕೋಟಿ
ಷಟಶಾಸ್ತ್ರ ಬಲ್ಲವರು ಕೋಟಿ
ಒಡೆಯ ರಂಗನ ಕರೆಯ ಬರಲು ೧೦

ತಂದೆ ರಾಮೇಶನ ಗುಣವ
ಬಂಧುಗಳು ಹೊಗಳೋರು ಕೋಟಿ
ಅಂದು ಆರಣ ಬ್ರಾಹ್ಮಣ ಕ್ರಮ
ಜಟಿ ಬಂದು ಕರೆವೊ ದ್ವಿಜರು ಕೋಟಿ ೧೧

## ೧೭೫

ಬರುವ ಸಂದಣಿ ಭಾಳೆ ಭಾಳವೆ
ಅಲ್ಲಿ ರಂಭೆ ಊರ್ವಶಿಯರ ಸಮ್ಮೇಳವೆ ಪ.

ವರಗಿರಿ ವಾಸನ ಕರೆಯ ಬರುವ ಸೊಬಗು
ಧರೆಯ ಮ್ಯಾಲಿಲ್ಲ ಸುಂದರಿಯೆ ರುಕ್ಮಿಣಿಯೆ ೧

ಪಾಂಚಾಲಿ ಮೊದಲಾದ ಕೆಂಚೆಯರ ಆಭರಣವು
ಮಿಂಚಿನಂತೆ ಹೊಳೆಯುತ ಸಿದ್ಧರಾಗಿಹರಮ್ಮ ಚಂಚಲೆಯರು ೨

ಕಾಲಿಂದಿ ಮೊದಲಾದವರು ಭಾಳ ವಸ್ತಗಳಿಟ್ಟು
ವೈಯಾರಿಯರು ಒಲಿಯುತ ವ್ಯಾಳಾಶಯನನ ಬಳಿಗೆ ೩

ಭದ್ರೆ ಮೊದಲಾದವರು ತಿದ್ದಿ ತಳಪಿಟ್ಟು ಶುದ್ಧ ವಸ್ತಗಳಿಟ್ಟು
ಸಿದ್ಧರಾಗಿಹರಮ್ಮ ಅನಿರುದ್ದನ ಕರೆಯಲು ೪

ಮಂದಗಮನೆಯರು ಗಂಧಕಸ್ತೂರಿ ಪುಷ್ಪ
ಅಂದಾಗಿ ಧರಿಸಿ ಆನಂದವಾಗಿಹರಮ್ಮ ೫

ಕಾಲಂದುಗೆಗೆಜ್ಜೆ ತೋಳಲೆ ತಾಯಿತ
ಭಾರಿ ವಸ್ತಗಳಿಟ್ಟು ಲೋಲ್ಯಾಡುತಿಹರಮ್ಮ ೬

ಅಚ್ಚಮುತ್ತಿನ ವಸ್ತ ಸ್ವಚ್ಚತೋರುವಂತೆ
ಬಿಚ್ಚಿ ಚಾದರ ಹೊತ್ತು ಮಚ್ಚನೇತ್ರಿಯರೆಲ್ಲ ೭

ಅಂದುಗೆ ಅರಳೆಲೆ ಬಿಂದುಲಿ ಭಾಪುರಿ
ಕಂದರಿಗೊಸ್ತಗಳಿಟ್ಟು ಆನಂದವಾಗಿಹರಮ್ಮ ೮

ಮುತ್ತಿನ ಝಲ್ಲೆ ವಸ್ತಗಳಿಟ್ಟು
ಫುಲ್ಲನಾಭನ ಕರೆಯಲು ಎಲ್ಲರೂನಿಂತಾರೆ ೯

ಶ್ರೇಷ್ಠ ರಾಮೇಶನ ಅಷ್ಟೊಂದು ಕರೆಯಲು
ಪಟ್ಟಾವಳಿಗಳನುಟ್ಟು ಧಿಟ್ಟೆಯರು ನಿಂತಾರೆ ೧೦

## ೧೭೬

ಥಟ್ಟನೆ ನಿಂತನು ರಾಯ
ಬಿಟ್ಟು ಸಿಂಹಾಸನ ಇಟ್ಟು ದ್ವಾರದಿ ಹೆಜ್ಜೆ ಪ.

ಸಭೆಯ ದ್ವಾರದಲೆ ವಿಬುಧ ಸಹಿತಾಗಿ
ಅಭಯ ಜನಕೆ ಕೊಟ್ಟು ನಭದ ಸೂರ್ಯನಂತೆ ೧

ಮಾರನೈಯನ ದಯ ಅಪಾರವಾಗಲೆಂದು
ಬಾರಿ ಬಾರಿಗೆ ದ್ರವ್ಯ ಸೂರಿ ಮಾಡುತಲಾಗ ೨

ವಾಯುದೇವರ ದಯ ಸೋಸಿಲೆ ನಮಗೆಂದು
ಸಾಸಿರ ಅರ್ಬುದ ದ್ರವ್ಯ ಆಸಮಯದಲೆ ಕೊಟ್ಟ ೩

ಲಕ್ಷ್ಮಿದಯ ನಮಗೆ ಅಕ್ಷಯ ಇರಲೆಂದು
ಲಕ್ಷಕೋಟಿ ದ್ರವ್ಯ ಆಕ್ಷಣದಲಿ ಕೊಟ್ಟ ೪

ಬಲರಾಮ ನಮಗಿನ್ನು ಸುಲಭವಾಗಲೆಂದು
ಬಲುಬಲುದ್ರವ್ಯ ಮೇಲೆ ಮೇಲೆ ಕೊಟ್ಟು ೫

ಎಷ್ಟೆಷ್ಟು ಕಾಲಕ್ಕೆ ಕೃಷ್ಣನೆ ದೊರೆ ಎಂದು
ಶ್ರೇಷ್ಠದ ಭೇರಿಯ ಘಟ್ಯಾಗಿ ಹೊಯಿಸುತ ೬

ಹಿಂದೆ ಮುದದಿಂದ ಬಂದ ರಾಮೇಶನು
ತಂದೆ ಬೊಮ್ಮಗೆ ದುಂದುಭಿ ಹೊಯಿಸುತ ೭

## ೧೭೭

ಕುಂತಿಯ ಮಕ್ಕಳು ನಿಂತಾರು ದ್ವಾರದಿ
ಕಾಂತೆಯರುತುಂಬಿದ ನಗರಿಯಲಿ
ಎಂಥ ಸೊಗಸಮ್ಮ ಬಾಹೋದೆಂಥ ಸೊಗಸಮ್ಮ ಪ.

ಗಂಧ ಕಸ್ತೂರಿ ಧರಿಸಿರಾಯರು
ಚಂದಾಗಿ ನಿಂತಿರಲು ಮೇಲೆ
ಮಂದ ಮಾರುತ ಸುಳಿದು
ಪರಿಮಳ ತುಂಬಿದ ನಗರಿಯಲಿ ಎನುತ ೧

ರಾಶಿ ಮಲ್ಲಿಗೆ ಸಂಪಿಗೆ ಮುಡಿದು
ಸೋಸಿಲ್ಯೆವರು ಇರಲು ಮೇಲೆ
ಬೀಸಿ ಮಾರುತ ಪರಿಮಳ ತಂದು
ಸೂಸಿದ ನಗರಿಯಲಿ ಎನುತ ೨

ಮಿತಿ ಇಲ್ಲದೆ ಹಗಲು ಬತ್ತಿ
ಶತ ಕೋಟಿ ದೀವಟಿಗಿ ದೀಪ
ಅತಿಶಯ ಬೆಳಗೊ ನಗರಿಗೆ
ಪ್ರತಿಯಿಲ್ಲ ತಾಯಿ ೩

ಹಾದಿ ಬೀದಿ ದ್ವಾರ ಜಗಲಿ
ಹಂದರ ಅಂದದ ತೋರಣಗಳು
ಸಾದಿನಥಳಿ ಕೊಟ್ಟಾವಮ್ಮ
ಮಾಧವ ಬರಲಿಕ್ಕೆ ಎನುತ ೪

ಚಿತ್ರ ಬರೆದ ಮನೆಗಳ ಮುಂದೆ
ವಿಸ್ತರಿಸಿದ ರಂಗವಲ್ಲಿ
ಉತ್ತತ್ತಿ ಬಾಳೆಯ ಗಿಡಗಳು
ಜತ್ತಾಗಿ ತೋರುವವು ಎನುತ ೫

ಕೇರಿ ಕೇರಿ ನಾರಿಯರೆಲ್ಲ
ಸೀರೆ ಕುಪ್ಪಸ ವಸ್ತಗಳಿಟ್ಟು
ಏರಿ ಗೋಪುರ ಅಟ್ಟಾಲಗಳ
ವೀರರ ನೋಡಲು ಎನುತ ೬

ಎತ್ತೆತ್ತ ನೋಡಿದರೂ ಜನರು
ಮುತ್ತುರತ್ನದ ವಸ್ತಗಳಿಟ್ಟು
ಹತ್ತಿಗೋಪುರ ಅಟ್ಟಾಲಗಳ
ಧಿಟ್ಟೆಯರು ನಿಂತಾರೆ ಎನುತ ೭

ಅಲ್ಲಲ್ಲಿ ನಿಂತಿದ್ದು ಬಾಲೆಯರು
ಝಲ್ಲೆ ಮುತ್ತಿನ ವಸ್ತ್ರಗಳಿಟ್ಟು
ಅಲ್ಲೆಲ್ಲೆ ಉಪ್ಪರಿಗೆ ಏರಿ
ಚಲ್ವರ ನೋಡಲು ಎನುತ ೮

ಅಲ್ಲಲ್ಲೆ ತುಂಬಿದ ಜನರು
ಮಲ್ಲಿಗೆ ಸಂಪಿಗೆ ಫಲಗಳ ಹಿಡಿದು
ಚೆಲ್ಲಾಡಬೇಕೆಂದು ಐವರಿಗೆ
ಅಲ್ಲೇ ನಿಂತಾರೆ ಎನುತ ೯

ಕೃಷ್ಣರಾಯ ಪಾಂಡವರ
ಭೆಟ್ಟಿಯ ಸೌಭಾಗ್ಯ ನೋಡಿ
ಎಷ್ಟು ಹರುಷ ಬಟ್ಟೇವೆಂದು
ಧಿಟ್ಟೆಯರು ನಿಂತಾರೆ ಬೀದಿಲಿ ೧೦

ಮಹಲಮ್ಯಾಲೆ ನಿಂತು ಜನರು
ಸಾಲಾಗಿ ಆರತಿಯ ಹಿಡಿದು
ಶ್ರೀ ಲೋಲ ರಾಮೇಶನ ಭಕ್ತರು
ವಾಲಗೈಸೋರಮ್ಮ ಎನುತ ೧೧

## ೧೭೮

ಚೆಲ್ಲುತ ಹೆಜ್ಜೆನಿಕ್ಕುತ ನಮ್ಮ ಚಲುವ
ರಂಗನ ಮೇಲೆ ಚಲುವೆಯರು ಬುಕ್ಕಿಟ್ಟು ಪ.

ಸುಂದರೆಯರು ಇಂದಿರೇಶಗೆ ಎರಗಿ
ಬಂದು ಪ್ರಾರ್ಥನೆಮಾಡಿ ಆನಂದವ ಸೂಸುತ ೧

ತೋಳ ಬಂದಿಗಿಯಲಿ ವ್ಯಾಲಾಶಯನಗ
ಒಪ್ಪ ಹೇಳಿ ಪ್ರಾರ್ಥನೆಮಾಡಿ ಬಹಳ ಉತ್ಸುಕದಿಂದ ೨

ಮುಗುಳು ನಗೆಯ ನಕ್ಕುನಲ್ಲೆಯರು ಕೃಷ್ಣಗೆ
ಹಸ್ತಗಳ ಮುಗಿದು ಮಾತುಗಳನ್ನಾಡಿದರು ೩

ಹರದಿ ರುಕ್ಮಿಣಿ ಭಾವೆಗೆ ಎರಗಿ ದ್ರೌಪತಿ ಭದ್ರಾ
ಆದರದಿ ಮಾಡಿದರು ಪ್ರಾರ್ಥನೆ ಕರಗಳ ಮುಗಿದು ೪

ಚಲುವ ರಾಮೇಶನ ವಲ್ಲಭೆಯರಿಗೆ ಭದ್ರಾ
ಅಲ್ಲೆ ಪ್ರಾರ್ಥನೆ ಮಾಡಿ ಎಲ್ಲರ ಕರೆಯಲು ೫

## ೧೭೯

ಆರತಿ ಮಾಡುವರು ಜನರು
ಮಾರುತನ ಪಿತಗೆ
ಕೀರುತಿ ಕೊಂಡಾಡುತಲೆ
ದ್ವಾರಕೆಯ ಅರಸಗೆ ಪ.

ಸುರೂಪಿಸೀರೆಯನುಟ್ಟು
ಥೋರ ಮುತ್ತನೆ ಕಟ್ಟಿ
ತೇರಿನಾರುತಿಯ
ಮುರಾರಿಯ ಮುಂದೆತ್ತುವರು ೧

ರಂಜಿಸೊಸೀರೆಯನುಟ್ಟು
ಪಂಜರ ದ್ವಾಲೆನಿಟ್ಟು
ಕಂಜಾಕ್ಷ ಕೃಷ್ಣಗೆ
ನೀರಾಂಜನ ಎತ್ತಿದರು ೨

ನಾಲ್ಕು ಜನರ ದೃಷ್ಟಿ ಹರಿಗೆ
ತಾಕೀತೆಂದು ಕೆಲರು
ಓಕುಳಿ ನಿವಾಳಿಸುವರು
ಲೋಕನಾಯಕಗೆ ೩

ಕೃಷ್ಣರಾಯನ ಮುಖಕೆ
ದೃಷ್ಟಿ ನೆಟ್ಟೀತೆಂದು ಕೆಲರು
ಬಟ್ಟು ಮುತ್ತು ನಿವಾಳಿಸಿ
ಇಟ್ಟು ಕಸ್ತೂರಿ ಕಪ್ಪು ೪

ಮೇಲು ಮನೆಯು ಕದಳಿ ಕಂಬ
ಮ್ಯಾಲೆ ಹಂದರಗಳು
ಸಾಲು ಜಗಲಿ ತೋರಣ
ವಿಶಾಲ ಬೀದಿಯೊಳು ೫

ವ್ಯಾಳಾಶಯನಗೆ ನಿವಾಳಿಸಿ
ಬಾಳೆ ಹಣ್ಣು ಒಗೆದು
ನಾರಿಕೇಳ ನಿವಾಳಿಸಿ
ನಾಲ್ಕು ಕಡೆಗೆ ಒಗೆದು ೬

ಸಾವಿರ ಅಂಗಡಿಗಳು
ಸಾಲು ಬೀದಿಯೊಳು
ಶ್ರೀಲೋಲ ರಾಮೇಶನ ಭಕ್ತರು
ವಾಲೈಸುವರು ಹೀಗೆ ೭

## ೧೮೦

ಎಂಥ ಸೊಗಸು ನೋಡ
ಚಿಂತಾಮಣಿಯು ಬಂದ
ಇನ್ನೆಂತಹದೆ ಮುಯ್ಯ ಹರಿಣಾಕ್ಷಿ
ಬಂದು ಎಂಥ ಸೊಗಸಿಲೆ ಕುಳಿತಾರೆ ಪ.

ಕುಂತಿ ಅರಮನೆಯೊಳು ಕಾಂತೆರುಕ್ಮಿಣಿ ಭಾವೆ
ಚಂದ್ರ ಕಾಂತಿಯಿಂದೊಪ್ಪುತ ಕುಳಿತಾರೆ
ಕಾಂತಿಯಿಂದೊಪ್ಪುತ ಕುಳಿತಾರೆ ಪಾಂಡವರ
ಎಂಥ ಸುಕೃತವು ಫಲಿಸಿತು ೧

ಛತ್ರ ಹಿಡಿದವರೆಷ್ಟು ಚಾಮರ ಬೀಸುವರೆಷ್ಟು
ನರ್ತನ ಮಾಡುವವರೆಷ್ಟು
ನರ್ತನ ಮಾಡುವವರೆಷ್ಟು ಸಭೆಯೊಳು
ಕೀರ್ತನ ಮಾಡುವವರೆಷ್ಟು ೨

ಗಾಳಿ ಬೀಸುವವರೆಷ್ಟು ಬಹಳೇ ಹೊಗಳುವರೆಷ್ಟು
ಕೇಳೋ ರಾಮೇಶನ ಮಡದಿಯರ
ಕೇಳೋ ರಾಮೇಶನ ಮಡದಿಯರ ಮುಂದೆ ನಿಂತು
ಹೇಳಿ ಕೊಂಬುವವರೆಷ್ಟು ೩

## ೧೮೧

ಮೂರ್ಜಗದೊಡೆಯ ವಿರಾಜಿಸಿ ಕುಳಿತಿಹನು
ರಾಜ ರಾಜರ ಗಂಡ ರಾಜಗೋಪಾಲ ಪ.

ಚಿತ್ತಜನ್ನೈಯನು ಮುತ್ತಿನ ಗದ್ದುಗೆ ಮೇಲೆ
ಅರ್ಥಿಲೆ ಏರಿ ಕುಳಿತ ಮತ್ತೆ ಗೋಪಾಲ ೧

ಇಂದಿರೇಶನು ಬಹು ಚಂದಾಗಿ ಕುಳಿತಿಹನು
ಬಂದ ಜನರ ಸಹಿತ ತಂದೆ ಗೋಪಾಲ ೨

ಸರ್ಪಶಯನನ ಬದಿಯಲೊಪ್ಪುವ ಬಲರಾಮ
ವಿಪ್ರರಿಂದಲೆ ಕುಳಿತ ಅಪ್ಪ ಗೋಪಾಲ ೩

ಥಳ ಥಳ ಹೊಳೆಯುತ ಅಳಕಿಸಿ ಸೂರ್ಯನ
ಬೆಳಕು ತುಂಬಿಸಿ ತಾನು ಕುಳಿತ ಗೋಪಾಲ ೪

ಮುತ್ತು ಮಾಣಿಕ ನವರತ್ನ ಸಿಂಹಾಸನ
ಅರ್ಥಿಲೆ ಏರಿ ಕುಳಿತ ಮತ್ತೆ ಗೋಪಾಲ ೫

ನೃತ್ಯ ವಾದ್ಯಗಳಿಂದ ನರ್ತನ ಮಾಡಿಸಿ ಕುಳಿತ
ಕೀರ್ತಿವಂತನು ದಿವ್ಯ ಮೂರ್ತಿ ಗೋಪಾಲ ೬

ಬಂದ ಜನಕೆ ಆನಂದವ ಪಡಿಸುತ
ಚಂದ್ರನಂತಲೆ ಕುಳಿತ ಬಂದು ರಾಮೇಶ ೭

## ೧೮೨

ನಳಿನ ಮುಖಿ ಇಳೆಯಲಚ್ಚುತಗೆ ನಿಮಗೆ
ಹೊಳೆವೊ ಮಂದಿರವ ಪ.

ರಂಗಗೆ ರಚಿಸಿದ ಶೃಂಗಾರದ ವೈಕುಂಠ
ರಂಗು ಮಾಣಿಕದ ಅರಮನೆ
ರಂಗು ಮಾಣಿಕದ ಅರಮನೆ ರಂಗನ
ಮಂಗಳಾದೇವಿಯರು ಇಳಿಯಲಿ ೧

ವೀತದೋಷಗೆ ದಿವ್ಯ ಸೇತು ದ್ವೀಪವ ರಚಿಸಿ
ಜಾತಿ ಮಾಣಿಕದ ಅರಮನೆ
ಜಾತಿ ಮಾಣಿಕದ ಅರಮನೆ ರಂಗನ
ಪ್ರೀತಿ ಮಡದಿಯರು ಇಳಿಯಲಿ ೨

ಪನ್ನಂಗಶಯನಗೆ ಅನಂತಾಸನ ರಚಿಸಿ
ರನ್ನಮಾಣಿಕದ ಅರಮನೆ
ರನ್ನಮಾಣಿಕದ ಅರಮನೆ ರಂಗನ
ಪನ್ನಿಯರು ಬಂದು ಇಳಿಯಲಿ ೩

ಪಟ್ಟೆ ಮುತ್ತುಗಳ ಬಿಗಿದು ಇಟ್ಟಾವ ಕನ್ನಡಿ
ಧಿಟ್ಟ ತೋರೋದೆ ಜನಕೆಲ್ಲ
ಧಿಟ್ಟ ತೋರೋದೆ ಜನಕೆಲ್ಲ ಕೃಷ್ಣನ
ಅಷ್ಟು ಮಡದಿಯರು ಇಳಿಯಲಿ ೪

ಹಸಿರು ಪಚ್ಚವ ಬಿಗಿದ ಕುಸುರಾದ ಗಿಳಿಬೋದು
ಎಸಕೊ ಮಾಣಿಕದ ಅರಮನೆ
ಎಸಕೋ ಮಾಣಿಕದ ಅರಮನೆ
ದೇವಕಿ ವಸುದೇವ ಬಂದು ಇಳಿಯಲಿ ೫

ಮುತ್ತು ಮಾಣಿಕದಿಂದ ತೆತ್ತಿಸಿದ ಅರಮನೆ
ಜತ್ತು ತೋರುವುದು ಜನಕೆಲ್ಲ
ಜತ್ತು ತೋರುವುದು ಜನಕೆಲ್ಲ
ಸರಸ್ವತಿ ಮತ್ತೆ ಚತುರ್ಮುಖನು ಇಳಿಯಲಿ ೬

ಶುದ್ಧ ರತ್ನಗಳಿಂದ ತಿದ್ದಿ ಕಟ್ಟಿದರಮನೆ
ಎದ್ದು ತೋರುವುದು ಜನಕೆಲ್ಲ
ಎದ್ದು ತೋರುವುದು ಜನಕೆಲ್ಲ
ಪಾರ್ವತಿ ರುದ್ರಾದಿಗಳೆಲ್ಲ ಇಳಿಯಲಿ ೭

ಕುಂದಣ ರತ್ನಗಳಿಂದ ಹೊಂದಿ ಕಟ್ಟಿದರಮನೆ
ಅಂಬರಕೆ ಮ್ಯಾಲೆ ತುಳುಕುವ
ಅಂಬರಕೆ ಮ್ಯಾಲೆ ತುಳುಕುವ
ಶಚಿದೇವಿ ಇಂದ್ರಾದಿಗಳೆಲ್ಲ ಇಳಿಯಲಿ ೮

ಹಲವು ಮಾಣಿಕದಿಂದ ಬಲುಶೋಭೆ ತೋರುವ
ಬೆಲೆಯಿಲ್ಲದಂಥ ಅರಮನೆ
ಬೆಲೆಯಿಲ್ಲದಂಥ ಅರಮನೆ
ರೇವತಿ ಬಲರಾಮರು ಬಂದು ಇಳಿಯಲಿ ೯

ಒಂಭತ್ತು ಬಗೆ ರತ್ನ ತಂಬಿ ರಚಿಸಿದ ಮನೆ
ಅಂಬರಕೆ ಮೇಲೆ ತುಳುಕುವ
ಅಂಬರಕೆ ಮೇಲೆ ತುಳುಕುವ
ರತಿದೇವಿಸಾಂಬ ಪ್ರದ್ಯುಮ್ನರು ಇಳಿಯಲಿ ೧೦

ತಂದೆ ರಾಮೇಶನ ಒಂದೊಂದು ಮನೆ ಸೊಬಗು
ಚಂದ ತೋರುವುದು ಜನಕೆಲ್ಲ
ಚಂದ ತೋರುವುದು ಜನಕೆಲ್ಲ
ಭಾನು ಮಾನು ಬಂದ ಜನರೆಲ್ಲ ಇಳಿಯಲಿ ೧೧

## ೧೮೩

ಇಂಥ ಮದಕದ ಬಾಲೆಯನಾಳುವರೆಂಥ ಧನ್ಯರೆ
ಆಗಿನ್ನೆಂಥ ಕವತುಕ ಕಂಡೆ ಅಮ್ಮಿನ ಎಂಥ ಅಂಜಿದೆವೆ ಪ.

ಉತ್ತಮಳು ದ್ರೌಪತಿ ಎಂದು
ಮತ್ತೆ ಎರಗಲು ಹೋದೆನಮ್ಮ
ಹತ್ತು ಪಾದ ಕಂಡು
ಕಣ್ಣು ಕತ್ತಲೆ ಹೊಯ್ದಾವೆ ಅಮ್ಮಿನ ೧

ಪಂಚಭಕ್ಷ ಪರಮಾನ್ನವನು
ಪಾಂಚಾಲಿ ಉಣಬಡಿಸಿದಳೆನಗೆ
ಪಂಚ ಹಸ್ತ ಕಂಡು
ಮನದಲೆ ಚಂಚಲಗೈಯ್ದೆನೆ ೨

ಅತ್ಯಂತ ಪ್ರೇಮದಲಿ ದ್ರೌಪತಿ
ವಸ್ತ್ರವೀಳ್ಯ ಕೊಟ್ಟಾಳೆನಗೆ
ಹತ್ತು ಹಸ್ತ ಕಂಡು
ಮೈಯ ಮರೆತೆನೆ ನಾನು ೩

ಬಾರಿ ಬಾರಿಗೆ ಬೆದರಿಬೆಚ್ಚಿ
ನಾರಿಯ ನೋಡಿದೆನೆ ನಾನು
ಸೂರ್ಯನಂತೆ ಹೊಳೆವೊ
ಐದುಮಾರಿ ಕಂಡೆನೆ ೪

ಕೀರುತಿವಂತಳ ಮುಂದೆ
ವಾರ್ತೆಯ ಹೇಳುತಲಿದ್ದೆ
ಮಾರುತನ ರಾಣಿ
ಭಾರತಿಯು ಆದಳೆ ಅಮ್ಮಿನ್ ೫

ಶುಚಿರ್ಭೂತ ಗೌರಿಯ ಕಂಡು
ವಚನ ಪೇಳುತ ನಿಂತೆನಮ್ಮ
ರುಚಿರರೂಪ ಅಡಗಿ ಆಗ
ಶಚಿಯು ಆದಳೆ ಆಮ್ಮಿನ್ ೬

ಇಂದ್ರನರಸಿ ಅಡಗಿ ಶ್ಯಾಮಲೆ
ಬಂದು ನಿಂತಾಳಮ್ಮ ಕ್ಷಣದಿ
ಎಂದೂ ಕಾಣದ ಸೋಜಿಗ
ಒಂದೊಂದು ಕಂಡೆನೆ ಅಮ್ಮಿನ್ ೭

ನಿಂತ ಶ್ಯಾಮಲೆ ಅಡಗಿ ಉಷೆಯು
ಎಂಥ ಬೆಳಕನೆ ತೋರಿಸಿದಳಮ್ಮ
ಇಂಥ ಬೆಡಗು ರಾಮೇಶನ
ಕಾಂತೆ ಕೇಳಮ್ಮ ಅಮ್ಮಿನ್ ೮

## ೧೮೪

ಕಂಡು ಅಂಜುವರೇನ ದೂತೆ
ಪಾಂಡವರ ಅರಸಿಯ
ಭೂಮಂಡಲದ ಬಾಲೆಯರು
ಕಂಡರೆಂದು ಕೊಂಡಾಡಮ್ಮ ಪ.

ಉಮಾಶಚಿ ಶಾಮಲೆ ಉಷೆ
ಬೊಮ್ಮ ಶಪಿಸಲು ಅಂಜುತಲೆ
ಅಮ್ಮ ಭಾರತಿ ರತಿ
ಸಮ್ಮಿಸಿಟ್ಟಳಾ ದೇವತೆ ೧

ಇಂದು ಮಾರುತನ ರಾಣಿ
ಮುಂದಿನ ಕಲ್ಪದ ವಾಣಿ
ಸಂದೇಹ ಬ್ಯಾಡಮ್ಮ ಜಾಣೆ
ಇಂದರೇಶನ ಸೊಸೆಯು ಕಾಣೆ ೨

ಚಂದ್ರಕಾಳಿ ಇಂದ್ರಸೇನ ಬಂದು
ದ್ರೌಪತಿ ವಿಪ್ರಕನ್ಯ
ಒಂದೊಂದು ರೂಪಗಳೆ ರನ್ನ
ಚಂದ ಬಣ್ಣಿಪರಮ್ಮ ಆಕೆಯನ್ನು ೩

ಎಲ್ಲರ ನಡೆಒಂದೆ ಎಲ್ಲರ ನುಡಿ ಒಂದೆ
ದೇಹ ನಿಂದೆ ಎಲ್ಲರ
ಹೃದಯದಲಿ ನಿಂತ
ಎಲ್ಲರೊಲ್ಲಭನ ಹೊಂದು ೪

ಪರಮೇಷ್ಟಿ ಎಂಬ ದಾತಾ ಪರಮ
ಶಾಪ ಹೊಯ್ಸುತ ಶಿರಿರಾಮೇಶನ
ಭಕ್ತ ಮಾರುತ
ಸುಖ ಅವರಿಗಿತ್ತ ೫

## ೧೮೫

ಸುರನಾರಿಯರ ಮಹಿಮೆ
ಪರಿಪರಿ ಹೊಗಳುತ
ಬಿರುದಿನ ಕೋಲ
ಹೊಯಿದೇವ ಕೋಲ ಪ.

ಉಮಾದಿಗಳಿಗೆಲ್ಲ ಬೊಮ್ಮ ಹ್ಯಾಂಗ ಶಪಿಸಿದ
ಅಮ್ಮಾ ಇದು ಒಂದು ಕೌತುಕ ಕೋಲ
ಅಮ್ಮಾ ಇದು ಕೌತುಕ ಹೇಳೆಂದ
ಝುಮ್ಮನೆ ದೂತೆ ನುಡಿದಳು ಕೋಲ ೧

ಭಾರತಿ ದೇಹದಲ್ಲಿ ಸೇರಿದರ್ಹಾಂಗಮ್ಮ
ಪಾರ್ವತಿದೇವಿ ಮೊದಲಾದ ಕೋಲ
ಪಾರ್ವತಿದೇವಿ ಮೊದಲಾದ ಕೆಲದಿಯರು
ನಾರಿರುಕ್ಮಿಣಿ ಎನಗ್ಹೇಳ ಕೋಲ ೨

ಪಾಂಚಾಲಿದೇವಿ ತಾನು ಪಂಚಪಾಂಡವರ ಕೂಡಿ
ಕೆಂಚಿ ತಾ ಹ್ಯಾಂಗ ರಮಿಸೋಳು ಕೋಲ
ಕೆಂಚಿ ತಾ ಹ್ಯಾಂಗ ರಮಿಸೋಳು
ಮಹಿಮೆಯ ಕಿಂಚಿತ್ತಾಗಿ ಎನಗ್ಹೇಳ ಕೋಲ ೩

ಇಂದು ಮುಖಿಯರ ಜನ ಚಂದಾಗಿ ಹೇಳಮ್ಮ
ಸಂದೇಹ ಬ್ಯಾಡ ಎನಕೂಡ ಕೋಲ
ಸಂದೇಹ ಬ್ಯಾಡ ಎನಕೂಡ ಅದ ಕೇಳಿ
ಆನಂದವ ಬಡುವೆ ಅನುಗಾಲ ಕೋಲ ೪

ಮತ್ತೆ ರಾಮೇಶನ ಅತ್ಯಂತ ಭಕ್ತಳ
ಉತ್ತಮ ಕಥೆಯ ಎನಗ್ಹೇಳ ಕೋಲ
ಉತ್ತಮ ಕಥೆಯ ಎನಗ್ಹೇಳ ಹರುಷದಿ
ಬಿತ್ತಿ ಬೆಳೆದೇವ ಧರೆ ಮ್ಯಾಲೆ ಕೋಲ ೫

## ೧೮೬

ದೂತೆ ಕೇಳ ದ್ರೌಪತಿಯ ಖ್ಯಾತಿ ಕೇಳಿದ ಮನುಜರಿಗೆ
ಪಾತಕ ದೂರಾಗೊದೆಂಬೋ ಮಾತು ನಿಜವಮ್ಮ ಪ.

ಉಮಾಶಚಿ ಶಾಮಲಾ ಉಷೆ ತಮ್ಮ ಪತಿಗಳ ಬೆರೆದು ರಮಿಸೆ
ಬೊಮ್ಮ ಕಂಡುಕೋಪಿಸಿ ಶಾಪ ಝುಮ್ಮನೆ ಕೊಟ್ಟಾನು ೧

ಪರಮ ಮದದ ಬಾಲೆಯರಿವರು ಪರ
ಪುರುಷನ ಬೆರೆಯಲ್ಯಾಂಗೆ
ನರದೇಹ ಬರಲೆಂದು ಬೊಮ್ಮಗೆ ನಾಲ್ವರು ನುಡಿದರು ೨

ಚಂದಾಗಿ ನಾಲ್ವರ ದೇಹ ಒಂದೇ ಮಾಡಿ ತೋರೆ ಬೊಮ್ಮಗ
ಬಂದವು ಮೂರು ನರದೇಹಗಳ ಲೊಂದಾಗಿರಲೆಂದು ೩

ತಪ್ಪು ನಮ್ಮದೆಂದು ಶಾಪ ಒಪ್ಪಿಕೊಂಡು ನಾಲ್ವರು
ಜಪಿಸಿ ಸಾವಿರ ವರುಷ ಗೌಪ್ಯದಿ ಭಾರತಿಯ ೪

ಬಂದು ಮೊರೆಯ ಪೊಕ್ಕವರ ಚಂದಾಗಿ ದೇಹದಲ್ಲಿಟ್ಟು
ಅನಂದದಿಂದ ವಿಪ್ರಕನ್ಯೆ ಎಂದು ಜನಿಸಿದಳು ೫

ಎಲ್ಲರ ಕರ್ಮ ಒಂದಾಗಿ ಎಲ್ಲೆಲ್ಲೆ ಭಿನ್ನ ತೋರದ್ಹಾಂಗೆ
ಫುಲ್ಲನಾಭನ ದಯವ ಪಡೆದಳು ಅಲ್ಲೆ ಆ ಬಾಲೆ ೬

ಮುದ್ಗಲ ನೆಂತೆಂಬೊ ಋಷಿಯು ಬಿದ್ದು ನಕ್ಕ ಬ್ರಹ್ಮನ ಕಂಡು
ಮುದ್ದು ಮಗಳ ರಮಿಸಿದಾತಗೆ ಬುದ್ಧಿಯಿಲ್ಲವೆಂದು ೭

ತ್ವರೆಯಿಂದ ಬೊಮ್ಮ ಮುನಿಗೆ ಬೆರಿಯೆ ಭಾರತಿಯ ಕಂಡು
ಕರವ ಮುಗಿದು ಎರಗಿ ಮುನಿಯು ಮೊರೆಯ ಹೊಕ್ಕಾನು ೮

ಮಾರುತನ ದೇಹದಲ್ಲೆ ಭಾರತಿಯು ರಮಿಸುವಾಗ
ಹಾರಿತಯ್ಯ ಸ್ಮೃತಿಯು ಸುಖವು ತೋರದು ನಮಗಿನ್ನು ೯

ಮಂದಗಮನೆಯರಿಂದ ಭಾರತಿ ಇಂದ್ರ ಸೇನಳಾಗಿ ಜನಿಸೆ
ಬಂದ ಮರುತ ದೇಹದ ಮುನಿಯು ಚಂದದಿ ಮದುವ್ಯಾದ ೧೦

ಮರುತ ಅಕೆಯಿಂದ ರಮಿಸ ಮಾರುತದೇಹದ ಮುನಿಯು ಏನು
ಗುರುತು ಇಲ್ಲಧಾಂಗೆ ಆತ ಇರುತಲಿದ್ದನು ೧೧

ಬಾಲೆಯ ಸಂತೋಷ ಪಡಿಸಿ ಮೂಲ ರೂಪ ಕಂಡುವಾಯು
ಮ್ಯಾಲ ವನಕೆ ನಡೆದ ಮುನಿಯು ಆ ಕಾಲದಲೆಚ್ಚತ್ತು ೧೨

ಇಂದ್ರಸೇನ ಬಂದು ಆಗ ಇಂದಿರೇಶನದಯವ ಪಡೆಯೆ
ನಂದಿವಾಹನ ನಮ್ಮ ಪತಿಯ ವಂದಿಸೆಂದಾರು ೧೩

ಪತಿಯ ಬಯಸಿದ ಬಾಲೆಯರಿಗೆ ಚತುರ್ವಾಹ ನುಡಿದನು ಶಿವನು
ಅತಿಶಯ ರೋದನವ ಮಾಡೆ ಮಿತಿ ಇಲ್ಲದಲೆ ಅಂಜಿ ೧೪

ಮಂದಗಮನೆಯ ಧ್ವನಿಯಕೇಳಿ ಬಂದ ಇಂದ್ರ ಬಹಳದಯದಿ
ಬಂದಿತೆನಗೆ ಇಂಥ ಕ್ಲೇಶ ಎಂದು ನುಡಿದಳು ೧೫

ಬಂದು ವರವ ಬೇಡಿ ಪತಿಗಳ ಹೊಂದಿರೆಂದು ನಾಲ್ಕುಬಾರಿ
ಬಂದಿತೆಮಗೆ ಇಂಥ ಕ್ಲೇಶ ಎಂದು ನುಡಿದಳು ೧೬

ಇಂಥ ಅನ್ಯಾಯ ಯಾಕೆಂದು ನಿಂತ ಒಟುಗೆ ನುಡಿದ ಇಂದ್ರ
ಭ್ರಾಂತ ನರನ ನಿಂದೆ ಶಚಿಯ ಕಾಂತೆಗೆ ಶಿವನು ೧೭

ನಾನು ಸೃಷ್ಟಿ ಮಾಡಿದವನು ನೀನು ಏನು ನುಡಿದ ಶಿವನು
ಮಾನವನಾಗೊ ಬೊಮ್ಮಗ ತಾನು ಆತಗೆ ೧೮

ಉಮಾ ಮೊದಲಾದವರಿಗೆಲ್ಲ ತಮ್ಮ ಪತಿಗಳ ಹೊಂದಿರೆಂದ
ಉಮಾ ನಿಮ್ಮ ಬೆರಿಯ ಬ್ಯಾಡ ಸುಮ್ಮನೆ ಹೋಗೆಂದ ೧೯

ಎತ್ತು ಗಿರಿಯ ಕೆಳಗ ಇದ್ದ ಮತ್ತ ನಾಲ್ವರ ನೋಡೆ
ಸತ್ತ ಎಂದು ತಿಳಿಯೋ ನಿನ್ನ ಚಿತ್ತಕತಾ ಎಂದು ೨೦

ಕೇಳಿದ ಬೊಮ್ಮನ ನುಡಿಯು ತಾಳಿದ ಬಾಲಿಯರು ಬೆರೆದು
ಬಹಳ ಪ್ರೇಮದಿಂದ ಭಾರತಿ ಇಳಿದಳು ಬಂದು ೨೧

ರಾಮೇಶನ ಕ್ಲುಪ್ತ ತಿಳಿದು ಭೀಮಸೇನನಾದ ವಾಯು
ಕಾಮಿನಿಯರ ಸಹಿತ ದ್ರೌಪತಿ ಪ್ರೇಮದಿ ಜನಿಸಿದಳು ೨೨

## ೧೮೭

ಎತ್ತಿರೆ ಕೋಲ ಅರ್ಥಿಲೆ
ಕೆಲದೆಯರು ಸತ್ಯ ಕನ್ಯಳೆ ದ್ರೌಪತಿ ಎಂದು ಪ.

ಮತ್ತೆ ಅಭಿಮಾನಿಯೆಂದು ನಿತ್ಯ ಉತ್ಪತ್ತಿಯೆಂದು
ಸತ್ಯ ಕನ್ಯಳೆ ದ್ರೌಪತಿಯೆಂದು ೧

ಒಂದೇ ಮಂದಿರದಲ್ಲಿ ಪೊಂದಿದ್ದ ಜನರಂತೆ
ಅವರಿಂದ ಹೊರಗಾಗುವಳೆ ಜಾಣೆ ೨

ಧರ್ಮ ಶ್ಯಾಮಲೆ ಬೆರಿಯೆ ಅಮ್ಮ ದ್ರೌಪತಾದೇವಿ
ಸುಮ್ಮನಿಹಳೇ ಬಾರೆ ನೀರೆ ೩

ವನಜಾಕ್ಷಿ ಭೀಮ ಬರಲು ತನುಮನ ಸೂರೆಗೊಂಡು
ಘನ ಮಹಿಮನ ಬೆರೆಯೋಳೆ ೪

ಅರ್ಜುನ ಶಚಿಯು ಬೆರಿಯೆ ನಿರ್ಜರೋತ್ತಮಳು ತಾನು
ವರ್ಜಿಸಿ ಸುಖವ ದೂರಾಗಿಹೋಳು ೫

ಮತ್ತೆ ಸಹದೇವ ನಕುಲ ಪತ್ನಿಯ ಬೆರೆಯಲು
ಪ್ರತ್ಯಕ್ಷ ಇಹಳು ಚತುರಳು ೬

ಕಾಂತ ರಮಣನು ಕೇಳಿ ಸಂತೊಷ ಬಡಲು ಭಾಗ್ಯ
ಸಂತಾನ ಕೊಡುವ ರಮಿ ಅರಸು ೭

## ೧೮೮

ನಿತ್ಯ ಅಂಗ ಸಂಗ ಕೊಟ್ಟನೆ ದೇವಿ
ಚಿತ್ತ ಹರುಷವ ಮಾಡಿ ಇಟ್ಟನ ಪ.

ಶಾಂತ ಧರ್ಮನಲ್ಲೆ ನಿಂತಾನೆ
ನಿಜ ಕಾಂತೆ ರಮಿಸಿ ಸುಖವಂತನೆ ೧

ಭೀಮ ಕಾಮಿಸಿಯನ್ನ ಬೆರೆದಾನು
ಅತೀವಾನಂಗ ಸುಖ ಸುರಿದಾನೆ ೨

ವೀರ ಪಾರ್ಥನಲ್ಲೆ ಇರುವೋನು
ನಿಜ ನಾರಿಯ ರಮಿಸಿ ಸುಖಿಸುತಿಹನು ೩

ಸುಂದರ ನಕುಲ ನಲ್ಲಿರುವೋನೆ
ಲೇಶಕುಂದು ಇಲ್ಲದವಳ ಬೆರೆಯೋನು ೪

ನೀತಿಲೆ ಸಹದೇವನಲ್ಲಿದ್ದ
ನಿಜ ಪ್ರೀತಿ ಬಡಿಸಿದ ನಾರಿಗೆ ಮುದ್ದ ೫

ಭೀಮನ ಮಹಿಮೆ ಕೇಳುತಲಿದ್ದ
ಜನ ಕಾಮಪೂರ್ಣರಾಗಿ ಹರಿಸಿದ ೬

ಮತ್ತೆ ಭೀಮ ದ್ರೌಪತಿ ರತಿ ಇದಕೆ ನಿತ್ಯ
ರಾಮೇಶ ಆಗುವ ಬಹು ಪ್ರೀತಿ ೭

## ೧೮೯

ಎಷ್ಟು ಸುಕೃತದಿಂದ ಕಂಡಿಯೆ
ಮನೋಭಿಷ್ಟಗಳನೆ ಪಡೆದುಕೊಂಡಿಯೆ ದೂತೆ ಪ.

ಪಾದ ನೋಡಲು ಅತಿ ಪಾವನ
ಹಾಂಗೆ ಮೋದಭರಿತಳು ನೀ ಆದೆನೆ ದೂತೆ
ಸಾಧು ಜನರು ನಿನ್ನ ಸ್ವಾಧೀನ
ನಮ್ಮ ಮಾಧವ ಅನುದಿನ ಅಧೀನ ದೂತೆ ೧

ಕೆಂಚಿಹಸ್ತವ ನೀನು ಕಂಡಿಯೆ ಹ್ಯಾಂಗೆ
ಸಂಚಿತಾಗಾಮಿ ಕಳಕೊಂಡೆಯೆ
ದೂತೆ ಪಾಂಚಾಲಿದಯವ ಪಡಕೊಂಡಿಯೆ
ನಿನ್ನ ವಾಂಚಿತಾರ್ಥವ ಕೈಕೊಂಡಿಯೆ ದೂತೆ ೨

ಮುಖವ ನೋಡಲು ನಿಜ ಮುಕ್ತಿಯ ಹಾಗೆ
ಭಕ್ತಿ ಜ್ಞಾನವು ವಿರಕ್ತಿಯೆ ದೂತೆ
ದಿವ್ಯ ಪ್ರಕೃತಿಯ ಗೆಲುವಂಥ ಶಕ್ತಿಯ
ನಮ್ಮ ಲಕುಮಿ ರಾಮೇಶ ಒಲಿಯೆ ಮುಕ್ತಿಯೆ ದೂತೆ ೩

## ೧೯೦

ಕಂಡೆ ಗುಣಗಣ ಸಾಂದ್ರಳ
ಕೈಕೊಂಡೆ ಮುಕ್ತಿ ಫಲಗಳ ಪ.

ಶೃತಿ ತತಿಗಳಿಂದ ಯುಕ್ತಳ
ಲಕ್ಷ್ಮೀಪತಿಯ ದಯಕೆ ಪೂರ್ಣ ಪಾತ್ರಳ
ಅತಿ ಭಕ್ತಿಯಿಂದ ಯುಕ್ತಳ
ಮಧ್ವಮತಕ ಹಿತದಿಂದ ವ್ಯಾಪ್ತಳ ೧

ವ್ಯಾಳಾಶಯನನ ಭಕ್ತಳ ಗುಣ
ಹೇಳಿದೆಮ್ಮ ಸುಶಕ್ತಳೆ
ಏಳು ಲೋಕದಿ ವ್ಯಾಪ್ತಳ
ಕರುಣಾಳು ಎನಿಸುತಿಪ್ಪಳ ೨

ರಮಿಯ ರೂಪಳೆ ರುಕ್ಮಿಣಿಯ
ದಿವ್ಯ ಪ್ರಮೇಯ ತಿಳಿಸಿದೆ ಭಾಮಿನಿ
ಅಮಿತ ಮಹಿಮಳೆ ಕಾಮಿನಿ
ನಮಗೆ ಸುಮತಿದಾತಳೆ ಸುಗುಣಿ ನೀ ೩

## ೧೯೧

ರಾಜ ರಾಜರ ನೋಡ ಅಮ್ಮಯ್ಯ
ಕೋಟಿ ತೇಜರು ನಿಂತಿಹರಮ್ಮಯ್ಯ ಪ.

ಕುಂತಿ ಮಕ್ಕಳ ನೋಡ ಅಮ್ಮಯ್ಯ
ಚಂದ್ರ ಕಾಂತಿಯಿಂದೊಪ್ಪುತ ಅಮ್ಮಯ್ಯ
ನಿಂತ ಸೊಬಗು ನೋಡ ಅಮ್ಮಯ್ಯ
ಲಕ್ಷ್ಮೀಕಾಂತನ ಇದುರಿಗೆ ಅಮ್ಮಯ್ಯ ೧

ಪಾಂಡವರ ನೋಡ ಅಮ್ಮಯ್ಯ
ಸೂರ್ಯ ಮಂಡಲದಂತಿಹರ ಅಮ್ಮಯ್ಯ
ದುಂಡಾಗಿ ನಿಂತಿಹರಮ್ಮಯ್ಯ
ಅವರ ಕೊಂಡಾಡಲ್ವಶವಲ್ಲ ಅಮ್ಮಯ್ಯ ೨

ಶಶಿಮುಖಿಯರ ನೋಡ ಅಮ್ಮಯ್ಯ
ಕಾಂತೆ ದೇಶಲೆಲ್ಲ ಬೆಳಕು ನೋಡ ಅಮ್ಮಯ್ಯ
ಹಸುಳೆಯರು ನಿಂತಿಹರಮ್ಮಯ್ಯ
ನಮ್ಮ ಕುಸುಮನಾಭನ ಮುಂದೆ ಅಮ್ಮಯ್ಯ ೩

ಕಡು ಚಲುವೆಯರ ನೋಡಮ್ಮಯ್ಯ
ನಿಂತ ಉಡುರಾಜ ಮುಖಿಯರಮ್ಮಯ್ಯ
ಕಡಲಶಯನನ ಮುಂದೆ ಅಮ್ಮಯ್ಯ
ಅವರ ಬೆಡಗು ಎಷ್ಟು ಹೇಳಲಮ್ಮಯ್ಯ ೪

ಲಕ್ಷಣವಂತರಮ್ಮಯ್ಯ
ನಿಂತು ನಕ್ಷತ್ರ ಮಾಲೆಯಂತೆ ಅಮ್ಮಯ್ಯ
ವೀಕ್ಷಿಸಿ ರಾಮೇಶನ ಅಮ್ಮಯ್ಯ
ಸುಖ ಅಕ್ಷಯ ಪಡೆದಿಹರಮ್ಮಯ್ಯ ೫

## ೧೯೨

ನಿಲ್ಲಿಸಬೇಕೊ ಯಾದವರ ಹೊಲ್ಲಗುಣದವರ
ನಿಲ್ಲಿಸಬೇಕೊ ಇವರ ಬಿಲ್ಲಿಗೆ ಅಂಜದವರ
ಗೊಲ್ಲರು ನಮ್ಮ ಸರಿ ಅಲ್ಲವೊ ಧರ್ಮರಾಯ ಪ.

ಒಡೆಯ ಧರ್ಮನು ಸರಿಯ ಅಡಿಗೆರಗುವೆನೆಂದ
ನಡೆದು ಹೋಗಲುರಾಯ ತಡೆಯಬೇಕೆಂದ ಭೀಮ ೧

ಕಂಜನಾಭನ ಮನೆಯ ಎಂಜಲು ಬಳೆವವನ
ರಂಜಿಸಿ ಕರೆಯಬ್ಯಾಡ ಅಂಜಿಕೆ ಏನು ಅವನ ೨

ಪಾರ್ಥನು ರಾಯಗೆ ಪಾರ್ಥಿಸಿ ಹೇಳಿಕೊಂಡ
ಸಾರಥಿಯ ಕರೆಯೋದು ಕೀರ್ತಿ ಅಲ್ಲವೊರಾಯ ೩

ನಕುಲನುರಾಯಗೆ ಯುಕ್ತಿಲೆ ಹೇಳಿಕೊಂಡ
ಸಖನಯ್ಯನ ಕುಶಲವು ಮುಖವ ಮಾಡಿದವನಲ್ಲೊ ೪

ಕೇಳಯ್ಯ ರಮಿ ಅರಸು ಗಾಳಿಸಿ ಬಯಸಿಕೊಂಡ
ಬಹಳ ಮನ್ನಿಸ ಬ್ಯಾಡ ಹೇಳಿಕೊಂಡ ಸಹದೇವ ೫

## ೧೯೩

ಭಕ್ತವತ್ಸಲ ಬಂದು ಬಾಗಿಲಲಿ ನಿಂತು
ಎತ್ತ ಹೋದನೆಂದು ಧಿಗಿಲು ಎನುತ
ಮತ್ಯಾಕೆ ಬರಲಿಲ್ಲವೊ ಅರ್ಜುನರಾಯ ಪ.

ವೀರರಾಯರ ಸೇವೆ ಪರಿಪರಿ ಮಾಡಿದ್ದು
ಮರೆತುಕೊಂಡು ಧರ್ಮ ದೊರೆಯಾಗಿ ಕುಳಿತ ೧

ಪಾಂಚಾಲಿ ರಮಣನು ಪಂಚ ಪಗಡೆಯನಾಡಿ
ವಂಚನೆ ಮಾಡದೆ ಹಂಚಿಕೆಯಲಿಕುಳಿತ ೨

ಧಿಟ್ಟ ಭೀಮರಾಯ ಹುಟ್ಟು ಬಚ್ಚಿಟ್ಟುಕೊಂಡು
ಸಿಟ್ಟಿಲಿಂದ ಮೈ ಮುಟಿಗ್ಯಾಗಿ ಕುಳಿತ ೩

ಪುಂಡ ಭೀಮರಾಯ ಮಂಡಿ ಕೆದರಿಕೊಂಡು
ಖಂಡಗನ್ನವ ಉಂಡು ದಿಂಡೆನ್ವಾಂಗ ಕುಳಿತ ೪

ಚಲ್ವ ಅರ್ಜುನರಾಯ ಬಿಲ್ಲು ಮೂಲೆಗೆ ಇಟ್ಟು
ಒಲ್ಲಿಯ ಮುಸುಕು ಹಾಕಿ ಎಲ್ಲೋ ಹೋಗಿ ಕುಳಿತ ೫

ಹೆಚ್ಚಿನ ಗಾಂಡೀವ ಬಚ್ಚಿಟ್ಟು ಕೋಣ್ಯಾಗೆ
ಹುಚ್ಚನ್ವಾಂಗೆ ಮಾರಿ ಮುಚ್ಚಿಕೊಂಡು ಕುಳಿತ ೬

ಚದುರ ನಕುಲರಾಯ ಎದುರಿಗೆ ಬಾರದೆ
ಹೆದರಿಕೊಂಡು ತಾನು ಕುದುರೆ ಮನೆಯ ಹೊಕ್ಕ ೭

ಧನವೆತ್ತಿಸಹದೇವ ಘನ ವಿದ್ಯಾನರಿಯದೆ
ದನಕರುಗಳನ್ನೆಲ್ಲ ಅನುಸರಿಸಿ ಇರುವ ೮

ಪಾಂಡವರೆ ಶ್ರೇಷ್ಠರು ಧೈರ್ಯವೆ ಇರಲೆಂದು
ಶೌರಿ ಕುರುರಾಯಗೆ ತಾ ನುಡಿದನು ೯

ಇಷ್ಟೂರು ಹರಿಗಂಜಿ ಬಿಟ್ಟರು ಕೈಕಾಲು
ಧಿಟ್ಟ ಬಲರಾಮ ತಾ ಘಟ್ಯಾಗಿ ಕೈ ಹೊಯಿದನು ೧೦

ಇಷ್ಟೊಂದು ಗಾಬರಿ ದಿಟ್ಟೆಯರೆ ಆಗದಿರಿ
ಕೊಟ್ಟನು ಅಭಯ ದಿಟ್ಟ ರಾಮೇಶ ೧೧

## ೧೯೪

ನಮ್ಮ ಬಿಲ್ಲು ಕಂಡು ಬಹಳ ಭೀತಿ ಪಡುವ
ಕೃಷ್ಣ ನಿಲ್ಲಲಿ ತಾಸು ನಿಲ್ಲಲಿ ಪ.

ವೀರನೆ ಯುದ್ಧಕ್ಕೆ ಬಾರೆಂದು ಕರೆದರೆ
ನೀರೊಳಗೆ ಚರಿಸುವ ಮಾರಿ ಸಣ್ಣದು ಮಾಡಿ ೧

ಶರವ ಧರಿಸಿ ನಮ್ಮ ಸರಿಗೆ ಬಾ ಎಂದರೆ
ಕರಕರ ಹಲ್ಲು ತಿಂದು ತೆರೆವ ತನ್ನ ಉರಿಬಾಯಿ ೨

ದೊರೆತನ ಕಳಕೊಂಡು ತಿರುಕತನದಿ ತಾಯಿಯ
ಕರಕರ ಬಡಿಸುವ ಮರುಕು ಇಷ್ಟ ಇವಗ್ಯಾಕ ೩

ಅಜಗಳ ಪುರುಷನೆ ನಿಜನಾರಿ ಕಳಕೊಂಡು
ಗಜಗಮನೆಯರಿಗೆಲ್ಲ ನಿಜಪತಿ ನಾನೆಂದು ೪

ಬರಿಯ ಬತ್ತಲೆ ಪುರುಷ ಸರಿಯಲ್ಲ ನಮಗಿವ
ಸಿರಿ ರಮಿ ಅರಸಗೆ ಈ ತುರುಗ ತಂಬಟಿಯಾಕ ೫

# ೧೯೫

ಓಡಿ ಹೋಗುವರೇನೊ ಜಾಣ ಪಾರ್ಥ
ನೋಡಿ ಬಲ್ಲೆವೊ ನಿಮ್ಮ ತ್ರಾಣ ಪ.

ಹೆಣ್ಣುತನದಿ ಒಳಗೆ ಸೇರಿದಿ
ನಮ್ಮ ಕಣ್ಣಿಗೆ ಬೀಳದೆ ಹಾರಿದಿ
ಬಣ್ಣವ ಬಹಳ ಬಹಳ ತೋರಿದಿ
ನಮ್ಮಣ್ಣ ಬಲರಾಮನ ಇದುರಿಗೆ ಬಾರದೆ ೧

ಹೊಳೆವು ಎಷ್ಟು ಹೇಳಲೊ ನಿನ್ನ
ಶೌರ್ಯ ತಿಳಿದೀತು ಘನ ಮಹಿಮನ ಘನ
ಬಳೆಯ ನಿಟ್ಟಿದ್ದು ಮುನ್ನ
ಇಂಥ ಅಳಿಯ ದೊರೆತೆಲ್ಲೊರನ್ನ ೨

ಗಂಡಸಲ್ಲವೊ ಇಂಥ ಬಾಳು ನಿನಗೆ
ಗಾಂಡೀವಿಯಾತಕೆ ಹೇಳೊ
ಷಂಡನೆಂದರೆ ಇಂಥ ಬಾಳುವೆ
ನಾಚಿಕೊಂಡು ಬರಲಿಲ್ಲೇನೊ ಹೇಳೊ ೩

ಬಿಲ್ಲು ಕಂಡರೆ ನಿನಗೆ ಭೀತಿಯೆ
ಒಳ್ಳೆ ಚಲುವೆಯರ ಮ್ಯಾಲೆ ಅತಿ ಪ್ರೀತಿಯೊ
ನಲ್ಲ ಹೀನಳ ಬೆರೆದ ಖ್ಯಾತಿಯೊ
ಅದಕೆ ಇಲ್ಲೆ ಬರಲಿಲ್ಲಿಯೋ ಸೋತು ೪

ಏನು ಹೇಳಲಿ ಇಂಥ ನಿಂದ್ಯವ
ನಿನಗೆ ಮಾನಿನಿ ಹೆರಳೇನು ಚಂದ
ಧೇನಿಸಿ ನೋಡಲು ಕುಂದ
ಹಾಗೆ ತಾನು ರಾಮೇಶ ಅಂದ ೫

## ೧೯೬

ಕಂಡು ಅಂಜಿದೆವಯ್ಯ ವೆಂಕಟ
ನಿನ್ನ ಕಂಡು ಅಂಜಿದೆವಯ್ಯ
ಪುಂಡರಿಕಾಕ್ಷ ನಿನ್ನ ಸೊಂಡಿಲ ಮಾರಿ
ಸಾಲದೆ ವದನವ ಪ.

ಅಚ್ಯುತ ನಿನಗುಣ ಸ್ವಚ್ಚವೆಂದು ಬರಲು
ಮಚ್ಚ ಕೂರ್ಮ ಅತಿ ಹುಚ್ಚುರೂಪಗಳು ೧

ಮುರಲಿಧರ ನಿನಗೆ ಎರಗಲು ಬಂದರೆ
ಕ್ವಾರಿದಾಡಿಲುರಿಬಾಯಿ ತೆರೆದದ್ದು ನಾವು ೨

ಸುರತನೆಂದು ನಾವು ನಿರುತಲಿ ಬಂದರೆ
ತಿರಕ ಕೊಡಲಿ ಎತ್ತಿ ಕರಕರ ಬಡಿಸುವ ೩

ಕೊಂಡಾಡೊ ಗುಣವಿಲ್ಲ ಹೆಂಡತಿಯನೆ ಒಲ್ಲಿ
ಬಂಡಿ ಮುರಿದು ಅತಿದಿಂಡೆ ಪುರುಷನ ೪

ಉತ್ತಮನೆ ರಮಿಯರಸು ಬತ್ತಲಿದ್ದ ಮ್ಯಾಲೆ
ಹತ್ತಿ ಕುದುರೆ ಕತ್ತಿ ಸುತ್ತ ಬೀಸುವನ ೫

## ೧೯೭

ಕೌತುಕ ಲಕುಮಿನಾಥನು ಒಲಿದದ್ದು
ಭೂತಳದೊಳಗಂಜೋದ್ಯಾತರ ಮಾತಿದು ಪ.

ವೇದ ತಂದಾತನ ಪಾದವ ನೋಡಿ ನೋಡಿ
ಮೋದ ಬಟ್ಟನು ಬೊಮ್ಮ ಮಾಧವ ಅಂಜಿದ್ದು ೧

ಮಂದಾರ ಗಿರಿಎತ್ತಿ ತಂದ ಅಮೃತವನ್ನು
ಆನಂದ ಬಟ್ಟನು ಬೊಮ್ಮ ಇಂದ್ರೈವರು ಅಂಜಿದ್ದು ೨

ಧರಣಿ ತಂದಾತನ ವರಹಾ ಸುರರರಿಗೆ ಸುಖವಿತ್ತು
ದೊರೆ ಧರ್ಮನ ಕಂಡು ಪರಮ ಭೀತನಾದ ೩

ನರಸಿಂಹ ದೈತ್ಯನ ವಧಿಸಿಬಿಟ್ಟನೆಂದು
ಹರುಷವಾದನು ಬೊಮ್ಮ ಅರಸ ಅಂಜಿದ್ದು ೪

ವಾಮನ ರೂಪಕ್ಕೆ ಕಾಮ ಮೋಹಿತರಾಗಿ
ಶಾಮ ವರ್ಣನ ಕಂಡು ಭೀಮ ಭೀತನಾದ ೫

ಜ್ಞಾನಿಗಳು ಭಾರ್ಗವನ ಧೇನಿಸಿ ನಮಿಸೋರು ಏನೆಂಬೆ
ಪಾರ್ಥನು ತಾ ನೋಡಿ ಅಂಜಿದ್ದು ೬

ಚಲ್ವರಾಯನ ಗುಣ ಎಲ್ಲ ಮೋಹಿಸಬೇಕು
ನಲ್ಲಿ ದ್ರೌಪತಿದೇವಿಯ ವಲ್ಲಭರಂಜಿದ್ದು ೭

ಕೃಷ್ಣಾವತಾರಗೆ ಎಷ್ಟು ಮೋಹಿಸುವವರು
ಧಿಟ್ಟ ನಕುಲರಾಯ ಇಷ್ಟೊಂದು ಅಂಜಿದ್ದು ೮

ಬೌದ್ಧನ್ನ ಧೇನಿಸಿ ಸಿದ್ಧಿ ಪಡೆದವರೆಷ್ಟು
ರುದ್ರಾದಿ ವಂದ್ಯಗೆ ಬುದ್ದಿವಂತರು ಬೆದರ ೯

ಚಲುವ ರಂಗಯ್ಯನು ಕುದುರೆ ಏರಿ ಬರಲು
ಬುದ್ಧರು ನಮಿಸುವರು ಹೆದರ ಸಹದೇವನು ೧೦

ತಂದೆ ರಾಮೇಶನ ಕೊಂಡಾಡೊ ಗುಣವಿಲ್ಲ
ಪುಂಡರಿಕಾಕ್ಷಗೆ ಪಾಂಡವ ರಂಜಿಸಿದ್ದು ೧೧

## ೧೯೮

ಸಂಶಯವಾಯಿತೋ ನಮಗೆ
ಸಂಶಯವಾಯಿತೊ
ಕಂಸಾರಿ ನಿನಗೆ ಎರಗ ಬರಲು
ಹಂಸರೂಪ ಕಂಡು ಬೆದರಿ ಪ.

ಮದನ ಜನಕ ನಿನಗೆ ನಾವು
ಮುದದಿ ಎರಗ ಬರಲು ಬ್ಯಾಗ
ಕುದುರೆ ರೂಪ ಕಂಡು ನಮಗೆ
ಹೆದರಿಕೆ ಬಾಹೋದು ಕೃಷ್ಣ ೧

ಪ್ರದ್ಯುಮ್ನ ನಿನಗೆ ಎರಗಿ ನಾವು
ಸಿದ್ಧಿ ಪಡೆದೇವೆಂದು ಬರಲು
ಅರ್ಧನಾರಿ ರೂಪವ ಕಂಡು
ಗಡಗಡ ನಡುಗಿದೆವೊ ಕೃಷ್ಣ ೨

ಚಲ್ವ ರಾಮೇಶಗೆ ಎರಗಿ
ಕಲಿಯ ಕಿಲ್ಬಿಷ ಕಳೆದೆವೆಂದರೆ
ಶಿಲೆಯ ಹೆಣ್ಣು ಮಾಡಿದ್ದು ಕಂಡು
ಬಲುಬಲು ಅಂಜಿದೆವೊ ಕೃಷ್ಣ ೩

## ೧೯೯

ಒಂದು ಸಂಜೀವಿನಿ
ಕಿತ್ತಿ ತಂದ ಕಾಲದಲೆ
ಅಂಜಿಕೆ ಎಲ್ಲಡಗಿತ್ತೋ ಭೀಮ ಪ.

ಬೆಳೆದ ಬಾಲಕೆ ಖಳರು ಇಕ್ಕಲು ಬೆಂಕಿ
ಲಂಕೆಯಬೆಳಗಿ ಬಂದ
ಪುರುಷ ಬಿಡು ನಿನ್ನ ಸೋಂಗು ೧

ಹೊಡೆದು ಹಿಡಿಂಬೆಯ ಮಡುಹಿದ ಕಾಲಕ್ಕೆ
ಅಡಗಿತ್ತೆಲ್ಲೋ ಭೀತಿ
ಬಿಡು ನಿನ್ನ ಸೋಂಗು ೨

ಹೆದರಿಕಿದ್ದರೆ ಒಬ್ಬನೆ ಬದರಿಕಾಶ್ರಮಕೆ ಹೋಗಿ
ಚದುರ ರಾಮೇಶನ
ಪಾದಗಳಿಗೆರಗೊ ೩

## ೨೦೦

ನಿಂದ್ಯನಾಡಲಿಕ್ಕೆ ನೀನು ಬಂದೆಯೇನಯ್ಯ ಕೃಷ್ಣ
ವಂದಿಸಿ ಭಕ್ತರು ಕರೆದರೂ ನೀನು ಹಿಂದಕ್ಕೆ ಹೋಗುವಿ ಪ.

ಅಂದು ಅಹಲ್ಯಾದೇವಿ ಬಿಟ್ಟು ಒಂದೆರಡು ದಿವಸ ಕೃಷ್ಣ
ಬಂದವನಲ್ಲೋ ತ್ವರೆಯ
ಛಂದಾಗಿ ಹೇಳಯ್ಯ ನಮಗೆ ೧

ಒಂದಾರು ತಿಂಗಳದಿವಸ ಕಂದ ದಣಿಯೆ ಕರುಣಿಸಬಾರದೆ
ಬಂದದ್ದೇನು ಇಂಥ ತ್ವರೆಯ
ಚಂದಾಗಿ ಹೇಳಯ್ಯ ನಮಗೆ ೨

ಹಣ್ಣು ಹಸಿರು ಎಲೆ ತಿಂದು ಸಣ್ಣ ಮಾಡಿ ಶರೀರವನು
ಬಣ್ಣಿಸಿ ಭಕ್ತರು ಕರೆದರೆ
ನೀನು ಕಣ್ಣಿಲೆ ನೋಡೆಲೋ ಅವರ ೩

ಆನೆ ಜನ್ಮ ಬಂದು ರಾಯ ನಾನಾ ದುಃಖ ಬಡಲು ತಾನು
ನೀನು ಮುಂದೆ ನೋಡಿದೆ ಸಾವಿರ ವರುಷ ಇನ್ನೇನು
ದಯವಯ್ಯ ಅವನಿಗಿನ್ನೇನು ದಯವಯ್ಯ ೪

ತಂದೆ ರಾಮೇಶನ ಮನೆಗೆ ಬಂದಿದ್ದರೆ ಬಹಳ ದಯವು
ಒಂದು ನೆಗಳಿ ಸಾವಿರ ವರುಷ
ಹಿಂದಕ್ಕೆ ದಣಿದೆಲ್ಲೊ ಕೃಷ್ಣ ೫

## ೨೦೧

ಭಿಕ್ಷೆ ಬೇಡಿದವರು ರಾಜ್ಯ ರಕ್ಷಿಸ ಬಲ್ಲವರಲ್ಲ
ಭಕ್ಷಿಸಿರೊ ಬಂಡಿ ತುಂಬ ಭಕ್ಷ್ಯ ತುಪ್ಪವೆಲ್ಲ ಪ.

ಹಿಂದೆ ಧರ್ಮರಾಯ ರಾಜ್ಯ ಎಂದೂ ಕಂಡವನಲ್ಲ
ಅಂದು ಕರಡಿ ಕುಲದವನಂತೆಂದು ರಾಯ ಬಲ್ಲ ೧

ಮಾತಿಲೆ ಜಾಣನು ಭೀಮ ಮಾತು ಮಾಯಾವಿಯಲ್ಲ
ಖ್ಯಾತಿ ಹೇಳಲು ಒಂದು ಕೋತಿ ಕುಲದವನಲ್ಲ ೨

ಮ್ಯಾಲೆ ಗರವಿನ ಪಾರ್ಥನಿಗೆ ವಾಲಿಯೆಂಬೊ ಕೋತಿ
ಮ್ಯಾಲೆ ತಮ್ಮನ ಮಡದಿಯ ಕೆಡಸಿದ ಏನು ಹೇಳಲಿ ಖ್ಯಾತಿ ೩

ಆತ ನಕುಲ ಸಹದೇವ ಬಲು ಕುಲಖ್ಯಾತಿಯ ಕೋತಿಗಳು
ಕುದುರೆ ಜಾತಿಯಲ್ಲಿ ಜನಿಸಿದ ಮ್ಯಾಲಿನ್ಯಾತರ ದೊರೆಗಳು ೪

ಅಕ್ಕ ಸಿಂಹಾಸನಕೆ ಇವರು ತಕ್ಕ ಪುರುಷರಲ್ಲ
ನಕ್ಕಿಹನು ರಾಮೇಶ ಇದಕೆ ಮಿಕ್ಕ ರಾಯರೂ ಎಲ್ಲ ೫

## ೨೦೨

ಇವ ಬಲು ಕಳ್ಳ ನಮ್ಮ ಮಾಧವ ಬಲು ಸುಳ್ಳ
ನವನವ ಗುಣಗಳ ಹಿಡಿಸಿದನ್ವಳ್ಳ ಪ.

ನಿತ್ಯ ತೃಪ್ತನೆಂಬೊ ಸ್ತುತ್ಯಾರ್ಥ ನಿನ್ನ ಬಿಟ್ಟು
ಎತ್ತ ಹೋದವಯ್ಯ ನಮಗ್ಹೇಳೊ ಯದುಪತಿ

ಎತ್ತ ಹೋದವಯ್ಯ ನಮಗ್ಹೇಳೊ ಯದುಪತಿ
ತುತ್ತನ್ನ ನಿನಗೆ ಘನವೇನೊ ಯದುಪತಿ ೧

ಮುನ್ನಶಬರಿ ಎಂಜಲ ಪನ್ನಿ ಪಾವನ್ನೊ ನಿನಗೆ
ಅನಸ್ತಾವೆಂಬೊ ಶೃತಿಗಳು ಯದುಪತಿ
ಅನಸ್ತಾವೆಂಬೊ ಶೃತಿಗಳು ಹೊಗಳುತ ನಿನ್ನಲ್ಲೆ
ಹ್ಯಾಂಗ ಇರಬೇಕೊ ಯದುಪತಿ ೨

ಪಟ್ಟದ ರಾಣಿ ಲಕುಮಿ ಎಷ್ಟು ಗುಣವಂತಳಲ್ಲೊ
ಅಷ್ಟು ಭಾವದಲೆ ಚಲುವಳೊ ಯದುಪತಿ
ಅಷ್ಟು ಭಾವದಲೆ ಚಲುವಳೊಕುಬ್ಜಿಯಂಥ
ಸೊಟ್ಟ ಹೆಣ್ಣಿಗ್ಯಾಕೆ ಮನಸೋತ್ಯೊ ಯದುಪತಿ ೩

ಎಷ್ಟು ಸೃಷ್ಟಿಯ ಮಾಡಿಪುಟ್ಟ ಲವಕುಶರ ಪಡೆದಿ
ಸೃಷ್ಟಿ ಮಾಡಿದ್ದು ಮರೆತೆನೊ ಯದುಪತಿ
ಸೃಷ್ಟಿ ಮಾಡಿದ್ದು ಮರೆತೆನೊ ನಾಭಿಯಲ್ಲಿ
ಪುಟ್ಟಿದ ಬೊಮ್ಮನಗುತಾನೊ ಯದುಪತಿ ೪

ರುದ್ರನ ಭಜನೆ ಮಾಡಿ ಪ್ರದ್ಯುಮ್ನನ ಪಡೆದಿ
ವಿದ್ವಜ್ಜನರೆಲ್ಲ ನಗುತಾರೊ ಯದುಪತಿ
ವಿದ್ವಜ್ಜನರೆಲ್ಲ ನಗುತಾರೊ ಶ್ರೀಧ ಶ್ರೀಧ
ವಿದ್ಯವನೆಲ್ಲ ಮರೆತೇನೋ ಯದುಪತಿ ೫

ಸ್ವರಮಣ ನೀನೆಂಬೊ ಸ್ವರ ಗೈವ ಶೃತಿಗಳು
ಹರಿದಾವೇನೊ ಜಲದೊಳು
ಹರಿದಾವೇನೊ ಜಲದೊಳು ಗೊಲ್ಲತಿಯರ ಬೆರೆದ
ಕಾರಣವ ನಮಗೆ ಹೇಳೊ ಯದುಪತಿ ೬

ಧೀರ ಗಂಭೀರನೆಂದು ಸಾರುವ ಶೃತಿಗಳು
ಹಾರಿದವೇನೊ ಮುಗಿಲಿಗೆ

ಹಾರಿದವೇನೊ ಮುಗಿಲಿಗೆ ರಮಿಯರಸು
ಪೋರತನವೆಂದು ನಗತಾರೊ ಯದುಪತಿ ೭

## ೨೦೩

ಜೋಗಿ ಪಾರ್ಥ ನೀನಾದೆ ಬಹು ಭೋಗಿ
ಕುರುರಾಯರ ಮಾಡಿದ ಹೆಸರೆಲ್ಲನೀಗಿ ಪ.

ಚಿತ್ರ ಕುಸುಮೆಯರ ಬೆರದಿ
ಇಂಥ ಉತ್ತಮ ಸತಿಯರ ಅತ್ಯಂತ ಮರೆತಿ
ಸತ್ಯ ವಾಕ್ಯಗಳೆಲ್ಲ ತೊರೆದಿ
ಇದಕೆ ಹತ್ತೂರು ನಗಲು ಕೋಪವೆ ಭರದಿ ೧

ನೀತಿಯಿಲ್ಲವೊ ನಿನ್ನದೊಂದು
ದೇವ ಜಾತಿಗೆ ಉತ್ತಮನೆಂದು ಖ್ಯಾತಿಯೊ ನಿಂದು
ಕಪೋತನ ತಿಂದವನೆಂದು
ಒಂದು ಮಾತು ಹೇಳಲು ಅತಿ ಕೋಪವೆ ಬಂದು ೨

ಅತ್ಯಂತ ನಿಷ್ಕರುಣಿ ನೀನು
ದೇಹ ಕಿತ್ತು ಕೊಟ್ಟನಾಗ ಶಿಬಿರಾಯ ತಾನು
ತೃಪ್ತನಾಗದಿರೊ ನೀನು
ಇದಕೆ ಅತ್ಯಂತ ನಕ್ಕ ರಮೇಶ ತಾನು ೩

## ೨೦೪

ಎಷ್ಟು ಬಡಿವಾರೊ ನಿನ್ನ
ಶ್ರೇಷ್ಠ ಸುಖಪೂರ್ಣ ಘನ್ನ
ಅಷ್ಟ ಗುಣವನು
ಅತಿಗಳದ್ಯೊ ಯಾದವರನ್ನ ಪ.

ಕುಕ್ಷಿಲೋಕನೆ ನಿನಗೆ ರಕ್ಷೆ ಇಟ್ಟಾಳೊ ಗೋಪಿ
ವಕ್ಷ ಸ್ಥಳದಲ್ಲಿಹ ಲಕುಮಿಯು
ವಕ್ಷ ಸ್ಥಳದಲ್ಲಿಹ ಲಕುಮಿಯು
ಬೆರಗಾಗಿ ವೀಕ್ಷಿಸುತಲಿ ನಗತಾಳೊ ೧

ಅಂಧಕಾರದಿ ಜಲವೃಂದದಿ ಮುಡುಕಿಸಿ
ಒಂದೇ ಕೂಸಲ್ಲೊ ಪ್ರಳಯದಿ
ಒಂದೇ ಕೂಸಲ್ಲೊ ಪ್ರಳಯದಿ ರಕ್ಷವ
ತಂದು ಇಟ್ಟವರು ನಿನಗಾರೊ ೨

ಪುಟ್ಟ ಕೂಸೆಂದು ಸ್ತನ ಕೊಟ್ಟ ನಾರಿಯ ಕೊಂದೆ
ಇಷ್ಟು ಕರುಣೆ ನಿನಗಿಲ್ಲೊ
ಇಷ್ಟು ಕರುಣೆ ನಿನಗಿಲ್ಲೊ ದಯಾಬುದ್ಧಿ
ಕೆಟ್ಟು ಹೋಯಿತೇನೊ ಪ್ರಳಯದಿ ೩

ಕೃಷ್ಣ ಕೃಷ್ಣ ಎನುತ ಬಿಟ್ಟಳು ಪ್ರಾಣವ
ದೃಷ್ಟಿಗೆ ಬೀಳೋದು ತಡವೇನೊ
ದೃಷ್ಟಿಗೆ ಬೀಳೋದು ತಡವೇನೊ ನಿನ್ನ
ವ್ಯಾಪ್ತಿ ಕೆಟ್ಟು ಹೋಯಿತೇನೊ ಪ್ರಳಯದಿ ೪

ಮಂದಮತಿಯರ ಗಂಡ ಮುಂದಕ್ಕೆ ಬಿಡಲೊಲ್ಲ
ಇಂದಿರಾ ಪತಿಯೆ ಗತಿಯೆಂದ
ಇಂದಿರಾ ಪತಿಯೆ ಗತಿಯೆಂದ ಭಕ್ತಳ
ಕೊಂದೆಯಲ್ಲೊ ಪಾಪ ಬರಲಿಲ್ಲ ೫

ಕಡಲಶಾಯಿ ನಿನ್ನ ಬೆಡಗು ಎಷ್ಟು ಹೇಳಲಿ
ಹಿಡ ಹಿಡಿದು ಲಾಳಿ ಕೊಡುವಾಗ
ಹಿಡ ಹಿಡಿದು ಲಾಳಿ ಕೊಡುವಾಗ ಗೊಲ್ಲರ
ಹುಡುಗರಿಗಿಂತ ಕಡೆಯೇನೊ ೬

ವೀರ ರಾಮೇಶ ನಿನ್ನ ಚಾರು ಗುಣಗಳನೆಲ್ಲ
ಸೂರಿ ಬಿಟ್ಟೇನೊ ಸುರರಿಗೆ
ಸೂರಿ ಬಿಟ್ಟೇನೊ ಸುರರಿಗೆ ನಿನಗಿನ್ನು
ಯಾರೂ ಮನ್ನಿಸದ ಪರಿಯಂತ ೭

## ೨೦೫

ಕೃಷ್ಣ ಇನ್ಯಾತರ ಶ್ರೇಷ್ಠನೆ
ಸ್ತನ ಕೊಟ್ಟ ನಾರಿಯ ಕೊಂದು ಬಿಟ್ಟಾನೆ ಪ.

ಅರ್ಜುನ ಯಾತರ ಭಂಟನೆ
ನಿರ್ಲಜ್ಯದಿ ಧನುಷ್ಯ ಕೆಳಗಿಟ್ಟಾನೆ ಅ.ಪ.

ಏನೇನೂ ಧೈರ್ಯವಿಲ್ಲವೊ ಕೃಷ್ಣಗೆ
ಬಲು ಮೀನಿನಂತ ಚಂಚಲವೊ ೧

ಇಷ್ಟು ಎದೆಗಾರನಲ್ಲವೊ ಪಾರ್ಥ
ಯುದ್ಧ ಬಿಟ್ಟರೆ ನಗುವರಲ್ಲವೊ ೨

ಸೊಲ್ಲು ಸಾಲವ ಕೊಡುವೊನಲ್ಲವೊ
ದೊಡ್ಡ ಕಲ್ಲು ಹೊರಿಸಲು ನಾಚಿಕೆ ಇಲ್ಲವೊ ೩

ಹೆಣ್ಣು ಬಾಳ್ವೆ ಬಲು ಹೊಲ್ಲೊ
ಹರಡು ಸಣ್ಣವಲ್ಲವೊ ನಿನಗಲ್ಲವೊ ೪

ತಲೆದೂಗೊ ಲಕ್ಷಣ ಹೊಲ್ಲವೊ
ಅತಿ ಮಲೆತು ನಡೆವ ಬುದ್ಧಿ ಅಲ್ಲವೊ ೫

ವೇಷಗಾರಿಕೆ ಬಲು ಹೊಲ್ಲವೊ
ವಿಶೇಷ ಪರಾಕ್ರಮ ಅಲ್ಲವೊ ಅರ್ಜುನ ೬

ಬಿರಿಗಣ್ಣು ಲಕ್ಷಣ ಹೊಲ್ಲವೊ
ದೊಡ್ಡ ಉರಿ ಮಾರಿ ಪುರುಷನಲ್ಲವೊ ೭

ಮರುಳುತನ ಬಲು ಹೊಲ್ಲವೊ
ಮಕ್ಕಳ ಕೊರಳು ಕೊಯ್ದರೆ ನಾಚಿಕೆ ಇಲ್ಲವೊ ಅರ್ಜುನ ೮

ತಿರುಕತನ ಬಲು ಹೊಲ್ಲವೊ
ಅತಿ ಹರಕ ನೀ ಪುರುಷನಲ್ಲವೊ ಕೃಷ್ಣ ೯

ಚೋರತನದಿಂದ ಬಲು ಕೆಟ್ಯೊ
ನಿನ್ನ ಧೀರತನವ ತೋರಿಸಿ ಬಿಟ್ಯೊ ೧೦

ಕೊಡಲಿಗಡುಕತನ ಹೊಲ್ಲವೊ
ಛಲ ಹಿಡಿದರೆ ಬಿಡುವನಲ್ಲವೊ ಕೃಷ್ಣ ೧೧

ಅಹಲ್ಯದೇವಿಯ ಕೆಡಿಸಿದನೆಂದು
ಬಹು ಭೋಳೆ ಬುದ್ಧಿಹೇಳಲೊ ನಿಂದು ಅರ್ಜುನ ೧೨

ನಾರಿಯ ಒಬ್ಬಗೆ ಒಪ್ಪಿಸಿಕೊಟ್ಯೊ
ನೀ ಊರು ಕೇರಿ ಹಂಬಲ ಬಿಟ್ಯೊ ಕೃಷ್ಣ ೧೩

ವೈರಾಗ್ಯವ ತೋರಿಕೊಂಡೆಲ್ಲೊ
ನಾಗನಾರಿಯ ಕೂಡಿಕೊಂಡೆಲ್ಲೊ ಪಾರ್ಥ ೧೪

ಪೋರತನವು ಬಲು ಅಲ್ಲವೊ ಕೃಷ್ಣ
ನಿನ್ನ ಜಾರತನವ ಬಿಡಲ್ಲಿವೊ ೧೫

ದಾರಿದ್ರ್ಯತನ ಬಲು ಹೊಲ್ಲವೊ
ದೊಡ್ಡ ವೀರನೆಂಬೊ ಗರವು ಅಲ್ಲವೊ ಅರ್ಜುನ ೧೬

ಅನ್ನವಸ್ತ್ರವು ನಿನಗಿಲ್ಲವೊ
ಬಹು ಮಾನ್ಯನೆಂಬೊ ಗರವು ಅಲ್ಲವೊ ಕೃಷ್ಣ ೧೭

ರಾಜ ಲಕ್ಷಣ ನಿನಗಿಲ್ಲವೊ
ರೂಪ ಮಾಜುಕೊಂಡ ಬುದ್ಧಿ ಅಲ್ಲವೊ ಅರ್ಜುನ ೧೮

ದ್ವಂದ್ವ ಯುದ್ಧವ ಮಾಡಿದವನಲ್ಲವೊ
ಕುದುರೆ ಚಂದಾಗಿ ಏರಿ ಓಡಲು ಬಲ್ಯೊ ಕೃಷ್ಣ ೧೯

ಕರೆದರೆ ಯುದ್ಧಕ್ಕೆ ಹ್ಯಾಗೆಂದು
ನೀನುತಿರುಗಿದಿ ತೀರ್ಥಯಾತ್ರೆಗಳೆಂದು ಅರ್ಜುನ ೨೦

ಕೃಷ್ಣ ಅರ್ಜುನರ ಈ ಸಂವಾದ
ಸಂತುಷ್ಟ ರಾಮೇಶ ಕೊಡುವ ಮೋದ ೨೧

## ೨೦೬

ಒಳ್ಳೆವೀರನೆಂಬೊ ಮಾತು ಸುಳ್ಳು ಕೃಷ್ಣರಾಯ
ಮೈಗಳ್ಳನೆಂದು ಕರೆಯೋರಲ್ಲೊ ಅಜರ್ಯನರಾಯ ಪ.

ವೀರ ಮಾಗಧ ಯುದ್ಧಕ್ಕೆ ಬಾರೆಂದು ಕರೆಯಲು ಅಂಜಿ
ನೀರೊಳಗೆ ಹೋಗಿ ಅಡಗಿದೆಯಲ್ಲೊ ಶ್ರೀಕೃಷ್ಣರಾಯ ೧

ಯುದ್ಧ ಮಾಡುವೆನೆಂದು ಸನ್ನದ್ದನಾಗಿ ಬಂದು ಅಂಜಿ
ಗುದ್ದು ಹೊಕ್ಕೆಯಲ್ಲೊ ನೀನು ಅರ್ಜುನರಾಯ ೨

ಜರಿಯ ಸುತನು ಯುದ್ದದಲ್ಲಿ ಕರಿಯೆ ಅಂಜಿಕೊಂಡು ನೀನು
ಗಿರಿಯಮರೆಯಲ್ಲಡಗಿದೆಲ್ಲೊ ಶ್ರೀ ಕೃಷ್ಣರಾಯ ೩

ಬಿಂಕದಿಂದ ಬಾಣ ಧರಿಸಿ ಶಂಕಿಸದೆ ಅಂಜಿ ಬಂದು
ಮಂಕು ಮನುಜರಂತೆ ನಿಂತ್ಯೊ ಅರ್ಜುನರಾಯ ೪

ದೊರೆಯು ಮಾಗದ ಯುದ್ದಕ್ಕೆ ಬಾರೆಂದು ಕರೆದರೆ ಅಂಜಿ
ವರಾಹನಾಗಿ ಓಡಿದೆಲ್ಲೊ ಶ್ರೀ ಕೃಷ್ಣರಾಯ ೫

ಪೊಡವಿರಾಯರೆಲ್ಲ ಒಂದಾಗಿ ಬಿಡದೆ ಯುದ್ಧಮಾಡೆನೆಂಬೊ
ಬಡಿವಾರವು ಎಷ್ಟು ನಿನಗೆ ಅರ್ಜುನರಾಯ ೬

ಬಿಲ್ಲು ಧರಿಸಿ ಮಾಗಧನು ಬಿಲ್ಲಿಗೆ ಬಾ ಎಂದು ಕರಿಯೆ
ಹಲ್ಲು ತೆರೆದು ಹೆದರಿಕೊಂಡ್ಯೊ ಶ್ರೀಕೃಷ್ಣರಾಯ ೭

ಸಿಟ್ಟಿನಿಂದ ಕರ್ಣ ಬಾಣ ಬಿಟ್ಟನಯ್ಯ ನಿನ್ನ ಮ್ಯಾಲೆ
ಕೊಟ್ಟಿಯಲ್ಲೊ ಮುಕುಟವನ್ನು ಅರ್ಜುನರಾಯ ೮

ಹಲವುರಾಯರೆಲ್ಲ ನಿನ್ನ ನೆಲಿಯುಗಾಣದಂತೆ ಮಾಡೆ
ಬಲಿಯ ಹೋಗಿ ಬೇಡಿದೆಲ್ಲೊ ಶ್ರೀ ಕೃಷ್ಣರಾಯ ೯

ಕರ್ಣನ ಬಾಣವು ನಿನ್ನ ಹರಣ ಮಾಡಲೆಂದು ಬರಲು
ಮರಣ ತಪ್ಪಿಸಿದೆನಲ್ಲೊ ನಾನು ಅರ್ಜುನರಾಯ ೧೦

ನಡವಕಟ್ಟಿ ವೈರಿಗಳ ಹೊಡೆಯಲಿಕ್ಕೆ ಅರಿವೊ ಕೃಷ್ಣ
ಕಡಿಯಲಿಕ್ಕೆ ಜಾಣನಯ್ಯ ಶ್ರೀ ಕೃಷ್ಣರಾಯ ೧೧

ಎಷ್ಟು ಗರ್ವದಿಂದ ದ್ವಿಜಗೆಕೊಟ್ಟೊ ಭಾಷೆ ಶಪಥ ಮಾಡಿ
ನಷ್ಟವಾಯಿತಲ್ಲೊ ವಚನ ಅರ್ಜುನರಾಯ ೧೨

ಎಲ್ಲ ವ್ಯಾಪ್ತಿ ಎಂಬೊ ಮಾತು ಎಲ್ಲಿದೆಯೊ ಈಗ
ನಿನ್ನವಲ್ಲಭೆಯ ಒಯ್ದನ್ಯಾಂಗೊ ಶ್ರೀಕೃಷ್ಣರಾಯ ೧೩

ಧೀರಾಧೀರರೆಲ್ಲ ಕೂಡಿ ವೀರನೆಂದು ಪೊಗಳಲು
ನಾರಿಯ ಸೀರೆಯ ಹ್ಯಾಂಗ ಸೆಳಿದಾನಯ್ಯ ಅರ್ಜುನರಾಯ। ೧೪

ಶಂಭರಾರಿ ಪಿತನೆ ನಿನ್ನಜಂಬವೆಷ್ಟು ಕದ್ದುಕೊಂಡು
ತಿಂಬೋದಕ್ಕೆ ಜಾಣನಯ್ಯ ಶ್ರೀಕೃಷ್ಣರಾಯ ೧೫

ಎಷ್ಟುಗರುವ ನಿಮ್ಮೆಲ್ಲರ ಅಷ್ಟಗುಣವ ನಾನ ಬಲ್ಲೆ
ಹೊಟ್ಟೆಬಾಕ ಭೀಮನಯ್ಯ ಅರ್ಜುನರಾಯ ೧೬

ಬತ್ತಲೆಂದು ನಗಲು ಜನರು ಮತ್ತೆನಾಚಿ ಕುದುರೆಯನ್ನು
ಹತ್ತಿಕೊಂಡು ಓಡಿದೆಲ್ಲೊ ಶ್ರೀ ಕೃಷ್ಣರಾಯ ೧೭

ವ್ಯರ್ಥಕೈಪ ಧರಿಸಿ ಕನ್ಯೆ ಎತ್ತಿಕೊಂಡು ಒಯ್ದಮ್ಯಾಲೆ
ಹತ್ತು ಜನರು ನಕ್ಕರಲ್ಲೊ ಅರ್ಜುನರಾಯ ೧೮

ಕೃಷ್ಣಾರ್ಜುನರ ಈ ಸಂವಾದ ಸಂತುಷ್ಟನಾಗಿ ರಮಿ ಅರಸು
ಇಷ್ಟಾರ್ಥವ ಕೊಡಲಿ ನಮಗೆ ಶ್ರೀ ಕೃಷ್ಣರಾಯ ೧೯

## ೨೦೭

ಮುತ್ತು ರತ್ನದ ಕೋಲ ಮತ್ತ ಮಲ್ಲಿಗಿ ಕೋಲ
ತತ್ವ ಸೂಸ್ಯಾಡುವ ಕೋಲ
ಮಿತ್ರೆಯರು ಹರುಷದಿ ಎತ್ತಿ ಕೋಲ್ಹಾಕುವ
ಅತ್ಯಂತ ಸೊಬಗಿನ ಕೋಲ ಪ.

ನಳಿನಾಕ್ಷಿಯರ ಮನ ಕೊಳಲೂದಿ ರಾತ್ರಿಲೆ
ಸೆಳಿದೆಲ್ಲ್ಯೊ ಕಪಟ ಭಾವದಲೆ ಕೃಷ್ಣ
ಸೆಳಿದೆಲ್ಲ್ಯೊ ಕಪಟ ಭಾವದಲೆ
ಎಳೆಯ ಮಕ್ಕಳು ಗಂಡ ಉಳಿದ ಭಾಗ್ಯವ ಬಿಟ್ಟು
ಅಳೆದೆಲ್ಲೊ ಅವರ ಒಗೆತನವ ೧

ಕಂಜಾಕ್ಷ ಶ್ರೀಕೃಷ್ಣ ರಂಜಿಸಿ ಕೊಳಲೂದಿ
ಮಂಜುಳ ಸ್ವರಕೆ ಮೋಹಿಸುತ ಬಾಲೆ
ಮಂಜುಳ ಸ್ವರಕೆ ಮೋಹಿಸುತ
ಕುಂಜರಗಮನೆಯರು ಸಂಜಿಲೆ ಬಂದರು
ಅಂಜದೆ ಅತ್ತೆಮಾವರಿಗೆ ೨

ಭಾವ ಮೈದುನರನ್ನ ಕೇವಲ ತುಚ್ಛಿಸಿ
ಧಾವಿಸಿ ಬಂದ ಬಾಲೆಯರ ಕೃಷ್ಣ
ಧಾವಿಸಿ ಬಂದ ಬಾಲೆಯರ
ಪಾವನ ಮಾಡದೆ ದೇವ ರಾತ್ರಿಯೊಳು
ಯಾವ ಪಾಶವ ಬಿಡಿಸಿದಯೊ ೩

ತಂದೆತಾಯಿ ಬಳಗ ಬಂಧು ಜನರ ಬಿಟ್ಟು
ಹೊಂದಲು ನಿನ್ನಂಘ್ರಿಗಾಗಿ ಕೃಷ್ಣ
ಹೊಂದಲು ನಿನ್ನಂಘ್ರಿಗಾಗಿ
ಬಂದ ಕಾರಣವ ಒಂದೂ ಮಾತಾಡದೆ
ಕಂದಿಕುಂದಿಸಿದೆಲ್ಲಾ ಅವರ ೪

ಚಿತ್ತ ಚಂಚಲವಾಗಿ ಎತ್ತಿಗೆ ಮುರವಿಟ್ಟು
ಮತ್ತೊಂದು ಹೋರಿಯ ತರಿಸೆ ಬಾಲೆ
ಮತ್ತೊಂದು ಹೋರಿಯ ತರಿಸೆ
ಹತ್ತಿರಿದ್ದವರೆಲ್ಲ ಅತ್ಯಂತ ನಗುವರು
ಒಂದು ಅರ್ಥಿಯು ಮಾಡಿಸಿದೆಲ್ಲೊ ೫

ಮಂಗನ ಮರಿಯೆತ್ತಿ ಅಂಗಿಯ ತೊಡಿಸುತ
ರಂಗನ ಬಳಿಗೆ ಬಾರೆಂದು ಕಂದ
ರಂಗನ ಬಳಿಗೆ ಬಾರೆಂದು
ಅಕ್ಕ ತಂಗಿಯರು ಕಂಡು ಹಂಗಿಸಿ ನಗುವರು
ಶ್ರೀರಂಗ ಮಾಡಿದ ಕೌತುಕವ ೬

ಬೆಕ್ಕಿನ ಬಾಯೊಳಗೆ ಇಕ್ಕುತ ತುತ್ತನೆ
ಚಿಕ್ಕ ಕಂದಯ್ಯ ಉಣ್ಣೆನುತ ಬಾಲೆ
ಚಿಕ್ಕಕಂದ ಉಣ್ಣೆನುತ ನಕ್ಕರು
ಗೆಳತಿಯರು ಚಕ್ಕನೆ ಜರಿದರು
ಚಕ್ಕಂದವೇನು ಮಾಡಿದೆಯೊ ೭

ಪಟ್ಟೆ ಮಂಚದ ಮೇಲೆ ಬಿಟ್ಟು ಕಂದನ ಬಾಲೆ
ತೊಟ್ಟಿಲ ತೂಗಲು ಭರದಿ ಬಾಲೆ
ತೊಟ್ಟಿಲ ತೂಗಲು ಭರದಿ
ಬಟ್ಟೆ ಬಂದವರು ಅಷ್ಟೂರು ನಗುವಂತೆ
ಎಷ್ಟು ಸೋಜಿಗವ ಮಾಡಿದೆಯೊ ೮

ಉಟ್ಟ ಪೀತಾಂಬರ ಬಿಟ್ಟು ಹಾಕಿಸಿ ಮ್ಯಾಲೆ
ಕೃಷ್ಣನ ಕೊಳಲು ಲಾಲಿಸುತ ಬಾಲೆ
ಕೃಷ್ಣನ ಕೊಳಲು ಲಾಲಿಸುತ ಧಿಟ್ಟನ
ಕೊಳಲೊಳು ಧಿಟ್ಟೆ ಲಾಲಿಸಿದಳು
ಶ್ರೀಕೃಷ್ಣ ಮಾಡಿದ ಕೌತುಕವ ೯

ಕಾಲಿನ ಗೆಜ್ಜೆಯು ಮ್ಯಾಲೆ ಕೊರಳಿಗೆ ಕಟ್ಟಿ
ಮೇಲಾದ ಸರ ಕಾಲಿಗ್ಹಾಕಿ ಬಾಲೆ
ಮೇಲಾದ ಸರ ಕಾಲಿಗ್ಹಾಕಿ
ಶಾಲೆ ಹಂಬಲ ಬಿಟ್ಟು ಲೋಲಾಕ್ಷಿ ನಡೆದಳು
ಕೋಲಾಹಲವ ಮಾಡಿಸಿದಿಯೊ ೧೦

ಹಣೆಗೆ ಕುಂಕುಮ ಗಲ್ಲಕ್ಕೆ ಕಾಡಿಗೆ
ಚಲ್ವ ಫಣಿಗೆ ಅರಿಷಿಣವು ಬಾಲೆ
ಚಲ್ವ ಫಣಿಗೆ ಅರಿಷಿಣವು
ನಲ್ಲೆಯರೆಲ್ಲರು ತಮ್ಮ ವಲ್ಲಭರನ ಬಿಟ್ಟು
ಅಲ್ಲೆ ರಾತ್ರಿಲೆ ಒರಗಿದರು ೧೧

ಕಜ್ಜಲ ನೇತ್ರಿಯರ ಲಜ್ಜವಗೈಸಿದೆ
ಸಜ್ಜಾಗಿ ಕೊಳಲೂದಿದೊಮ್ಮೆ
ಸಜ್ಜಾಗಿ ಕೊಳಲೂದಿಗುಜ್ಜಿರಮಾದೇವಿ
ಹೆಜ್ಜೆ ಹೆಜ್ಜೆಗೆ ಹಂಗಿಸುವಳು
ಅರ್ಜುನ ಆಡಿದ ನಗುತ ರಾಮೇಶ ಇದಕೆ ಮೆಚ್ಚಿದ ೧೨

## ೨೦೮

ನಿನ್ನ ಕೊಳಲಿಗೆ ಮೋಹಿಸಿ ನಿನ್ನ ಕೊಳಲಿಗೆ
ಅನ್ಯ ವಿಷಯ ಜರಿದು ಬಂದರೆ ಇನ್ನು ಯಾತಕೆ ಬಂದಿರೆಂದಿ ಪ.

ಅತ್ಯಂತ ಕಾಳ ರಾತ್ರಿಯೊಳು
ಮತ್ತೆ ಬಂದ ಬಾಲೆಯರಿಗೆ
ಉತ್ತಮ ಉತ್ತಮವ ನೋಡಿ
ಮತ್ತೆ ಮನೆಗೆ ಪೋಗಿರೆಂದಿ ೧

ಪ್ರೀತಿ ಪತಿಗಳ ಬಿಟ್ಟು ನೀವು
ಯಾತಕಿಲ್ಲೆ ಬಂದಿರೆಂದಿ
ಮಾತುಗಳನು ಆಡಿ ಪೋಗಿರಿ
ಘಾತುಕ ಪುರುಷನಯ್ಯ ಕೃಷ್ಣ ೨

ಭರದಿ ಬಂದ ಬಾಲೆಯರಿಗೆ
ತಿರುಗಿ ಪೋಗಿರೆಂದು ನುಡಿದಿ
ಕರಗಲಿಲ್ಲ ಕಠಿಣ ಹೃದಯ
ಕರೆವರ್‍ಯಾಂಗ ಪತಿಗಳವರ ೩

ಜಾರ ರಾಜ ನಿನಗೆ ಒಂದೂ
ತೋರದಿದ್ದ ಭಾವವೇನು
ಯಾರ್‍ಯಾರ ಅಂಜಿಕೆ ಇಲ್ಲವೆಂದು
ನಾರಿಯರಿಗೆ ಖಿನ್ನ ಬಡಿಸಿದೆಲ್ಲೊ ೪

ಇಂದು ರಾಮೇಶ ಬಿಟ್ಟರೆ ನೀನು
ಹೊಂದೋದಿಲ್ಲ ಪತಿಗಳ ಘನ್ನ
ಚಂದಾಗಿ ಬೆರಿಯೆ ಚಕೋರನ್ನ
ಇನ್ನರೆ ರಮಿಸಿದೆಲ್ಲೊ ಚನ್ನ ೫

## ೨೦೯

ಬಿಟ್ಟು ಹೋಗುವರೇನೊ ಕೃಷ್ಣಕೋಮಲೆಯರ
ವೃಷ್ಟಿವರ್ಯ ಸಕಲ ಇಷ್ಟದ ಬಾಲೆಯರ ಪ.

ಮಿತ್ರೆಯರ ಕೂಡಿ ರಮಣ ಚಿತ್ತದಿ ಚಿಂತಿಸಿ
ರಾತ್ರಿ ಕೊಳಲು ವಿಚಿತ್ರದಿಂದ ಊದಿದಿ ೧

ಎಲ್ಲ ವಿಷಯ ಬಿಟ್ಟು ನಿಲ್ಲದೆ ಬಂದರು
ಒಲ್ಲದೆ ಅಡಗಿದಿ ಕಲ್ಲೆದೆ ಅಂದ ಪಾರ್ಥ ೨

ಇಟ್ಟು ನಿನ್ನಲೆ ಮನ ಬಿಟ್ಟು ವಿಷಯ ಸುಖ
ಗಟ್ಯಾಗಿ ರಾತ್ರಿಲೆ ಬಂದು ಎಷ್ಟು ನಂಬಿದ್ದಾರಲ್ಲೊ ೩

ಇಂಥ ವಂಚಕನೆಂದು ಕಾಂತೆಯರು ಅರಿಯರು
ಭ್ರಾಂತಿಯ ಗೈಸಿದಿ ಎಂತು ಅರ್ಜುನ ನುಡಿದ ೪

ಹಸಿದವಗೊಂದೆ ತುತ್ತು ಅಶನವ ಕೊಟ್ಟು ಅನ್ನ
ವ್ಯಸನವ ಹಚ್ಚಿದಂತೆ ಕುಸುಮನಾಭ ಮಾಡಿದ ೫

ಬೆಂದು ಬಿಸಲೊಳು ಬಹಳ ಬಂದ ಪುರುಷಗೆ ಉದಕ
ಒಂದು ಗುಟುಕುಕೊಟ್ಟು ಆನಂದವ ಮಾಡಿದೆ ೬

ಕಂದಗೆ ಸ್ತನ ಕೊಟ್ಟುಬಿಂದು ಬಾಯೊಳಗೆ ಇಟ್ಟು
ಹಿಂದಕ್ಕೆ ಸರೆಯದಂತೆ ತಂದೆ ರಾಮೇಶ ಮಾಡಿದ ೭

# ೨೧೧

ಮೀಸಲ ಗುಣದೆಯರನೆಲ್ಲ ಮೋಸಗೈಸಿ ಕೊಳಲನೂದಿ
ರಾಸಕ್ರೀಡೆ ಮಾಡಿದಾಭಾಸಬಹಳಯ್ಯಾ ಪ.

ನೀನೆ ಎಂದವರೆದೊಡ್ಡ ಕಾನನದಿ ಬಿಟ್ಟು ಒಬ್ಬ
ಮಾನಿನಿಯ ಜರಿದು ನಡೆದಿ ಇನ್ನೇನು ಉಚಿತವಯ್ಯ ಕೃಷ್ಣ ೧

ಎಳೆಯಬಳ್ಳಿ ಗಿಳಿಪಕ್ಷಿನಳಿನನಾಭನ ಕಂಡಿರೇನ
ನಳಿನ ಮುಖಿಯರೆಲ್ಲ ತಿರುಗಿ ಬಳಲಿ ನಿಂತಾರೊ ಕೃಷ್ಣ ೨

ಸೂಸು ಮಲ್ಲಿಗೆ ಸಂಪಿಗೆ ಜಾಜಿ ಹಾಸಿಕೆಯ ಮಾಡಿ ಅವಳ
ಸೋಸು ಪೂರೈಸುವ ಬಗಿಯು ಶ್ರೀಶ ರಮಸಿದಿಯೋ ಕೃಷ್ಣ ೩

ಚಂದ್ರವದನೆಗೆ ಅಂಗದಲ್ಲಿ ಗಂಧ ಕಸ್ತೂರಿ ಕುಂಕುಮವಿಟ್ಟು
ಮಂದಾರ ಮಲ್ಲಿಗೆಯ ಮುಡಿಸಿ ಆನಂದ ಬಡಿಸಿದಿಯೊ ಕೃಷ್ಣ ೪

ಇಂದಿರೇಶನ ಕಾಣದಲೆ ನೊಂದವರ ಮ್ಯಾಲೆ ಪರಿಮಳ
ತಂದು ಹಾಕಿದ ವಾಯು ಪಾಪಿ ಎಂದು ಬಯ್ಯುತ ಕೃಷ್ಣ ೫

ತಂದು ಕನ್ನಡಿ ನಿಲ್ಲಿಸಿ ಒಳಗೆ ಚಂದ್ರನ್ಹೊಗಿಸಿಮ್ಯಾಲೆಕಲ್ಲು
ತಂದು ಹಾಕಿ ಅವನ ನಾವು ಕೊಂದರೆ ಪಾಪಿಲ್ಲ ಎನುತ ೬

ಬೆಂದವರ ಮ್ಯಾಲೆ ಪರಿಮಳ ಚಂದ್ರನುಡಿಸಿದ ಕಂದನಿವನು
ಹಿಂದಿನ ವೈರವೇ ಸವತಿ ಇಂದಿನವನೆಂದು ಭವಿತ ೭

ಮಲ್ಲಿಗೆ ಸಂಪಿಗೆ ಜಾಜಿ ಚಲ್ವ ತುಳಸಿ ಯಮುನಾದೇವಿ
ಫುಲ್ಲನಾಭನ ಕಂಡಿರೇನ ನಲ್ಲೆಯರು ಹಲಬುತ ಕೃಷ್ಣ ೮

ನೋಡು ನೋಡು ಕೆಳದಿ ಇಲ್ಲೆ ಜೋಡು ಹೆಜ್ಜಿ ತೋರುತಾವ
ಮಾಡಿ ಕಪಟದಿ ರಂಗನ ಒಬ್ಬಳು ಓಡಿಸಿ ಒಯ್ದಾಳೆ ಎನುತ ೯

ನಗಧರ ಒಬ್ಬ ಬಾಲೆಯಳ ಜಿಗಿದು ಎತ್ತಿದ ಹೆಜ್ಜೆ ನೋಡಿ
ಸಿಗಲಿ ಅವಳು ರಂಗನ ಬೆರೆದ ಬಗಿಯ ತೋರೆನುತ ಕೃಷ್ಣ ೧೦

ಹಿಂಡು ನಾರಿಯರೆಲ್ಲ ಕೂಡಿಕೊಂಡು ಅವಳ ಮಂಡೆಕುಕ್ಕಿ
ಪುಂಡರಿಕಾಕ್ಷನ ತೋರೆ ದಿಂಡೆ ಮನುಜಳೆ ಎನುತ ೧೧

ಇಷ್ಟು ನಾರಿಯರೊಳು ರಾಧೆ ಶ್ರೇಷ್ಠಳೆಂದು ಗರುವಿಸ್ಯಾಳು
ಅಷ್ಟರೊಳಗೆ ಅವಳ ನೀನು ಬಿಟ್ಟು ಪೋಗಿದ್ಯೋ ಕೃಷ್ಣ ೧೨

ಗಲ್ಲಕುಕ್ಕಿ ಅಂಜಿ ಅವಳು ಎಲ್ಲ ನಾರಿಯರಿಗೆ ಎರಗಿ
ಫುಲ್ಲನಾಭ ಮಾಡಿದ ಪಾಟನ ಎಲ್ಲಿ ಉಸಿರಲೆ ಎನುತ ೧೩

ವಿಧಿಗೆ ದಯವಿಲ್ಲ ನಮ್ಮ ಚದುರ ರಂಗನ ಅಗಲಿಸಿತು
ಮದನ ಬಾಣ ನೆಟ್ಟಿತೆಂದು ಸುದತೆಯರು ಹಲಬುತ ಕೃಷ್ಣ ೧೪

ಶ್ರೀಶ ರಾಮೇಶನ ಯಾವ ದೇಶದಲ್ಲಿ ಹುಡುಕಲೆಂದು
ಕ್ಲೇಶ ಬಡಲು ಕೆಲದೆಯರೆಲ್ಲ ಸರ್ವೇಶ ಬಂದೆಂದ, ಪಾರ್ಥ ೧೫

## ೨೧೧

ಸಜ್ಜನ ಬಾಲೆಯರ ಲಜ್ಜಗ್ಯೆಸಿದಿ
ಹೆಜ್ಜೆನಿಕ್ಕಿ ಸಿದೆಯೊ ಕೃಷ್ಣ
ಗೆಜ್ಜೆಕಟ್ಟಿಸಿದ್ಯೋ
ಗೋವಳ ಹೆಜ್ಜೆನಿಕ್ಕಿಸಿದ್ಯೋ ಪ.

ಅರಿಷಿಣ ಕುಂಕುಮ ಗಂಧ
ಧರಿಸಿ ಸೀರೆ ಕುಪ್ಪುಸ ಕ್ಯಾದಿಗೆ

ಸರಸದ ಭೂಷಣಗಳಿಟ್ಟು
ಅರಸೆಯರು ಬಂದಾರೊ ಕುಣಿಯಲು ೧

ನಾನಾ ಪುಷ್ಪ ಬಳ್ಳಿಯೊಳಗೆ
ಮೀನಾಕ್ಷಿಯರ ಕೂಡಿ ರಮಿಸಿ
ಮಾನವ ಕಳೆದುಕೊಂಡ್ಯೊ
ಎನುತ ತಾನು ಪಾರ್ಥನಗುತ ೨

ಇಬ್ಬರಿಬ್ಬರ ನಡುವೆನೀನು
ಒಬ್ಬನೊಬ್ಬನಾಗಿ ನಿಂತು
ಕಬ್ಬು ಬಿಲ್ಲಿನಯ್ಯ ಕುಣಿಸಿದಿ
ನಿರ್ಭಯದಿಂದಲೆ ಕೃಷ್ಣ ೩

ಮಿತ್ರೆಯರಹೆಗಲಲ್ಲೆ ಪರಸ್ಪರ
ಹಸ್ತನಿಟ್ಟು ಹರುಷದಿಂದ
ನರ್ತನ ಮಾಡಿಸಿದ
ವಿಚಿತ್ರ ಪುರುಷನೆ ಕೃಷ್ಣ ೪

ಕರ್ಕಸ ಕುಚದ ಬಾಲೆಯರ
ಚಕ್ರದಂತೆ ನಿಲಿಸಿ ನೀನು
ಢಕ್ಕಡ ಢಕ್ಕಡ ತಾಥಾ
ಎನುತಲೆ ಧಿಕ್ಕಿಡಿ ಧಿಮಿಕಿಡಿ ಕೃಷ್ಣ ೫

ಬಗರಿ ಕುಚದ ಬಾಲೆಯರ ಕೂಡ
ನಗಧರ ನೀ ಕುಣಿಯಲು
ನಗಗೀಡಾದಿತಯ್ಯ ಜಗದಿ
ಹಗರಣ ಪುರುಷನೆ ಕೃಷ್ಣ ೬

ಪುಂಡರಿಕಾಕ್ಷನು ಕೂಡಿಕೊಂಡು
ಅವರ ಕುಣಿಸುವಾಗ

ಗಂಡರು ಬಂದರು ತಮ್ಮ
ಹೆಂಡಿರ ನೋಡಲು ಕೃಷ್ಣ ೭

ಭಾಳಗೋವಳರಿಂದ ಕೂಡಿ
ತಾಳನ್ಹಾಕಿಸಿದಿಯಯ್ಯಾ ಹೀಂಗೆ
ಭಾಳ ರೌಸವಕೇಳಿ ಜನರು
ಮೇಳವಾದರೊ ಗಡನೆ ೮

ಶ್ರೀಶ ರಾಸಕ್ರೀಡೆ ಮಾಡಿ
ಸೋಸಿಲೆಸುರರೆಲ್ಲ ನೋಡಿ
ಸೂಸಿದರು ಪುಷ್ಪ ಮಳೆಯ
ಆಸಮಯದಲಿ ಕೃಷ್ಣ ೯

ಚಲುವ ರಾಮೇಶ ತಾನು
ಜಲಕ್ರೀಡೆಯನ್ನಾಡಿ
ಲಲನೆಯರ ಸಹಿತಾಗಿ ತಾನು
ಬಲು ಬಲು ಹರುಷದಲೆ ಕೃಷ್ಣ ೧೦

## ೨೧೨

ಜಯ ಜಯವೆಂದರು ಸುರರು
ಇಂಥ ವೈಭವದಾಟ ಕಾಣುತಲೆ ಅಮರರು ಪ.

ಗಂಧದ ಓಕುಳಿಯನ್ನೇಕಲೆಸಿ
ತಂದು ಮಂದಗಮನೆಯರೆಲ್ಲ ಜೀಕುಳಿ ತುಂಬಿ
ಇಂದಿರೇಶನ ಮ್ಯಾಲೆ ಸುರಿಸಿ
ಆನಂದ ದಿಂದಲೆ ಕೈ ಹೊಡೆದು ಚಪ್ಪಳಿಸಿ ೧

ಕೇಶರ ದೋಕುಳಿಯ ತುಂಬಿ ಸರ್ವೇಶ
ನೀ ಚಿಮ್ಮುವ ಕುಚಗಳ ಅಪ್ಪಿಕೊಂಬೆ

ಈ ಸುಖ ನೀ ಎಲ್ಲೆ ಕಾಂಬೆ
ಆಭಾಸ ಮಾಡಲು
ಅದು ನೀ ಒಪ್ಪಿಕೊಂಬೆ ೨

ಬತ್ತಲೆ ಜಲವ ಪೊಕ್ಕಿಹರು
ಸೀರೆ ಎತ್ತಿಕೊಂಡ್ಹೋಗಿ ಪುಗಡೆನ್ಹಾಕುವರು
ಎತ್ತಿ ಕರವ ಜೋಡಿಸುವರು
ಮರವಸುತ್ತಿ ಚಪ್ಪಾಳೆಯನಿಕ್ಕಿ ಸಿದಿಯಲ್ಲೊ ನೀನು ೩

ಚಂದದ ಸೀರೆಯನುಟ್ಟು
ಗಂಧ ಕಸ್ತೂರಿ ಕುಂಕುಮ ಕೇದಗೆಯನಿಟ್ಟು
ಆನಂದವ ಬಟ್ಟರು ಅಷ್ಟು
ಗೋವಿಂದನಂಘ್ರಿ ಕಮಲದಿ ಮನಸಿಟ್ಟು ೪

ಅವರ ಒಲ್ಲಭರೆಲ್ಲ ಸೊಲ್ಲುಗಳೆತ್ತದ್ಹಾಂಗೆ
ಚಲ್ವನ ಪ್ರಾರ್ಥಿಸಿದರೆಲ್ಲ ಹೀಂಗೆ
ರಮಿನಲ್ಲನ ದಯದಿಂದ ಇದ್ದರು ಮೊದಲಿನ್ಹಾಂಗೆ ೫

## ೨೧೩

ಸುಂದರಿಯರೆಲ್ಲರು ಇಂದಿರೇಶನ ಪಾಡಿ
ಚಂದಾಗಿ ಕೋಲಹಾಕಿರೆಂದಳು ಕುಂತಿ ಪ.

ವ್ಯಾಳಾಶಯನನ ಕೂಡ ಭಾಳ ಸರಸವೆ
ಕೇಳಯ್ಯ ಕರೆ ಎಂದು ಹೇಳಿದಳು ಕುಂತಿ ೧

ಕೃಷ್ಣರಾಯನ ಕೂಡ ಇಷ್ಟೊಂದು ಸರಸವೆ
ಧಿಟ್ಟರಿಗೆ ಬುದ್ಧಿಕೊಟ್ಟಳು ಕುಂತಿ ೨

ತಂದೆ ರಂಗನ ಕೂಡ ಚಂದವೆ ಸರಸವು
ಮುಂದ್ಹೋಗಿ ಕರೆ ಎಂತೆಂದಳು ಕುಂತಿ ೩

ಒಡೆಯ ರಂಗನ ಕೂಡ ಬಿಡುವುದೆ ಸರಸವು
ನಡೆದ್ಹೋಗಿ ಕರೆ ಎಂತೆಂದಳು ಕುಂತಿ ೪

ಸ್ವಾಮಿ ರಾಮೇಶನ ಪ್ರೇಮದಿ ಕರೆ ಬಾಲೆ
ರಾಯನ ಸಹಿತ ಕಾಮಿನಿ ಕುಂತಿ ೫

## ೨೧೪

ಕೋಲೆಂದು ಪಾಡಿರೆ ಬಾಲೆ ದ್ರೌಪತಿ ದೇವಿ
ಮೇಲಾದ ಗುಣವ ಕೊಂಡಾಡಿ ಕೋಲ ಪ.

ಫುಲ್ಲನಯನೆಯರ ಕರಿಯೆ ನಲ್ಲೆ ದ್ರೌಪತಿ ದೇವಿ
ಮೆಲ್ಲನೆ ಹೆಜ್ಜೆ ನಿಕ್ಕಿದಳು ಕೋಲ
ಉಲ್ಹಾಸವಾಗೋದು ನಿಲ್ಲದೆ ನಡೆಯಮ್ಮ
ಹಲ್ಲಿ ಮಾತಾಡಿದವಾಗ ಕೋಲ ೧

ಬಡನಡ ಬಳುಕುತ ನಡೆದಳು ದ್ರೌಪತಿ
ಅಡಿಗಳ ಘೆಜ್ಜಿ ಘಲಕೆಂದು ಕೋಲ
ಒಡೆಯ ರಂಗಯ್ಯ ನಿನಗೆ ಕಡು ಪ್ರೀತಿ ಮಾಡುವ
ನಡೆಯೆಂದು ನುಡಿದರು ಹರುಷದಿ ಜನರು ೨

ಚಂದ್ರವದನೆಯರು ಕರಿಯೆ ಚಂದಾಗಿ ನಡೆಯಮ್ಮ
ಒಂದೂಅನುಮಾನ ಬ್ಯಾಡವೆ ಕೋಲ
ತಂದೆ ರಾಮೇಶ ಆನಂದವ ಪಡಿಸುವ
ಎಂದು ಕುಂತೆಮ್ಮ ನುಡಿದಳು ಕೋಲ ೩

## ೨೧೫

ಇಲ್ಲೆ ಕರೆಯ ಬ್ಯಾಡ ಕ್ಷುಲ್ಲಕರ ತಾಸು
ನಿಲ್ಲಿಸಿ ಹಾಸ್ಯ ಮಾಡಿ ಅಕ್ಕಯ್ಯ ಪ.

ನಲ್ಲೆ ದ್ರೌಪತಿ ನಿನ್ನ ನಿಲ್ಲಿಸಿದವಗುಣ
ಎಲ್ಲಮನಕೆತಾರೆ ಅಕ್ಕಯ್ಯ ೧

ವಂಚಕ ಗುಣದವರ ಮುಂಚೆ ನಿಲ್ಲಿಸಬೇಕು
ಪಾಂಚಾಲಿಬೇಡಿಕೊಂಬೆ ಅಕ್ಕಯ್ಯ ೨

ಬೂಟಕ ಗುಣದವರ ಪಾಟು ಬಡಿಸುವಿ ತಾಸು
ಕೋಟಿ ಜನರು ನೋಡ ಅಕ್ಕಯ್ಯ ೩

ಗರುವಿನ ಗೊಂಬೆಯರ ಹಿರಿಯತನ್ಹಾಂಗಿರಲಿ
ಕರವ ಮುಗಿಯೋಣವಂತೆ ನಾಳೆಗೆ ಅಕ್ಕಯ್ಯ ೪

ಕೃಷ್ಣನ ಮಡದಿಯರ ಶ್ರೇಷ್ಠತನ ಹಾಂಗಿರಲಿ
ಸಾಷ್ಟಾಂಗಕ್ಕೆರಗೋಣವಂತೆ ನಾಳಿಗೆ ಅಕ್ಕಯ್ಯ ೫

ನಿಂದಕರನ ತಾಸು ನಿಂದಿಸೋದುಚಿತ
ವಂದಿಸುವೆನು ನಿನಗೆ ಅಕ್ಕಯ್ಯ ೬

ಸಿರಿ ರಮಿ ಅರಸನು ಭರದಿ ನಗುವಂತೆ
ಇವರ ಗರವು ಮುರಿಯಬೇಕು ಅಕ್ಕಯ್ಯ ೭

## ೨೧೬

ಕದ್ದು ಕಳ್ಳಿಯ್ಹಾಂಗ ಮುಯ್ಯ
ಮಧ್ಯರಾತ್ರಿಲೆ ತಂದ ಮ್ಯಾಲೆ ಬುದ್ಧಿವಂತಳೆ
ಸುಭದ್ರಾ ಬುದ್ಧಿವಂತಳ ಪ.

ಮೂರುಸಂಜಿಯಲಿ ತರುವ ಮುಯ್ಯ
ಘೋರ ರಾತ್ರಿಯಲೆ ತಂದಮ್ಯಾಲೆ
ಚೋರಳೆಂದು ನಿನಗೆ ನಮ್ಮ
ಊರ ಜನರು ನಗತಾರಲ್ಲ ೧

ಒಳ್ಳೆ ಮಾನವಂತಿ ಆದ ನೀನು
ಕಳ್ಳರ ಕಾಲದಿ ಬಾಹೋರೇನ
ತಳ್ಳಿಕೋರಳೆಂದು ನಮ್ಮ
ಪಳ್ಳಿ ಜನರು ನಗತಾರಲ್ಲ ೨

ಬಹಳೆ ಜಾಣಳು ಆದರೆ ನೀನು
ಕಾಳರಾತ್ರಿಲಿ ಬಾಹೋರೇನ
ತಾಳ ತಾಳನಿನ್ನ ಕುಶಲ
ಹೇಳಲಿನ್ನ ಹುರುಳು ಇಲ್ಲ ೩

ಕತ್ತಲಲಿ ಒಬ್ಬ ದೈತ್ಯ
ಎತ್ತಿ ಒಯ್ದರೇನು ಮಾಡುವಿ
ಪಾರ್ಥ ರಾಯನ ಧರ್ಮದಿಂದ
ಮಿತ್ರಿ ಮಾನವ ಉಳಿಸಿಕೊಂಡಿ ೪

ಗಾಢ ರಾತ್ರಿಲೆ ಒಬ್ಬ ದೈತ್ಯ ಓಡಿಸಿ
ಒಯ್ದರೇನು ಮಾಡುವಿ
ಮಾಡೋರೇನ ಮೂರ್ಖತನವ
ಮೂಢಳೆಂದು ಜನರು ನಗರೆ ೫

ಸಂಧ್ಯಾಕಾಲದಿ ಮುಯ್ಯತಂದು
ನಿಂತೇವ ನಿನ್ನ ದ್ವಾರದಲ್ಲಿ
ಬಂದುನಮ್ಮನ ಕರೆಯಲಿಲ್ಲ
ಸಂದಿ ಹೋಗಿ ಸೇರುವರೇನ ೬

ನೀಲವರ್ಣನ ತಂಗಿಯರಿಗೆ
ಚಾಲವರಿದು ಕರೆದೆವಲ್ಲ
ಮೇಲುದಯದಿ ಬಂದರೆ ನೀನು
ಮೂಲೆಗ್ಹೋಗಿ ಸೇರೋರೇನ ೭

ಭಾಮೆ ರುಕ್ಮಿಣಿ ದೇವಿಯರಿಗೆ
ಕಾಲಿಗೆರಗಿ ಕಲೆಯೋರೆಲ್ಲ
ಆಲಯಕೆ ಬಂದರೆ ನೀನು
ವ್ಯಾಲನಂತೆ ಅಡಗೋರೇನ ೮

ಕೃಷ್ಣರಾಯನ ತಂಗಿಯರೆಂಬೋದೆಷ್ಟ
ಗರುವ ಬಿಡಿಸಲುಬಂದೆವು
ಪಟ್ಟು ಮಾಡಿ ಬಿಡತೇವೀಗ
ಧಿಟ್ಟ ರಾಮೇಶ ನೋಡುವಿಯಂತೆ ೯

## ೨೧೭

ಗಂಭೀರೆಯರ ನಿಲ್ಲಿಸಿದಿ
ಪೋರ ಬುದ್ಧಿಯ ಬಾಲೆ
ನೀರೆಮನಕೆ ತಾರೆ ಪ.

ನೀರಜಾಕ್ಷೆಯರ ನಿನ್ನ
ದ್ವಾರದಿ ನಿಲ್ಲಿಸಿದಿ
ಪೋರ ಬುದ್ಧಿಯನೆಲ್ಲ
ತೋರಿಸಿದೆ ಈಗ ೧

ನೋಡಿ ನಮ್ಮನು ಕರೆಯದೆ
ಓಡಿದೆ ಒಳಗಿನ್ನು
ಮಾಡಿದ ಕಪಟದ ಸೇಡು
ತೆಗೆಯುವೆ ನೀಗ ೨

ಮೂಡಲಗಿರಿ ವಾಸ
ನೋಡುವಂತೆ ಮಾರಿ
ಬಾಡಿಸಿ ಕಳಿಸುವೆ
ನೋಡಿಕೊ ರುಕ್ಮಿಣಿ ३

ಹೀನಗುಣದ ಬಾಲೆ
ಮಾನವು ನಿನಗಿಲ್ಲ
ಶ್ರೀನಿವಾಸನು ನಿನ್ನ
ಏನೆಂದು ಮದುವೆಯಾದ ೪

ರಜವೆಂಬೊ ಗುಣ ಸೇರಿ
ರಾಜ್ಯ ಭೋಗವ ಬಟ್ಟೆ
ತ್ರಿಜಗವಂದನ ಕೂಡ
ಭುಜಗಾಲಿಂಗನೆಯಾಕೆ ೫

ಸತ್ವಗುಣವ ಸೇರಿ
ಅತ್ಯಂತ ಸುಖಿಸಿದಿ
ಚಿತ್ತಜನಯ್ಯಗೆ
ಪತ್ನಿ ತಕ್ಕವಳಲ್ಲ ೬

ತಮವೆಂಬೊ ಗುಣಗಳ
ಸುಮ್ಮನೆ ಗುತ್ತಿಗೆ ಹೊತ್ತಿ
ರಮಿ ಅರಸನ ಕೂಡ
ರಮಿಸೋದು ತರವಲ್ಲ ೭

## ೨೧೮

ಮಾರಿತೋರೆ ನೀರೆ ಕರೆಯ ಬಾರೆ ಪ.

ನಾಗವೇಣಿಯರು ನಿನ್ನ ಬಾಗಿಲಿಗೆ ಬಂದರೆ
ಹ್ಯಾಂಗ ಮಾಡಲಿಯೆಂದು
ಹೋಗಿ ಕೋಣಿಯನ್ಹೊಕ್ಕೆ ೧

ಚದುರೆ ನಮ್ಮನೆಗೆ ಬಂದು ಒದರಿ ಆಣಿಯನಿಟ್ಟೆ
ಒದರಿ ಆಣಿಯನಿಟ್ಟೆ
ಕದನ ತೆಗೆದ್ಹೋಗಿ ಗದಗದ ನಡಗುವಿ ೨

ವಾಸುದೇವರ ತಂಗಿ ಸೋಸಿಲಾಣಿಯನಿಟ್ಟು
ಸೋಸಿಲಾಣಿಯನಿಟ್ಟ ಶ್ರೀಶನ
ಸತಿಯರು ದಾಸಿ ಎನಿಸುವರೇನ ೩

ಸರ್ಪಶಯನನ ತಂಗಿ ಒಪ್ಪಾಗಿ ಆಣಿಯನಿಟ್ಟು
ಒಪ್ಪಾಗಿ ಆಣಿಯನಿಟ್ಟು ಗಪ್ಪಾಗಿ ಕುಳಿತಿಯಾಕ
ತಪ್ಪು ತಪ್ಪೆನ ಬಾರ ೪

ಉಲ್ಲಾಸದಿಂದ ಆಣೆಗುಲ್ಲು ಮಾಡುತ ಇಟ್ಟೆ
ಗುಲ್ಲುಮಾಡುತಲಿಟ್ಟೆ ನಲ್ಲೆಯರು ಬರಲು
ಎದೆ ಝಲ್ಲು ಝಲ್ಲೆನುತಿರೆ ೫

ಚಿಕ್ಕ ಬುದ್ದಿಂದ ಆಣೆ ಇಕ್ಕಿ ಇಲ್ಲಿಗೆ ಬಂದೆ
ಇಲ್ಲಿಗೆಬಂದ ಪುಟ್ಟ ಸುಭದ್ರಾ
ಒಳಗೆ ಹೊಕ್ಕು ಹೊರಗೆ ಹೊರಡಲೊಲ್ಲೆ ೬

ಪೋರ ಬುದ್ಧಿಯಿಂದ ಸಾರಿ ಆಣೆಯನಿಟ್ಟೆ
ಸಾರಿ ಆಣಿಯನಿಟ್ಟೆ
ನಾರಿರುಕ್ಮಿಣಿ ಬರಲು ಹಾರುತಿದೆ ಎದೆ ೭

ನಕ್ಕರೆಂಬೋ ಭೀತಿ ಇಕ್ಕಿ ಮೂಲೆಗೆ ಬಂದೆ
ಇಕ್ಕಿ ಮೂಲೆಗೆ ಅಕ್ಕ ರುಕ್ಮಿಣಿಗೆ
ಆಣಿಸೊಕ್ಕಿನಿಂದಲೆ ಇಟ್ಟೆ ೮

ರಮಿ ಅರಸನ ತಂಗಿ ಹೆಮ್ಮಿಲಾಣಿಯನಿಟ್ಟೆ
ಆಣಿಯನಿಟ್ಟೆ ನಮ್ಮ ಕಾಣುತ
ಒಳಗೆ ಗುಮ್ಮನಂತಡಗಿದಿ ೯

## ೨೧೯

ಭಾಳ ಭಾಳ ಬಿಂಕ ರುಕ್ಮಿಣಿ
ನಿನ್ನ ಕೇಳಿ ಬಲ್ಲೆನೆ ಸತ್ಯಭಾಮಿನಿ ಪ.

ದೊರೆಯರ ಮಗಳೆಂದು ಗರವಿಲೆ ರುಕ್ಮಿಣಿ
ಬರಲಿಲ್ಲ ನಮ್ಮ ಕರೆಯಲು
ಬರಲಿಲ್ಲ ನಮ್ಮ ಕರೆಯಲು ರುಕ್ಮಿಣಿ
ಸರಿಯವರು ನೋಡಿ ನಗತಾರ ೧

ಕೆಂಚಿ ನಿಮ್ಮಣ್ಣನ ಪಂಚೆಚೂಡನ ಮಾಡಿ
ಕಂಚಿಯ ವರದ ಕಳುಹಿಲ್ಲ
ಕಂಚಿಯ ವರದ ಕಳುಹಿಲ್ಲ ರುಕ್ಮಿಣಿ
ಪಾಂಚಾಲಿಗೆ ನೀನು ಸರಿಯೇನ ೨

ನಾರಿ ನಿಮ್ಮಣ್ಣನ ಮಾರಿಯ ಬಾಡಿಸಿ
ತೇರಿಗೆ ಕಟ್ಟಿ ಮೆರೆಸಿಲ್ಲ
ತೇರಿಗೆ ಕಟ್ಟಿ ಮೆರೆಸಿಲ್ಲ ರುಕ್ಮಿಣಿ
ಯಾರ ಮುಂದಿಷ್ಟು ಬಡಿವಾರ ೩

ಹರದಿ ನಮ್ಮಣ್ಣಗೆ ಬರೆದ ಓಲೆಯನೋಡ
ಹಿರಿಯರಿಲ್ಲೇನ ಮನೆಯಾಗ
ಹಿರಿಯರಿಲ್ಲೇನ ಮನೆಯಾಗ ಅತ್ತಿಗೆ
ಸರಿಯವರು ನೋಡಿ ನಗತಾರ ೪

ಹತ್ತು ಮಾರಿಯವನ ಬೆನ್ನತ್ತಿ ಹೋದವಳೆಂದು
ಕೀರ್ತಿಯ ಪಡೆದೆಯೆಲೆ ಭಾವೆ
ಕೀರ್ತಿಯ ಪಡೆದೆಯೆಲೆ ಭಾವೆನೀ
ಮಹಾ ಮೂರ್ತಿ ಎಂಬೋದು ಹರಿಬಲ್ಲ ೫

ಪಟ್ಟದರಸಿ ಎಂದು ದೃಷ್ಟಿ ತಿರುಗ್ಯಾವ ನಿನ್ನ
ಎಷ್ಟು ಬಡಿವಾರ ಎಲೆ ಭಾವೆ
ಎಷ್ಟು ಬಡಿವಾರ ಎಲೆ ಭಾವೆ ನೀ ನಮ್ಮ
ಪುಟ್ಟ ಸುಭದ್ರೆಯ ಸರಿಯೇನ ೬

ಪತಿವ್ರತೆ ಅಂದರೆ ಅತಿ ಅತಿ ಗರುವ್ಯಾಕ
ಪತಿ ಎಲ್ಲ ಬಲ್ಲ ನಿನ್ನ ಗುಣ
ಪತಿ ಎಲ್ಲ ಬಲ್ಲ ನಿನ್ನ ಗುಣ ವನದೊಳು
ಸತಿ ಅಲ್ಲವೆಂದು ಬಿಡಲಿಲ್ಲ ೭

ಗಂಡ ನಿನ್ನಯ ಗುಣ ಕಂಡನೆ ವನದೊಳು
ಕೆಂಡವು ಎಂದು ಹೊಗಸಿಲ್ಲ
ಕೆಂಡವು ಎಂದು ಹೊಗಸಿಲ್ಲ ಈ ಮಾತು
ಪಂಡಿತರು ಕೇಳಿ ಹುಸಿಯಲ್ಲ ೮

ಮಂದಗಮನೆ ನಿನ್ನ ತಂದೆ ಹ್ಯಾಂಗೆ ಅಂದ್ಹಾಂಗೆ
ಇಂದಿರಾಪತಿಯೆ ಗತಿ ಕೊಟ್ಟ
ಇಂದಿರಾಪತಿಯೆ ಗತಿ ಕೊಟ್ಟ ಅದರಿಂದ
ಬಂದಿತ್ಯಾಕಿಷ್ಟು ಬಡಿವಾರ ೯

ನಾರಿ ಹಿಂದಕ್ಕೆ ಒಂದು ಪಾರಿಜಾತಕ್ಕಾಗಿ
ನೀರಜನಯ್ಯನ ದಣಿಸಿದೆಯಲ್ಲ
ನೀರಜನಯ್ಯನ ದಣಿಸಿದೆಯಲ್ಲ ಅತ್ತಿಗೆ
ಯಾರ ಮುಂದಿಷ್ಟೆ ಬಡಿವಾರ ೧೦

ನಾರಿ ಹಿಂದಕೆ ಒಂದು ನಾರು ವಸ್ತ್ರವ ಕಾಣೆ
ಊರು ಇಲ್ಲದಲೆ ವನವನ
ಊರು ಇಲ್ಲದಲೆ ವನವನ ತಿರುಗಿದಿ
ಯಾರ ಮುಂದಿಷ್ಟು ಬಡಿವಾರ ೧೧

ಧಿಟ್ಟೆ ಹಿಂದಕ್ಕೆ ಒಂದು ಉಟ್ಟೆನೆಂದರೆ ಇಲ್ಲ
ಹೊಟ್ಟೆಗಿಲ್ಲದಲೆ ಮುನಿಪನ
ಹೊಟ್ಟೆಗಿಲ್ಲದಲೆ ಮುನಿಪನ ಕುಟೀರದಿ
ಎಷ್ಟು ದಿನ ಕಾಲ ಕಳೆದೆಯಲ್ಲ ೧೨

ಸ್ವಾಮಿ ಶ್ರೀಕೃಷ್ಣರಾಯ ರಾಮನಂಥವನಲ್ಲ
ಭೂಮಿ ಮ್ಯಾಲಿಂಥ ದೊರೆಯಿಲ್ಲ
ಭೂಮಿ ಮ್ಯಾಲಿಂಥ ದೊರೆಯಿಲ್ಲ ಅದರಿಂದ
ಭಾಮೆ ನೀ ಕಂಡೆ ಒಗೆತನ ೧೩

ಪಟ್ಟಾಭಿರಾಮನಂತೆ ಸಿಟ್ಟು ಕೃಷ್ಣಯ್ಯಗಿಲ್ಲ
ಎಷ್ಟು ದಯವಂತ ಯದುಪತಿ
ಎಷ್ಟು ದಯವಂತ ಯದುಪತಿ ಅದರಿಂದ
ಶ್ರೇಷ್ಠಳೆ ಕಂಡೆ ಒಗೆತನ ೧೪

ಇಷ್ಟು ಜನರೊಳು ಅಷ್ಟೊಗುಣಗಳ ಸ್ಪಷ್ಟ ಮಾಡಿ ಹೊಗಳಲಿ
ಸ್ಪಷ್ಟ ಮಾಡಿ ಹೊಗಳಲಿ ರಮಿ ಅರಸು
ಬಿಟ್ಟರೆ ನಿನ್ನ ತೆಂನೇನ
ಭಾಳ ಭಾಳ ಬಿಂಕ ರುಕ್ಮಿಣಿ ೧೫

## ೨೨೦

ಬಂದು ನಮ್ಮ ಮನೆಗೆ ನಿಂದಿಸಿಲ್ಲಿಗೆ ಬಂದೆ
ಚಂದೇನೆ ಇದು ಚಂದೇನೆ ಪ.

ಚಾರು ಗುಣಶೀಲೆಯರ ದೂರಿ ಇಲ್ಲಿಗೆ ಬಂದೆ
ಚಾರ್ವಾಕಳೆಂದು ಸಾರಿ ಕೈ ಹೊಯ್ದರು ೧

ಸುಂದರ ಗುಣದೆಯರಿಗೆ ಅಂದ ಮಾತುಗಳೆಲ್ಲ
ಹೊಂದೋವೇನೆ ವ್ಯರ್ಥ ನಿಂದ್ಯಳಾದಿ ನೀನು ೨

ಶ್ರೀಶನ ಸತಿಯರ ಮೀಸಲ ಗುಣದೆಯರ
ಹಾಸ್ಯ ಮಾಡಿ ಬಂದು ದೂಷಳಾದಿ ನೀನು ೩

ಭಾಳಗುಣಾಢ್ಯರಿಗೆ ಅವಹೇಳನವಾಡಿದಿ
ತಾಳೆ ಈ ಮಾತಿಗೆ ನಿವಾಳಿಸುವರ ನಿನ್ನ ೪

ಮುದ್ದು ರಾಮೇಶನ ಅರ್ಧಾಂಗಿಯರಿಗೆ
ಅವದ್ದ ನುಡಿದು ಬಂದು ಬಿದ್ದು ನಗುವಂತೆ ೫

## ೨೨೧

ಹಿಡಿಸುವೆ ಹುಚ್ಚನೆ ಹಿಡಿಸುವೆ
ರಂಗನರಸಿಯರ ಪಾಟ ಬಡಿಸುವೆ ಪ.

ತಮವೆಂಬ ಭಂಗಿಯ ಕುಡಿಸುವೆ
ಬುದ್ಧಿಭ್ರಮೆಗೊಂಡ ಮಾತು ನುಡಿಸುವೆ
ಸುಮನಸರಿಗೆ ಹೆಂಡ ಕುಡಿಸುವೆ
ಯಾರೂ ನಮಿಸದಂತೆ ದೂರ ಇಡಿಸುವೆ ೧

ರಜವೆಂಬೋದ್ರವ್ಯ ಬಚ್ಚಿಡಿಸುವೆ
ಇವರ ರಾಜ ಲಕ್ಷಣ ಕಟ್ಟಿ ಇಡಿಸುವೆ
ಗಜಗಮನೆಯರ ಗರ್ವ ಮುರಿಸುವೆ
ನಮ್ಮ ತ್ರಿಜಗ ವಂದನ ಹಾಸ್ಯ ಮಾಡಿಸುವೆ ೨

ಸತ್ಯ ಸಾಮಿತ್ಯವತೆಗೆಸುವೆ
ಉನ್ಮತ್ತೆಯರ ಮಾಡಿ ಮೆರೆಸುವೆ
ಕತ್ತಲೆ ಮನೆಯೊಳಗೆ ಹೊಗಿಸುವೆ
ಇನ್ನೆತ್ತ ಹೋಗಲೆಂದು ಎನಿಸುವೆ ೩

ಯಾರೂ ಇಲ್ಲದಲಿ ಇಡಿಸುವೆ
ಇವರ ನೀರು ಕಂಡು ಭಯಬಡಿಸುವೆ
ಓರೆಂದು ಗಾಬರಿಗೆಡಿಸುವೆ
ಕಾಯೋ ಶ್ರೀನಿವಾಸಾನೆಂದೆನಿಸುವೆ ೪

ಒಬ್ಬರೆಲ್ಲದಲಿ ಇಡಿಸುವೆ
ಇವರನು ಗುಬ್ಬಿಯ ಹಾಂಗೆ ಭಯ ಪಡಿಸುವೆ
ತಬ್ಬಿಬ್ಬುಗೊಂಡು ತಳವೆಳಸುವೆ
ಅರ್ಥಿಲೊಬ್ಬ ರಾಮೇಶನ ನೋಡಿಸುವೆ ೫

## ೨೨೨

ಕೃಷ್ಣನ ತಂಗಿಯರೆಂಬೊ ಗರವಿಲೆ
ಇಷ್ಟು ನುಡಿದಾರೆ ಇವರು
ನಮ್ಮನೆಗೆ ಬಂದಿನ್ನೆಷ್ಟುನುಡಿದಾರೆ ಪ.

ಕೃಷ್ಣನ ಮನದಿ ನೆನಸಿ
ಮುಯ್ಯದ ಸುದ್ದಿ ಅಷ್ಟು ಲೋಕಕ್ಕ ಮೆರೆಸಿ
ಅಷ್ಟದಿಕ್ಕಿನ ಶ್ರೇಷ್ಠರಾಯರ ಕರೆಸಿ

ಇಟ್ಟ ಮುದ್ರಿಕೆ ತೆಗಿಸಿ
ಧಿಟ್ಟೆಯರು ಮುಯ್ಯವಿರಸಿ
ನ್ನೆಷ್ಟು ನುಡಿದಾರೆ ಇವರು ೧

ಹರಿಯ ತಂಗಿಯರೆಂದು ದ್ರೌಪತಿ
ಭದ್ರ ಗರವಿಲೆ ಮುಯ್ಯ ತಂದು
ರಾತ್ರಿಲೆ ತಮ್ಮ ಕರೆಯ ಬರಲಿಲ್ಲವೆಂದು
ಭರದಿ ಕೋಪಿಸಿ ಬಂದು
ಸರಿಯವರು ನಗತಾರೆ
ಇನ್ನೆಷ್ಟು ನುಡಿದಾರೆ ಇವರು ೨

ಬೇಗನೆ ಮುಯ್ಯಾ ತಂದು
ರಂಗನ ಯಾವಾಗ ನೋಡೆವೆಂಧು
ಸೋಗು ಮಾಡುತ
ಬಾಗಿಲೊಳು ನಿಂದು
ಬೀಗವ ತೆಗೆಸಿರೆಂದು ಕೂಗಾಡಿದರಿ
ನ್ನೆಷ್ಟು ನುಡಿದಾರೆ ಇವರು ೩

ಸುಳ್ಳು ಮುಯ್ಯವ ತಂದು
ಹರಿಯಲ್ಲೆ ಸ್ನೇಹ ಬಳ್ಳಿಯ ಸುತ್ತಿಕೊಂಡು
ಜನರೊಳು ಬಹಳ ಒಳ್ಳೆಯವರೆನಿಸಿಕೊಂಡು
ತಳ್ಳಿ ಮಾತಾಡಿಕೊಂಡು
ತಳಮಳತಾವೆಗೊಂಡು
ಇನ್ನೆಷ್ಟು ನುಡಿದಾರೆ ಇವರು ೪

ರಮ್ಮಿ ಅರಸನ ಎದುರು
ದ್ರೌಪತಿ ಭದ್ರೆ ಹೆಮ್ಮಿಲೆ ದೂರಿದರು
ಎಲ್ಲರು ನಗಲು ಜಮ್ಮನೆ ನಾಚಿಹರು
ನಮ್ಮನ ಕರೆಯದೆ ಒಳಗೆ
ಗುಮ್ಮನಂತೆ ಅಡಗಿದೆ
ರಿನ್ನೆಷ್ಟು ನುಡಿದಾರೆ ಇವರು ೫

## ೨೨೩

ಭಾವೆ ಗೋಪಾಲ ಸವತಿ ಪಾಲಾದನಲ್ಲೆ
ಯುಕ್ತಿ ಯುಕ್ತಿಲೆ ಒಲಿವೋ ಕೌತುಕ ನೋಡ ನಲ್ಲೆ ಪ.

ಹೆಣ್ಣು ನಮ್ಮಿಬ್ಬರ ಕಣ್ಣಿಗೆ ಇಂಗು ಹಚ್ಚಿ
ಸುವರ್ಣದಂತೆ ಹೊಳೆಯುತ
ಸುವರ್ಣದಂತೆ ಹೊಳೆಯುತ ರಮಿಸುತ
ನಮ್ಮಣ್ಣನ ಕೂಡ ಇರುವೋಳು ೧

ನಿತ್ಯ ಪ್ರಕಾಶನ ಅತ್ಯಂತ ಬೆರೆದಿರೆ
ಹತ್ತಿರ ಆಕೆ ರಮಿಸುತ
ಹತ್ತಿರ ಆಕೆ ರಮಿಸುತಿರಲು
ಎಲ್ಲಾ ಪತ್ನಿಯರು ಮಾಡೊ ತೆರನೇನ ೨

ಕಾಲದಲ್ಲಿದ್ದ ಹರಿಯ ಮೇಲಾಗಿ ಸ್ತುತಿಸುತ
ಕಾಲಾಲವ ತ್ರುಟಿಯು ಬಿಡದಲೆ
ಕಾಲಾಲವ ತ್ರುಟಿಯು ಬಿಡದಲೆ ರಮಿಸಿ
ಎಲ್ಲಾ ಬಾಲೆಯರು ಮಾಡೊತೆರನೇನ ೩

ದೇಶದಲ್ಲಿದ್ದ ಹರಿಯಲೇಸಾಗಿ ಬೆರೆದಿರೆ
ಲೇಶವಬಿಡದೆ ರಮಿಸುತ
ಲೇಶವ ಬಿಡದೆ ಇರಲು
ನಮ್ಮ ಆಶೆ ಪೂರೈಸೊ ಬಗೆ ಹ್ಯಾಂಗೆ ೪

ರುದ್ರಾದಿ ವಂದ್ಯನ ಬದ್ದಾಗಿ ರಮಿಸುತ
ಮುದ್ದು ಕೋಮಲೆಯು ಇರತಾಳೆ
ಮುದ್ದು ಕೋಮಲೆಯು ಇರತಾಳೆ
ನಿಮ್ಮ ಬುದ್ಧಿ ಎಲ್ಲಿ ಹೋಗಿ ಅಡಗಿತ ೫

ಬ್ರಮ್ಹನ ಮಾತಿಗೆ ತಮ್ಮಂಜಿಕೆಯು ಏನ
ಅಮ್ಮ ಅಚ್ಯುತನ ಒಡಗೂಡಿ
ಅಮ್ಮ ಅಚ್ಯುತನ ಒಡಗೂಡಿ ರಮಿಸಿದಾಗ
ನಿಮ್ಮ ಹೆಮ್ಮೆಎಲ್ಲಿ ಹೋಗಿ ಅಡಗಿತ ೬

ಮುದ್ದು ರಾಮೇಶನ ಕದ್ದಿಲೆ ಕರೆದಿರೆ
ಹರದೆಯರು ಹರಿಯ ರಮಿಸುತ
ಹರದೆಯರು ಹರಿಯ ರಮಿಸುತ ಗಗನಕೆ
ಎದ್ದರೆ ನಿನಗೆ ತೆರನೇನ ೭

## ೨೨೪

ಯಾತರ ಗರವು ಹೇಳೆ ಮಾತಿನ ಜಾಣೆ
ಪ್ರೀತಿಲೆ ಕರೆಯದೆ ನೀತಿ ಬಿಟ್ಟೆನೀನು ಪ.

ಬಾಲೆ ನಿಮ್ಮರಸರು ಭಾಳಗುಣವಂತರು
ಕಾಲ ವಿಹಿತವನು ತಿಳಿದು ಇಂದಿವ ರಾಕ್ಷಿ
ಕಾಲ ವಿಹಿತವ ತಿಳಿದು ರಮಿಸುವಾಗ
ಸಾಲದೆ ಮಾನವ ಕಳಕೊಂಡೆ ಇಂದಿವರಾಕ್ಷಿ ೧

ಮಿತ್ರೆ ನಿನ್ನವಗುಣ ಮತ್ತೆ ಐವರು ನೋಡಿ
ಪ್ರತ್ಯೇಕ ಒಬ್ಬೊಬ್ಬ ಮಡದಿಯರ ಇಂದಿವರಾಕ್ಷಿ
ಪ್ರತ್ಯೇಕ ಒಬ್ಬೊಬ್ಬ ಮಡದಿಯರ ಮದುವ್ಯಾಗಿ
ಅರ್ಥಿಲೆ ರಮಿಸಿ ಇರುತಾರೆ ಇಂದಿವರಾಕ್ಷಿ ೨

ಐವರನ ಠಕ್ಕಿಸಿ ದೈವನಂಥವನ ಕೂಡ
ಮೈಮರೆದು ಓಡುವ ಸಮಯದಿ ಇಂದಿವರಾಕ್ಷಿ
ಮೈಮರೆದು ಓಡುವ ಸಮಯದಿ ಭೀಮಸೇನ
ಕೈ ಹಿಡಿದು ಕೆಳಗೆ ಎಳೆದಾನ ಇಂದಿವರಾಕ್ಷಿ ೩

ಸೂತ್ರ ನಾಮಕನ ಮಡದಿ ಸ್ತೋತ್ರಕೆ ಹಿಗ್ಗುವಿ
ವ್ರಾತ್ಯನ ಕೂಡ ರಥವೇರಿ ಇಂದಿವರಾಕ್ಷಿ
ವ್ರಾತ್ಯನ ಕೂಡ ರಥವೇರಿ ಹೋಗುವಾಗ
ಯಾತರ ಮಾನ ತಿಳಕೊ ಇಂದಿವರಾಕ್ಷಿ ೪

ಧಡ ಧಡ ರಥವನು ಹೊಡೆದು ಓಡಿಸುವಾಗ
ಸಿಡಿಲೆರಗಿದಂತೆ ಐವರು ಇಂದಿವರಾಕ್ಷಿ
ಸಿಡಿಲೆರಗಿದಂತೆ ಐವರು ನಿನ್ನಕೈ
ಹಿಡಿದೆಳೆದದ್ದು ಮರೆತೆಯೇನ ಇಂದಿವರಾಕ್ಷಿ ೫

ವಾಚಾಭಿಮಾನಿಯೆ ಯೋಚಿಸೆ ಮನದೊಳು
ಆಚೆಲಿದ್ದವರಿಗೆ ಅನುಮಾನ ಇಂದಿವರಾಕ್ಷಿ
ಆಚೆಲಿದ್ದವರಿಗೆ ಅನುಮಾನ ದ್ರೌಪತಿ
ನಾಚಿಕೆ ಎಂದು ಬರಬೇಕ ಇಂದಿವರಾವಕ್ಷಿ ೬

ಪಾಂಚಾಲಿ ನಿನ್ನವ ಗುಣ ಮಿಂಚಿತ ಜಗದೊಳು
ಹಂಚಿಕೆಹಾಕಿದರೆ ಹರವಿಲ್ಲ
ಹಂಚಿಕೆ ಹಾಕಿದರೆ ಹರವಿಲ್ಲ ರಮಿಅರಸು
ಕಿಂಚಿತ್ತು ಮಾನ ಉಳಿಸಿದ ಇಂದಿವರಾಕ್ಷಿ ೭

## ೨೨೫

ಕೋಲ ಕೋಲೆನ್ನ ಕೋಲ
ಕೋಲೆನ್ನ ಕೋಲ
ಕೋಲ ಶ್ರೀ ಹರಿಯ
ನೆನದೇವ ಕೋಲ ಪ.

ನಾರಿಯರಿಬ್ಬರಿಗೆ ಹರಿಯು
ಕರೆದು ಮಾತಾಡದ್ಹಾಂಗೆ
ನೀರೊಳಗೆ ಹೋಗಿ ಅಡಗಿದ ಕೋಲ

ನೀರೊಳಗೆ ಹೋಗಿ ಅಡಗಿದ ರುಕ್ಮಿಣಿ
ಪೋರತನವೆಂದು ಬಿಡಬೇಕು ಕೋಲ ೧

ಕೃಷ್ಣ ನಮ್ಮರಮನೆ
ಬಿಟ್ಹೋಗ ಬಾರದೆಂದು
ಬೆಟ್ಟವ ಮ್ಯಾಲೆ ಹೊರೆಸಿದ ಕೋಲ
ಬೆಟ್ಟವ ಮ್ಯಾಲೆ ಹೊರೆಸಿದ ಸತ್ಯಭಾಮೆ
ಗಟ್ಟಿ ಎದೆಯವಳು ಹೌದು ಹೌದು ಕೋಲ ೨

ನೀರಜನಯ್ಯಗೆರಡು
ಕ್ವಾರಿ ಚಿನ್ನವ ಮಾಡಿ
ಮಾರಿಯ ಗುರುತು ಮರೆಸಿದಿ ಕೋಲ
ಮಾರಿಯ ಗುರುತು ಮರೆಸಿದಿ ನೀಲಾದೇವಿ
ಧೈರ್ಯ ವಿನ್ನೆಷ್ಟು ಧಮಕೆಷ್ಟು ಕೋಲ ೩

ಹರದೆಯರಿಬ್ಬರು ಹರಿಯ ಕರೆದು ಮಾತಾಡದ್ಹಾಂಗೆ
ಉರಿಮಾರಿಮಾಡಿ ನಿಲ್ಲಿಸಿದಿ ಕೋಲ
ಉರಿಮಾರಿ ಮಾಡಿನಿಲ್ಲಿಸಿದಿಭದ್ರಾದೇವಿ
ಸರಿಯವರು ನೋಡಿ ನಗುತಾರೆ ಕೋಲ ೪

ಸುರತ ರಂಗಯ್ಯಗೆ ದೊರೆತನ ಕಡಿಮೆ ಏನ
ತಿರುಕನ ಮಾಡಿ ಕಳುಹಿದಿ ಕೋಲ
ತಿರುಕನಮಾಡಿ ಕಳುಹಿದಿಮಿತ್ರವಿಂದ
ಕರ ಕರಿಯೆಂದು ಬಿಡಬೇಕು ಕೋಲ ೫

ಮಡದಿಯರಿಬ್ಬರು ಹರಿಯ ಕರೆದು ಮಾತಾಡದ್ಹಾಂಗೆ
ಕೊಡಲಿಯ ಕೊಟ್ಟು ಬಡವನೆ ಕೋಲ
ಕೊಡಲಿಯ ಕೊಟ್ಟು ಬಡವನೆ ಮಾಡಿದ
ಕಿಡಿಗೇಡಿತನವ ಬಿಡು ಕಾಳಿ ಕೋಲ ೬

ನಲ್ಲೆಯರಿಬ್ಬರು ಹರಿಯ ಎಲ್ಲೆಲ್ಲೂ ಬಿಡದ್ದಾಂಗೆ
ಬಿಲ್ಲನೆ ಕೊಟ್ಟು ನಿಲ್ಲಿಸಿದಿ
ಬಿಲ್ಲನೆ ಕೊಟ್ಟು ನಿಲ್ಲಿಸಿದಿ ಲಕ್ಷಣಾ
ಕಲ್ಲೆದೆಯವಳು ಹೌದ ಹೌದ ಕೋಲ ೭

ಒಳ್ಳೆಗುಣಪೂರ್ಣಗೆ ಕಳ್ಳನಂತೆ ಹೆಸರಿಟ್ಟೆ
ಸುಳ್ಳು ನೋಡಿದರೆ ವಿಪರೀತ ಕೋಲ
ಸುಳ್ಳು ನೋಡಿದರೆ ವಿಪರೀತ ಜಾಂಬವಂತಿ
ಕೊಳ್ಳಿಯ ಗುಮ್ಮಗುರುವೇನ ಕೋಲ ೮

ಮುದ್ದು ಹದಿನಾರು ಸಾವಿರ ಬುದ್ಧಿವಂತರ ಕೂಡಿ
ಹದ್ದೆರ್ದಬೌದ್ಧ ಎನುತಲೆ ಕೋಲ
ಹದ್ದೆರ್ದಬೌದ್ಧ ಎನುತಲೆ ಬೆನ್ನ ಹತ್ತಲು
ಇದ್ದಜನರೆಲ್ಲ ನಗುತಾರೆ ಕೋಲ ೯

ನೂರು ಮಂದಿ ಹರಿಯ ದಾರಿಯ ಕಟ್ಟಲು
ಹಾರಿದ ಕೃಷ್ಣ ಕುದರಿಯ ಕೋಲ
ಹಾರಿದ ಕೃಷ್ಣ ಕುದುರೆ ಏರಿಕೊಂಡು
ಮಾರಿ ತೋರದಲೆ ಬರಲಿಲ್ಲ ಕೋಲ ೧೦

ಚಲ್ವ ರಾಮೇಶ ಎಲ್ಲ ಲಲನೆಯರಿಗೆ ಅಂಜಿಕೊಂಡು
ಬಲಿಯ ಮನೆ ಮುಂದೆ ಕುಳಿತಾನೆ ಕೋಲ
ಬಲಿಯ ಮನೆ ಮುಂದೆ ಕುಳಿತಾನೆ ರುಕ್ಮಿಣಿ
ಕಲಹವ ಬಿಟ್ಟು ಕರೆತಾರೆ ಕೋಲ ೧೧

## ೨೨೬

ಗುಜ್ಜಿ ರುಕ್ಮಿಣಿಗೆ ನಾಚಿ ಲಜ್ಜವಗ್ಯೆಯ್ಯುತಲೆ
ಮುಂದಕ್ಕೆ ಹೆಜ್ಜೆ ಹಾಕಲೊಲ್ಲಿ ಯಾಕೆ
ಅರ್ಜುನನ ರಾಣಿ ಮುದ್ದು ಅರ್ಜುನನ ರಾಣಿ ಪ.

ಒಬ್ಬರಿಗಿಂತ ಒಬ್ಬರ ಚಲ್ವಿಕೆಗೆ ಉಬ್ಬಿಹಳು
ಐವರ ನಿರ್ಭಯದಿ ನಾಚಿಕೆಯ ಬಿಟ್ಟು
ಒಬ್ಬಳೆ ಬೆರೆದಾಳು ದ್ರೌಪತಿ
ಒಬ್ಬಳೆ ಬೆರೆದಾಳು ೧

ತರುಳ ರೈವರ ಚಲ್ವಿಕೆಗೆ ಮರುಳುಗೊಂಡಳು
ಸಭೆಯೊಳು ಅರಳು ಮಲ್ಲಿಗೆಯ ಮಾಲೆಯನು
ಕೊರಳಿಗೆ ಹಾಕಿದಳು
ಐವರ ಕೊರಳಿಗೆ ಹಾಕಿದಳು ೨

ಪಂಚ ಪಾಂಡವರ ನೋಡಿ ಚಂಚಲಾಗಿಹಳು
ನಾಚಿ ಹಂಚಿಕೆ ಹಾಕುವಾಗ
ಜಾಣೆ ಮಂಚದಲ್ಲಿಹಳು
ದ್ರೌಪತಿ ಮಂಚದಲ್ಲಿಹಳು ೩

ಸರಿಕ ಸರಿಕ ನಾರಿಯರೆಲ್ಲ ಕರವ ಹೊಯ್ದರು
ಹೊರಗೆ ಬರಲ್ಹಾಂಗೆಂದು ಹೋಗಿ
ಒಳಗೆ ಸೇರಿದಳು ದ್ರೌಪತಿ
ಒಳಗೆ ಸೇರಿದಳು ೪

ಇಂದು ರಾಮೇಶನ ಮಡದಿಯರು
ಬಿದ್ದು ನಗುವಂತೆ
ನಾಚಿಸೆಂದು ಸೇರಿದಳೆ ಹೋಗಿ
ಚಂದಾಗಿ ಆಕಾಂತೆ ೫

## ೨೨೭

ಎಷ್ಟು ಸಾಹಸ ಬಟ್ಟಳಮ್ಮ ಧಿಟ್ಟೆ ರುಕ್ಮಿಣಿ
ಇಷ್ಟು ನಾರಿಯರೊಳಗೆ
ಶ್ರೀ ಕೃಷ್ಣ ತನಗೆ ಒಲಿಯಲೆಂದು ಪ.

ಮಂಚವಾಗಿ ಮನೆಯು ಆಗಿ
ಪಂಚರತ್ನದ ವಸ್ತಗಳಾಗಿ
ಮಿಂಚುದೀವಿಗೆ ಮಲ್ಲಿಗೆ
ಸಂಪಿಗೆ ಕೆಂಚಿತಾನಾಗಿ ೧

ಮಂದಗಮನೆ ಸಹವಾಸವ
ಒಂದೂ ಲೆಕ್ಕಿಸದಲೆ ಕೃಷ್ಣ
ಚಂದ್ರ ಸೂರ್ಯರ ಚದುರರ
ನಿರ್ಮಿಸಿ ಚಂದದಿ ತೋರಿದನೆ ೨

ವಟ ಪತ್ರಳು ತಾನಾಗಿ
ಚಟುಲ ಚಮತ್ಕಾರಿ ಯಾಗಿ
ಸಟೆಯಿಲ್ಲದೆ ರಾತ್ರಿ ಒಲವು
ಕುಟಿಲದಿ ತೋರಿದಳೆ ೩

ದೇಶ ಕಾಲ ತಾನಾಗಿ ರಾಮೇಶಗೆ
ತೋರಿದಳೆ ಕುಶಲ
ಲೇಸು ಲೆಕ್ಕಿಸದೆ
ಗುಣದ ರಾಶಿ ತೋರಿದಳೆ ೪

## ೨೨೮

ಬಾರೆ ವೈಯ್ಯಾರಿ
ದೊಡ್ಡಮಾರಿ ಸಂಚರಿಸುವಾಗ
ಘೋರರಾತ್ರಿಲೆ ಬರಬಹುದೆ ಪ.

ಮಂದಗಮನೆ ನೀ ಮದನಜ ನೈಯ್ಯನ
ಬದಿಯಲೆ ಬೆರೆದ ಬಗೆ ಹ್ಯಾಂಗ
ಬಗೆಹ್ಯಾಂಗನಿನ್ನ ಕೀರ್ತಿ
ಅದ್ಭುತವಮ್ಮಾ ಜಗದೊಳು ೧

ಧರ್ಮನ ಒಂದು ವರುಷ ರಮ್ಮಿಸಿ ಕರೆದೆಲ್ಲ
ಧರ್ಮ ತಾ ಹೇಸಿ ಜರಿದನು
ಧರ್ಮ ತಾ ಹೇಸಿ ಜರಿದನು ಅದಕೇಳಿ
ಬ್ರಮ್ಹಾದಿಗಳೆಲ್ಲ ನಗುತಾರೆ ೨

ಭೀಮನ ಒಂದು ವರುಷ ಕಾಮಿಸಿ ಕರೆದೆಲ್ಲ
ಭೀಮತಾ ಹೇಸಿ ಜರಿದನು
ಭೀಮತಾ ಹೇಸಿ ಜರಿದನು ಅದಕೇಳಿ
ಭೂಮಿ ಪಾಲಕರು ನಗುತಾರೆ ೩

ಮಿತ್ರಿ ಇಬ್ಬರ ಸಂಗ ತೃಪ್ತಿಯ ಗೈಯದೆ
ಪಾರ್ಥನ ವರುಷ ಕರೆದೆಲ್ಲ
ಪಾರ್ಥನ ವರುಷ ಕರೆದೆಲ್ಲ
ಅವ ಜರಿದು ಯಾತ್ರೆಗೆ ನಡೆದ ಬಿಡಳೆಂದು ೪

ಸಕಲರ ಕರೆಯಲು ಕಕುಲಾತಿ ತೀರದೆ
ನಕುಲನ ವರುಷ ಕರೆದೆಲ್ಲ
ನಕುಲನ ವರುಷ ಕರೆದೆಲ್ಲ
ಅವ ಜರಿದು ಯುಕ್ತಿಲೆ ಬ್ಯಾಗ ಕಡೆಯಾದ ೫

ಸಹದೇವನೊಂದು ವರುಷ ಮೋಹಿಸಿ ಕರೆದೆಲ್ಲ
ಸಹದೇವ ಹೇಸಿ ಜರೆದನು
ಸಹದೇವ ಹೇಸಿ ಜರೆದನು
ಆದೆಲ್ಲ ಹಲ್ಲಿ ಮರಿಯಂತೆ ೬

ಎಲ್ಲರ ಕರೆಯಲು ಒಲ್ಲದೆ ಜರೆದರು
ಅಲ್ಲವತಿಂದ ಇಲಿಯಂತೆ
ಅಲ್ಲವತಿಂದ ಇಲಿಯಂತೆ ಮರುಗಲು
ಚಲವ ರಾಮೇಶ ಜರಿದನು ೭

## ೨೨೯

ಕೃಷ್ಣ ನಿಮ್ಮೆಲ್ಲರ ಬಿಟ್ಟನೆ
ಒಬ್ಬ ಶ್ರೇಷ್ಠ ನಾರಿಯಮೇಲೆ ಮನಸಿಟ್ಟನೆ ಪ.

ಸತ್ಯ ಸುಶೀಲಳು ಅವಳಮ್ಮ
ಜನಕೆ ತತ್ವ ಬೋಧಿಸುವಳು ಇವಳಮ್ಮ ೧

ಕಾಂತೆ ಕೋಮಲ ಹೃದಯದವಳಮ್ಮ
ಬುದ್ಧಿ ಭ್ರಾಂತಿ ಗೈಸುವವಳಿವಳಮ್ಮ ೨

ತಪ್ಪದೆ ಸಲಹುವಳವಳಮ್ಮ
ಜನಕೆ ಒಪ್ಪುವ ಗುಣವ ತೋರುವಳಿವಳಮ್ಮ ೩

ಶ್ರೀಶನ ಬಿಡದಿಹಳವಳಮ್ಮ
ಅತಿ ಮೋಸಗಾರುತಿಯು ಇವಳಮ್ಮ ೪

ಉತ್ತಮಳು ರಮಾ ಅವಳಮ್ಮ
ಅತಿ ಕೀರ್ತಿಯ ಪಡೆದಿಹಳಿವಳಮ್ಮ ೫

# ೨೩೦

ರಂಗನ ತಂಗಿಯರ ಮಾನಭಂಗ ಮಾಡಿ
ಹರುಷದಿಂದ ತಂಗಿಯರು
ಕೋಲ ಹಾಕುತಾರೆ ಬಾರೆ ದ್ರೌಪತಿ ಪ.

ದೊರೆಯರ ಮಗಳೆಂದು
ಬಹಳೆ ಗರವಿಲಿಂದ ಆಣಿನಿಟ್ಟು
ಒಳಗೆ ಹೋಗಿ
ಸೇರಿದ್ಯಾಕ ಬಾರೆ ದ್ರೌಪತಿ ೧

ಒಳ್ಳೆಯವರ ಮಗಳು ನೀನು
ಭಾಳ ಮಾತನಾಡಿ
ಗೈಯ್ಯಾಳಿ ತನವ
ತೋರಿಕೊಂಡಿ ಬಾರೆ ದ್ರೌಪತಿ ೨

ಗುಡ್ಡದಷ್ಟು ರಾಗ ಮಾಡಿ
ಅಡ್ಡಾದಿಡ್ಡಿ ಮಾತನಾಡಿ
ಧಡ್ಡ ತನವ ತೋರಿಕೊಂಡೆ
ಬಾರೆ ದ್ರೌಪತಿ ೩

ಸರ್ಪನ ಎದುರಿಗೆ ಕಪ್ಪೆ
ದರ್ಪತೋರುವದು ಉಂಟೇನ
ಅರಿಪುರೆಲ್ಲ ನಿನ್ನ ಬುದ್ಧಿ
ಬಾರೆ ದ್ರೌಪತಿ ೪

ಬರಿಯ ಮಾತಿನ ಜಾಣೆ
ನಿಮ್ಮನ ಕರೆಯ ಬರಲಿಲ್ಲವೆಂದು
ಕುರಿಯಂತೆ ಕೂಗಿದೆಲ್ಲ
ಬಾರೆ ದ್ರೌಪತಿ ೫

ನರಿಯ ಸಿಂಹನ ಮರಿಗೆ
ನೀನು ಸರಿ ಗಟ್ಟಿದಂತೆ
ಅದರ ಪರಿಯ
ತಿಳಕೊಳ್ಳಬಾರೆ ದ್ರೌಪತಿ ೬

ಅಕ್ಕ ರುಕ್ಮಿಣಿಗೆ ಭಾಳ
ಸೊಕ್ಕಿಲಿಂದ ಆಣಿನಿಟ್ಟೆ
ಬೆಕ್ಕಿನಾಂಗ ಸೇರಿದ್ಯಾಕ
ಬಾರೆ ದ್ರೌಪತಿ ೭

ನಳಿನಾಕ್ಷಿ ರಾಮೇಶ ನರಸಿಯರಿಗೆ
ತಿಳಿಯದೆ ಆಣಿಯನಿಟ್ಟು
ಮಾನವ ಎಂತು ಕಳೆದು ಕೊಂಡೆ
ಬಾರೆ ದ್ರೌಪತಿ ೮

## ೨೩೧

ಕೋಲೆಂದು ಪಾಡಿರೆ
ಕೋಮಲೆಯರೆಲ್ಲ
ಗೋಪಾಲರಾಯನ
ಮಡದಿಯರು ಕೋಲ ಪ.

ಶ್ರೀದೇವಿಯರ ಕೂಡ ವಾದ ಸರಸವೆ
ಆದರದಿ ಪಾದಕ್ಕೆರಗಿ ಕೋಲ
ಮಾಧವ ನರಸಿಯರ ಮೋದದಿ
ಕರೆಯೆ ವಿನೋದವ ನುಡಿದಾನುರಾಯ ೧

ಸರಿಯ ರಾಣಿಯರ ಕೂಡ ತರವೇನು ಸರಸವು
ಕರವ ಜೋಡಿಸಿ ಕಮಲಾಕ್ಷಿ ಕೋಲ
ಎರಗಿ ದೇವಿಯರಿಗೆ ಕರಿಯೆ ಬ್ಯಾಗವೆಂದು
ಹರದೆಯರಿಗೆ ನುಡಿದ ಭೀಮನು ಕೋಲ ೨

ಕೀರ್ತಿವಂತರ ಕೂಡ ಯಾತಕ್ಕೆ ಸರಸವು
ಮಾತಿನ ಸುಖದ ವಾಣಿಯರ ಕೋಲ
ಸ್ತೋತ್ರವ ಮಾಡುತ ಪ್ರೀತಿಲೆ ಕರೆಯೆಂದು
ಪಾರ್ಥ ಮಾತಾಡಿದ ಸತಿಗೆ ಕೋಲ ೩

ಸಕಲ ಗುಣಾಢ್ಯರ ಸಖಳೆಂದು ಕರೆಸಿಕೊ
ನಕಲಿ ಮಾತಾಡಬ್ಯಾಡ ಕೋಲ
ಮುಖವ ನೋಡುತ ಅತಿ ಸುಖವ ಪಡಿರೆಂದು
ನಕುಲಮಾತಾಡಿದ ಸತಿಗೆ ಕೋಲ ೪

ಇಂತು ರಾಮೇಶನ ಕಾಂತೆಯರ ಕರೆಯೆ
ವೇದಾಂತ ವೇದ್ಯಳೆ ದ್ರೌಪತಿ ಕೋಲ
ಪಂಥವ ಬಿಟ್ಟು ಸಂತೋಷದಿ ಕರೆಯೆಂದು
ಕಾಂತೆಗೆ ನುಡಿದ ಸಹದೇವ ೫

## ೨೩೨

ಎಲ್ಲೆಲ್ಲು ನೋಡಿದರು ಕೆಲದಿ
ರಂಗನ ಪಾಡಿನಲ್ಲೆಯರು
ಕೋಲ ಹಾಕೋರಮ್ಮ ಪ.

ಹಗಲು ಜ್ಯೋತಿಗಳು ಹೊಳೆವಂಥ ನಾರಿಯರ ಕೂಡ
ನಗಧರ ಬಂದು ನಿಂತಾನಮ್ಮ ೧

ಕೃಷ್ಣನರಸಿಯರು ನಿಂತಿರಲು ಸುರನಾರಿಯರೆಲ್ಲ
ಉತ್ಕೃಷ್ಟದಿ ಹಾಡಿ ಪಾಡೋರಮ್ಮ ೨

ರಂಗನರಸಿಯರು ನಿಂತಿರಲು ಅಂಬರದಿ
ಗಂಧರ್ವರು ಹಾಡಿ ಪಾಡೋರಮ್ಮ ೩

ನಕ್ಷತ್ರ ಮಾಲೆಯಂತೆ ಹೊಳೆವೊ ನಾರಿಯರ ಕೂಡ
ಲಕ್ಷುಮಿರಮಣ ನಿಂತಾನಮ್ಮ ೪

ಚಂದ್ರ ಜ್ಯೋತಿಗಳು ಹೊಳೆವಂಥ ಯಾದವರ ಕೂಡ
ತಂದೆ ರಾಮೇಶ ನಿಂತಾನಮ್ಮ ೫

## ೨೩೩

ಕೊಂಡ ಭೆಟ್ಟಿ ಭೂಮಂಡಲಾಧೀಶನು
ಪಾಂಡವರ ಉದ್ದಂಡಗಳಿಂದ ಪ.

ಚಂದ್ರನಂತೊಪ್ಪುತ ವಂದಿಸಿ ಐವರು
ಆನಂದಬಾಷ್ಪಗಳು ದೇವ ದುಂದುಭಿ ಆಗ ೧

ತೋಳ ಭಾಪುರಿಯವರು ಬಹಳೆ ಹಾರಗಳಿಂದ
ವ್ಯಾಳಾಶಯನ ಒಪ್ಪ ಹೇಳಲು ವಶವಲ್ಲ ೨

ಶ್ರೀಶ ಇವರ ಭೆಟ್ಟಿ ದೇಶದ ಜನ ನೋಡಿ
ಸೂಸು ಮಲ್ಲಿಗೆ ತಮ್ಮ ಆಸೆ ಪೂರೈಸಿಕೊಂಡು ೩

ಭೆಟ್ಟಿಯಾದ ಉತ್ಕರ್ಷ ನೋಡಿ ಪುಷ್ಪ
ವೃಷ್ಟಿಯಗರೆದರು ಶ್ರೇಷ್ಠದ ಸುರರು ೪

ಅಮ್ಮ ಇವರ ಮ್ಯಾಲೆ ರಮ್ಮಿ ಅರಸನ ಪ್ರೀತಿ
ಬೊಮ್ಮ ಕಂಡು ಬೆರಗೊಮ್ಮೆ ಒಡುವ ೫

## ೨೩೪

ಕೋಲ ಕೋಲೆಂದು ಕೋಮಲೆಯರೆಲ್ಲರ
ಕಾಲುಗೆಜ್ಜೆಯು ಘಿಲ್ಲು ಘಿಲುಕೆಂದು ಇಲ್ಲೆ ಪ.

ಸಿಂಧುಶಯನನ ಚಂದದಲೆ ನೋಡಿ
ಆನಂದ ಭಾಷ್ಪದ ಬಿಂದು ಉದುರುತ ಪಾಡಿ
ಮಂದಹಾಸದಿ ಮನೆಗೆ ಬಾರೆನಲು
ಕೂಡಿಕೊಂಡು ಕೃಷ್ಣನ ಸಭೆಯ ಪ್ರವೇಶಮಾಡಿ ೧

ಕರಲಾಘವ ಧರ್ಮ ಕೊಟ್ಟನು ರಾಜ ಶ್ರೇಷ್ಠನು ಮನ
ನರಹರಿಯಲ್ಲಿಟ್ಟಿಹನು ವರಸಿಂಹಾಸನ ಏರಿದ
ಶ್ರೇಷ್ಠ ತೋರಿದ ಬಲುಹರುಷ ಬೀರಿದ
ರಾಜಗೋಪಾಲನ ನೋಡುವ ವರವ ಬೇಡುವ ೨

ಜಳಕು ಜಳಕು ರಂಗ ಜಳಜಳಿಸುತ ಬರಲು
ಬೆಳಕು ತುಂಬಿತು ಬಹಳೆಮಂದಿರದಲಿ
ಥಳಕು ಥಳಕನೆ ಹೊಳೆವ ಸಿಂಹಾಸನದಲಿ
ಕುಳಿತ ಕೃಷ್ಣನು ಅಣಕಿಸಿ ಸೂರ್ಯನ ೩

ಭೇರಿ ತುತ್ತೂರಿನಾನಾ ಪರಿ ವಾದ್ಯವ
ಸಾರಿ ಕುಳಿತ ಧೀರ ಮುರಾರಿ
ಚಾರು ಮಲ್ಲಿಗೆ ಮಳೆಗರೆದ ಸುಖಸುರಿವರ
ರಾಯರು ಏನು ಧನ್ಯರೆ ರಾಜಗೋಪಾಲನ್ನ ನೋಡುವ ೪

ಹಲವು ರಾಯರು ಹಲವು ಯಾದವರು
ಬಲುಸೊಗಸಿಲೆ ಬಂದು ಕುಳಿತಾರೆ ಅವರು
ಹಲಧರನ ಹತ್ತಿರೆ ರಾಮೇಶನವರು
ಜಲಜಾಕ್ಷನ ನೋಡುತಲೊಪ್ಪುತಿಹರು ೫

ಕಡು ಚಲ್ವ ರಾಮೇಶನ ಮಡದಿಯರು
ಉಡುರಾಜ ಮುಖಿಯರು ನಡೆದು ದ್ರೌಪತಿ
ಸುಭದ್ರೆಯರ ಮಾನ ಶುದ್ಧೆಯರ
ಹರಿಯ ಅಡಿಗೆರಗುವ ರಾಜಗೋಪಾಲನ ನೋಡುವ ೬

## ೨೩೫

ಧನ್ಯರೆ ನೀವು ಧನ್ಯರೆ
ಪನ್ನಂಗ ಶಯನನ ಕನ್ಯೆಯರು
ನಮಮ್ಯಾಲೆ ಅನಂತ ದಯಮಾಡಿ
ಮನ್ನಿಸಿ ಬನ್ನಿರಿ ಪ.

ಇಂದಿರಾ ದೇವಿಯರು ಕುಂದುನೋಡದೆ
ನಮ್ಮ ಮಂದಿರಕ್ಕೆ ಬನ್ನಿರೆಂದು ದ್ರೌಪತಿಯು ೧

ಮುದ್ದು ಪಾದಕೆ ನಾನು ಬಿದ್ದು ಬೇಡುವೆ
ದಯಇದ್ದರೆ ಬಾ ಅನಿರುದ್ಧನ ರಾಣಿ ೨

ಕಡು ಬ್ಯಾಗ ಸುಭದ್ರಾ ಅಡಿಗೆರಗುತ
ಕರಹಿಡಿದು ರಾಮೇಶನ ಮಡದಿ ಬಾರಮ್ಮ ೩

## ೨೩೬

ಕುಸುಮನಾಭನ ಮಡದಿಯರು
ಹೆಸರ್ಹೇಳ ಅರ್ಥಿಲಿ
ಹಸುಳೆಯರು ಹಾಡಿ ಪಾಡಿ
ಕುಶಲದಿ ಕೋಲ ಹೊಯ್ದು ಪ.

ಬಂದು ರುಕ್ಮಿಣಿ ಭಾವೆಗೆ
ವಂದಿಸಿ ಭದ್ರೆ ದ್ರೌಪತಿ

ಮಂದಾರ ಮಲ್ಲಿಗೆ ಸಂಪಿಗೆ
ಚಂದದಿ ಸೂರ್‍ಯಾಡಿ ೧

ಕೃಷ್ಣನರಸಿಯರು ಇಬ್ಬರು
ಬುಕ್ಕಿಟ್ಟು ಸೂರ್‍ಯಾಡಿ
ಗಟ್ಟಿ ಕಂಕಣದ ಕರದಲೆ
ಮುಟ್ಟಿ ಆಲಂಗಿಸುತ ೨

ಹರದಿ ರುಕ್ಮಿಣಿ ಕೈಯ
ಮರಿಯದಲೆ ಹಿಡಿದು ದ್ರೌಪತಿ
ದೊರೆಯರ ಹೆಸರ್ಹೇಳಿ
ಮುಂದಕೆ ಬರಬೇಕೆಂದರು ೩

ಸತ್ಯಭಾಮೆಯ ಕೈಯ
ಅರ್ಥಿಲೆ ಹಿಡಿದು ದ್ರೌಪತಿ
ಮತ್ತೆ ಪತಿಗಳ ಹೆಸರು
ವಿಸ್ತರಿಸೆಂದರು ೪

ವಾರಿಜಾಕ್ಷನ ಹೆಸರು
ನಾರಿಯರಿಬ್ಬರು ಹೇಳಿ
ಶ್ರೀ ರಾಮೇಶನ ಮಡದಿಯರು
ಏರಿದರು ಆಸನವ ೫

## ೨೩೭

ಎಷ್ಟು ಸೊಗಸು ಎಷ್ಟು ಸೊಗಸ
ಕೃಷ್ಣರಾಯರು ಕುಳಿತ ಸಭೆಯು
ಅಷ್ಟದಿಕ್ಕು ಬೆಳಗಿ
ಉತ್ಕೃಷ್ಟವಾಗಿ ತೋರುವುದಮ್ಮ ಪ.

ಚದುರೆ ರುಕ್ಮಿಣಿ ಭಾಮೆ
ಹದಿನಾರು ಸಾವಿರದ
ನೂರು ಸುದತೆಯರೊಪ್ಪುತಿಹರು
ಅದ್ಭುತವಾಗಿ ಸಖಿಯೆ ೧

ಜತ್ತಾದ ದೀವಿಗೆ ಎಷ್ಟು
ರತ್ನದ ಪ್ರಕಾಶ ಎಷ್ಟು
ಹಸ್ತಿಗಮನೆಯರ ಕಾಂತಿ
ಚಿತ್ತಹರಣಮಾಡುವುದಮ್ಮ ೨

ಭ್ರಾಂತಿಗೈದು ಮುಯ್ಯ ಮರೆದು
ನಿಂತು ಕುಳಿತು ನೋಡೋರೆಷ್ಟು
ಕಂತು ನೈಯನ ಸಭೆಯ
ಇಂಥ ಅಂದವ ಎಲ್ಲೆ ಕಾಣೆ ೩

ನಟ ನರ್ತಕರು ಎಷ್ಟು
ಚಟುಲ ಚಮತ್ಕಾರಿ ಎಷ್ಟು
ವಟ ಪತ್ರ ಶಾಯಿ ಕುಳಿತ
ಸಭೆಗೆ ಸಾಟಿ ಇಲ್ಲವಮ್ಮ ೪

ವೀರ ಪಾಂಡವರ ಪುಣ್ಯ
ಯಾರು ವರ್ಣಿಸಲೊಶವ
ಶ್ರೀರಾಮೇಶ ಒಪ್ಪುತಿಹನು
ಮೂರುಲೋಕ ಮಿಗಿಲಾಯಿತಮ್ಮ ೫

## ೨೩೮

ಯಾದವರನ್ನ ಪಾಲಿಸುವ ಮುನ್ನ
ಕರುಣ ಕಟಾಕ್ಷದಿನೀ ದಯ ಮಾಡೊ ಪ.

ಮತ್ತೆ ಭಾಗೀರಥಿ ಜಲವ
ಮಿತ್ರೆ ದ್ರೌಪತಿ ಎರಿಯೆ
ಅರ್ಥಿಲೆ ಪಾದ ತೊಳೆದರು
ಅರ್ಥಿಲೆ ಪಾದ ತೊಳೆದು ಪ್ರಾರ್ಥಿಸಿದರು
ಚಿತ್ತಕ್ಕೆ ತಂದು ಕೈಕೊಳ್ಳೊ ೧

ಹರದಿ ರುಕ್ಮಿಣಿಗೆರಗಿ
ದ್ರೌಪತಿ ಭದ್ರಾ
ಆದರದಿಂದ ಪಾದ ತೊಳೆದರು
ಆದರದಿಂದ ಪಾದ ತೊಳೆದು ಪ್ರಾರ್ಥಿಸಿದರು
ಶ್ರೀದೇವಿ ಪೂಜೆ ಕೈಕೊಳ್ಳೆ ೨

ಪಂಚ ಭಕ್ಷ್ಯ ಪರಮಾನ್ನ
ಪಾಂಚಾಲಿ ಬಡಿಸಿದಳು
ಪಂಚಪಾಂಡವರ ಸಹಿತಾಗಿ
ಪಂಚಪಾಂಡವರ ಸಹಿತಾಗಿ ಶ್ರೀಕೃಷ್ಣ
ಚಂಚಲಾಗದಲೆ ಸವಿದುಂಡ ೩

ಅಕ್ಕ ರುಕ್ಮಿಣಿ ಭಾಮೆ
ಮಿಕ್ಕ ತಂಗಿಯರ ಸಹಿತ
ಸಖ್ಯ ಭಾವದಲಿ ಉಣುತಿರೆ
ಸಖ್ಯ ಭಾವದಲಿ ಉಣುತಿರೆ ಹರುಷದಿ
ದೇವಕ್ಕಳು ನೋಡಿ ಬೆರಗಾಗಿ ೪

ಇಂದು ರಾಮೇಶ ತಾನು
ಮಿಂದು ಮಡಿಯನುಟ್ಟು
ಬಂಧು ಜನಸಹಿತ ಸವಿದುಂಡ
ಬಂಧು ಜನಸಹಿತ ಸವಿದುಂಡ ಐವರಿಗೆ
ಆನಂದ ಬಡಿಸಿದನು ಅತಿ ಬ್ಯಾಗ ೫

## ೨೩೯

ನಕ್ಕರಮ್ಮ ಕೆಲದೆಯರು
ಸಖ್ಯದಿಂದ ಕೈ ಹೊಯ್ದು ಪ.

ಚಿಕ್ಕ ಸುಭದ್ರೆ ಬರೆಸಿದ ಚಿತ್ರಕ್ಕೆ
ಅಕ್ಕಜ ಬಟ್ಟಾರವರು ಭಾಳ ಅಪ

ಶೌರಿ ಕೃಷ್ಣನರಸಿಯರು ಗೌರಿಯ ಕಂಡರು
ತೋರುತಿರೆ ಬರೆಸಿದ ಚಿತ್ರ ನೀರೆ ನೀನು ವರ್ಣಿಸಲೆಂದು ೧

ನಾರಿ ಬರೆಸಿದ ಗೊಂಬೆನೋಡೆ ನೀರೊಳು ಹರಿದಾಡತಾವೆ
ಮಾರಿ ಸಣ್ಣದು ಮಾಡಿ ಭಾಳೆ ಭಾರಪೊತ್ತು ಭೋರ್‍ಯಾಡುತಾವೆ ೨

ನಲ್ಲೆನೆಲವ ಕೆದರೋದೊಂದು ಹಲ್ಲು ತೆರೆದು ಬೇಡೋದೊಂದು
ಕಲ್ಲು ಮನದಿಕೊಡಲಿ ಎತ್ತಿ ನಿಲ್ಲಗೊಡದೆ ಜನನಿಯ ೩

ಮಡದಿಯ ಒಲ್ಲದ್ದೊಂದು ಕಿಡಿಗೇಡಿ ಪುರುಷನೊಂದು
ಕಡುಬತ್ತಲೆಯಾದದ್ದೊಂದು ಹಿಡಿದೇಜಿ ಏರೋದೊಂದು ೪

ವೀರತನವೆಲ್ಲ ನೀಗಿ ನಾರಿರೂಪ ಆದದ್ದೊಂದು
ಆ ರಾಮೇಶನ ಹಾಡಿಪಾಡಿ ಸಾರಿ ಸಾರಿ ಹೊಗಳೋದೊಂದು ೫

## ೨೪೦

ಬಾರೊ ಬಾರೊ ಕೃಷ್ಣಬಾರೊ ಬಾರಯ್ಯ
ಚಾರು ನವರತ್ನದ ಹಸೆಯ ಏರು ಬಾರಯ್ಯ ಪ.

ನಾರುವ ಮೈಯವನೆ ನೀರು ಬಿಟ್ಟು ಬಾರಯ್ಯ
ಭಾರ ಹೊರೆಸೋದಿಲ್ಲ ಹಸೆಯ ಏರು ಬಾರಯ್ಯ
ಕ್ವಾರಿ ಮಸೆದು ಕೋಪಿಸಬ್ಯಾಡ
ದಾರಿಗಾಲ ಪರಿಯಬ್ಯಾಡ
ಭಾರ ಕೊಡಲಿ ಧರಿಸಿ ನೀನು ಭೋರಾಡ ಬ್ಯಾಡ ೧

ಮಡದಿಯ ಹಂಬಲದಿ ಅಡವಿ ಹಿಡಿಯ ಬ್ಯಾಡಯ್ಯ
ತುಡುಗತನದಿ ಹಾಲು ಮೊಸರು ಕುಡಿಯ ಬ್ಯಾಡಯ್ಯ
ಒಡವೆ ವಸ್ತ್ರ ಕಾಣೆ ನಿನಗೆ ಹಿಡಿದೇಜಿ
ಎಲ್ಲವೂ ಕೃಷ್ಣ ಬಡಿವಾರ ಸಾಕೊ
ನಿನ್ನ ಸಡಗರ ರಂಗಯ್ಯ ೨

ಅರ್ಥಿಲೆ ಪುರುಷ ರಾಮೇಶ ಮತ್ತೆ ಬಾರಯ್ಯ
ಜಾರವೃತ್ತಿಗಳ ಜರೆದು ಹಸೆಯ ಹತ್ತ ಬಾರಯ್ಯ
ಮಿತ್ರಿ ರುಕ್ಮಿಣಿ ಸತ್ಯಭಾವೆಯರು
ಮತ್ತೆ ಉಳಿದ ನಾರಿಯರು ಅತ್ಯಂತ ಶೋಭಿಸುತಲೆ
ಮುತ್ತಿನ ಹಸೆಯ ಏರು ಬಾರಯ್ಯ ಕೃಷ್ಣ ಬಾರೊ ಬಾರೊ ೩

## ೨೪೧

ರನ್ನ ಚಿನ್ನದ ಕೋಲ
ಹೊನ್ನು ಮುತ್ತಿನ ಕೋಲ
ಪನ್ನಂಗಶಯನ ನಲಿದು ಒಲವೊ ಕೋಲ ಪ.

ಇಂದಿರೇಶಗೆ ರಾಯ ಗಂಧ ಕಸ್ತೂರಿ ತೀಡಿ
ಮಂದಾರ ಮಲ್ಲಿಗೆ ಮಾಲೆ ಚಂದದಲ್ಹಾಕಿ ೧

ಶ್ರೀದೇವಿಯರಿಗೆ ಭದ್ರಾ ಕ್ಯಾದಿಗೆ ಮಲ್ಲಿಗೆ ಮುಡಿಸಿ
ಊದು ಪರಿಮಳ ಮ್ಯಾಲೆ ಮೋದವ ಬಟ್ಟು ೨

ಅಂಬುಜಾಕ್ಷರಿಗೆ ರಾಯ ತಾಂಬೂಲ ಅಡಿಕೆಯ ಕೊಟ್ಟು
ಕಂಬುಕಂಠರಿಗೆ ಎರಗಿ ಸಂಭ್ರಮದಿಂದ ೩

ಸರಸಿಜ ಮುಖಿಯರಿಗೆ ಅರಿಷಿಣಕುಂಕುಮ ಹಚ್ಚಿ
ಸರಸದ ವಸ್ತಗಳ ದ್ರೌಪತಿ ಅರಸಿಗೆ ಇಟ್ಟು ೪

ಪಚ್ಚಮುತ್ತಿನ ವಸ್ತ ಅಚ್ಯುತನಂಗದಲೆ ಇಟ್ಟು
ಉಚಿತ ವಸ್ತ್ರಗಳ ಕೊಟ್ಟು ಸ್ವಚ್ಚ ಮನದಿ ೫

ರುಕ್ಮಿಣಿ ಅರಸಿಯರಿಗೆ ಅನರ್ಘ್ಯ ವಸ್ತ್ರವಕೊಟ್ಟು
ಶೀಘ್ರದಿಂದ ಎರಗಿ ದ್ರೌಪತಿ ಹಿಗ್ಗಿದಳು ೬

ತಂದೆ ರಾಮೇಶಗೆ ಮಂದಗಮನೆಯರೆಲ್ಲ
ಗಂಧ ಕುಂಕುಮ ವೀಳ್ಯ ವಸ್ತ ಅಂದದಿಕೊಟ್ಟು ೭

## ೨೪೨

ಎಂಥ ಸುಖ ಎಂಥ ಸುಖ ಎಂಥ ಸುಖವ
ಲಕ್ಷ್ಮಿಕಾಂತನ ಪೂಜಿಸಿ ಸಂತೋಷ ಪಡುವರು
ಕುಂತಿ ಮಕ್ಕಳು ಕೆಲದಿ ಪ.

ಜಾಳಿಗೆ ಮುತ್ತಿನ ಕವಚಭಾಳ ರತ್ನಗಳ ವಸ್ತ
ಏಳು ಲೋಕಗಳ ಬೆಳಗುವ

ಏಳು ಲೋಕಗಳ ಬೆಳಗುವ ಪೀತಾಂಬರ
ವ್ಯಾಳಾಶಯನಗೆ ದೊರೆಕೊಟ್ಟ ೧

ಸರಮುತ್ತು ಹೆಣಿಸಿದ ಬರಿಯ ಮಾಣಿಕದ ವಸ್ತ
ಧರೆಯೆಲ್ಲ ಬೆಳಗುವ ಪಟ್ಟಾವಳಿ
ಧರೆಯೆಲ್ಲ ಬೆಳಗುವ ಪಟ್ಟಾವಳಿ ಕುಪ್ಪುಸ
ನಾರಿ ರುಕ್ಮಿಣಿಗೆ ದೊರೆ ಕೊಟ್ಟ ೨

ಮುತ್ತು ಮಾಣಿಕ ರತ್ನ ತೆತ್ತಿಸಿದ ಆಭರಣ
ಹತ್ತು ದಿಕ್ಕುಗಳ ಬೆಳಗುವ
ಹತ್ತು ದಿಕ್ಕುಗಳ ಬೆಳಗುವ ಛತ್ರ ಚಾಮರ
ಸತ್ಯಭಾಮೆಗೆ ದೊರೆಕೊಟ್ಟ ೩

ಆನೆ ಕುದುರೆಯ ಸಾಲು ಎಷ್ಟೋ ರಥಗಳು
ಮಾನದ ಕಾಲಾಳು ಮೊದಲಾಗಿ
ಮಾನದ ಕಾಲಾಳು ಮೊದಲಾಗಿ ಹರುಷದಿ
ಶ್ರೀನಿವಾಸಗೆ ದೊರೆಕೊಟ್ಟ ೪

ಕುದುರೆ ಪಲ್ಲಕ್ಕಿ ರಥಸಾಲು ಬಿರುದಿನ ನೌಬತ್ತು
ಛತ್ರ ಚಾಮರವು ಮೊದಲಾದ
ಛತ್ರ ಚಾಮರ ಮೊದಲಾದ ಉಚಿತವ
ಮುದದಿ ರುಕ್ಮಿಣಿಗೆ ದೊರೆ ಕೊಟ್ಟ ೫

ಸಾವಿರ ಅಬುಜ ಕುದರಿ ಸಾಲಾದ ರಥಗಳು
ಮ್ಯಾಲೆ ಪಲ್ಲಕ್ಕಿ ಮೊದಲಾಗಿ
ಮ್ಯಾಲೆ ಪಲ್ಲಕ್ಕಿ ಮೊದಲಾಗಿ ಛತ್ರವ
ಸತ್ಯಭಾಮೆಗೆ ದೊರೆಕೊಟ್ಟ ೬

ದೊರೆಯು ಧರ್ಮನು ಹರಿಗೆ ಬಿರುದು ಬಿನ್ನಾಣಗಳ ಕೊಟ್ಟ
ಕರಗಳ ಮುಗಿದು ಶಿರಬಾಗಿ
ಕರಗಳ ಮುಗಿದು ಶಿರಬಾಗಿ ರಾಮೇಶನ
ಪರಮ ಪ್ರೀತಿ ಇರಲೆಂದು ೭

## ೨೪೩

ಕೊಟ್ಟುರಾಯ ಸಂತುಷ್ಟನಾದ
ಕೃಷ್ಣನರಸಿಯರಿಗೆ ಶ್ರೇಷ್ಠದ ಉಚಿತವ ಪ.

ನೀಲ ಮಾಣಿಕದೊಸ್ತ ಸಾಲದೆ ಹಿಡಿದೇಜಿ
ಮೇಲು ಜರತಾರಿ ಪಟ್ಟಾವಳಿ
ಮೇಲು ಜರತಾರಿ ಪಟ್ಟಾವಳಿ ಉಚಿತವ
ನೀಲಾದೇವಿಗೆ ದೊರೆ ಕೊಟ್ಟ ೧

ಸಾರಾವಳಿಯ ಸೀರೆ ಥೋರ ಮುತ್ತಿನ ವಸ್ತ
ಹಾರಭಾರಗಳು ಹಿಡಿದೇಜಿ ಮೊದಲಾಗಿ
ಹಾರಭಾರಗಳು ಹಿಡಿದೇಜಿ ಚಾಮರವ
ನಾರಿ ಭದ್ರಾಗೆ ದೊರೆಕೊಟ್ಟ ೨

ಮುತ್ತಿನ ಝುಲ್ಲೆ ವಸ್ತ ಮತ್ತೆ ಕುದುರೆಯ ಸಾಲು
ಛತ್ರಚಾಮರ ದಿವ್ಯ ಪಟ್ಟಾವಳಿ
ಛತ್ರಚಾಮರ ಉಚಿತವ
ಮಿತ್ರವಿಂದಾಗೆ ದೊರೆ ಕೊಟ್ಟ ೩

ಬರಿಯ ಮಾಣಿಕದೊಸ್ತ ಜರದ ಪಟ್ಟಾವಳಿ ಸೀರೆ
ತುರುಗ ತಂಬಟಿಯು ಮೊದಲಾಗಿ
ತುರಗತಂಬಟಿಯು ಮೊದಲಾಗಿ ಹೆಗ್ಗಾಳೆ
ಹರದಿ ಕಾಲಿಂದಿಗೆ ದೊರೆಕೊಟ್ಟ ೪

ಲಕ್ಷ ಮಾಣಿಕದೊಸ್ತ ಪಕ್ಷಿಯಂತೆ ಹಾರುವ ಕುದುರೆ
ಲಕ್ಷ ಸೂರ್‍ಯರ ಬೆಳಕಿಲೆ
ಲಕ್ಷ ಸೂರ್‍ಯರ ಬೆಳಗುವ ಉಚಿತವ
ಲಕ್ಷಣದೇವಿಗೆ ದೊರೆಕೊಟ್ಟ ೫

ಪಚ್ಚ ರತ್ನದವಸ್ತ ಅಚ್ಚ ಜರತಾರಿ ಸೀರೆ
ಹೆಚ್ಚಿನ ಧನ ಕುದುರೆ ರಥಗಳು
ಹೆಚ್ಚಿನ ಧನ ಕುದುರೆ ರಥ ಜಾಂಬವಂತಿ
ಅಚ್ಯುತನ ಮಡದಿಗೆ ದೊರೆಕೊಟ್ಟ ೬

ಹದಿನಾರು ಸಾವಿರ ಚದುರೆಯರು
ಅದ್ಭತ ವಸ್ತ ರಥಗಳು
ಅದ್ಭುತ ವಸ್ತ ರಥಗಳು ರಾಮೇಶನ
ಸುದತೆಯರಿಗೆ ದೊರೆ ಕೊಟ್ಟ ೭

## ೨೪೪

ರಂಗಕೇಳಯ್ಯ ಬೆಳಂದಿಗಳ ಬೆಳಗುವ ವಸ್ತ್ರ
ಕಂಗಳಿಗೆ ಸೂರ್‍ಯ ಹೊಳೆವಂತೆ
ಶ್ರೀರಂಗ ಕೊಳ್ಳಯ್ಯ ಉಡುಗೊರೆ ಪ.

ಏಸೋ ಮಾಣಿಕದ್ವಸ್ತ ಹಸಿರು ಪಟ್ಟಾವಳಿ
ವಸುದೇವಗೀಗ ರಥ ತೇಜಿ ಕೊಟ್ಟ ೧

ಲೆಕ್ಕವಿಲ್ಲದೆ ರತ್ನ ಸಂಖ್ಯವಿಲ್ಲದೆ ವಸ್ತ್ರ
ದೇವಕಿಗೆ ಕೊಟ್ಟ ಪಟ್ಟಾವಳಿ ೨

ಹಲವು ಮಾಣಿಕದ ವಸ್ತ ಬೆಲೆಯಿಲ್ಲದಷ್ಟು ವಸ್ತ್ರ
ಬಲರಾಮಗೆ ಕೊಟ್ಟ ರಥಗಳ ೩

ಮುತ್ತು ಮಾಣಿಕದೊಸ್ತ ಮತ್ತೆ ಪಟ್ಟಾವಳಿ ಸೀರೆ
ಮಿತ್ರೆ ರೇವತಿಗೆ ದೊರೆ ಕೊಟ್ಟ ೪

ಸಂಭ್ರಮದಿ ಭಾನು ಮಾನು ಸಾಂಬ ಪ್ರದ್ಯುಮ್ನಗೆ
ಮೇಲೆಂಬೊ ವಸ್ತ್ರಗಳು ಪಟ್ಟಾವಳಿ ಕೊಟ್ಟ ೫

ಸರಸಿಜಾಸನ ಶಿವನ ಅರಸೆಯರಿಗೆ ಮೊದಲಾಗಿ
ಸರಸದೊಸ್ತಗಳು ರಥಕೊಟ್ಟ ೬

ಇಂದ್ರ ಚಂದ್ರನ ಮಡದಿಯರಿಗೆಬಂದ ಋಷಿಗಳಿಗೆಲ್ಲ
ಚಂದ–ದೊಸ್ತ್ರಗಳ ದೊರೆ ಕೊಟ್ಟ ೭

ಪಂಡಿತರು ರಾಯರಿಗೆ ದುಂಡು ಮುತ್ತಿನ ವಸ್ತ
ತಂಡ ತಂಡದಲಿಜವಳಿಯ ದೊರೆ ಕೊಟ್ಟ ೮

ದಾಸರುದಾಸಿಯರಿಗೆ ಸೋಸಿನ ವಸ್ತ್ರಗಳು ಸೀರೆ
ಕುಪ್ಪಸ ಜರತಾರಿಗಳ ದೊರೆ ಕೊಟ್ಟ ೯

ಗುಜ್ಜಿಯರ ಮಕ್ಕಳಿಗೆ ಗೆಜ್ಜೆ ಸರಪಳಿ ಅಂಗಿ
ಸಜ್ಜು ತೋರುವ ಅರಳಲೆ ಕೊಟ್ಟ ೧೦

ಗೊಲ್ಲನಾರಿಯರ ಕುಬ್ಜಿಗೆಲ್ಲ ರಾಮೇಶ ಕೊಟ್ಟ
ಚಲುವ ನಮ್ಮ ಮ್ಯಾಲೆ ಹರುಷಾಗೊ ೧೧

## ೨೪೫

ದೊರೆಗಳಿಗೆ ಯದುಪತಿ ಗರವು ಹಮ್ಮನೆ ಬಿಟ್ಟು
ಬರಬೇಕು ಎಂದು ಹಸೆಮೇಲೆ
ಹಸೆ ಮೇಲೆ ಹರುಷದಲೆ
ಮುದದಿ ಪಾಂಡವರು ಬರಬೇಕು ಪ.

ನೂರು ಸೂರ್ಯನ ಬೆಳಕಿನ
ಥೋರ ಮುತ್ತಿನ ಹಸೆಗೆ
ವೀರಪಾಂಡವರು ಬರಬೇಕು
ಬರಬೇಕು ಎನುತಲೆ
ನಾರಿ ರುಕ್ಮಿಣಿಯು ಕರೆದಳು ೧

ಮತ್ತೆ ಸೂರ್ಯನ ಬೆಳಕಿಲಿ
ವಿಸ್ತರಿಸಿದ ಹಸೆ ಮ್ಯಾಲೆ
ಚಿತ್ತೈಸಬೇಕು ಐವರು
ಚಿತ್ತೈಸಬೇಕು ಐವರು ಎನುತಲಿ
ಸತ್ಯಭಾಮೆಯು ಕರೆದಳು ೨

ಥೋರ ಮುತ್ತಿನ ಹಸೆಗೆ
ಚಾರು ರತ್ನವ ರಚಿಸಿ
ವೀರ ಪಾಂಡವರ ಕರೆದರು
ವೀರ ಪಾಂಡವರ ಕರೆದರು
ಆರು ನಾರಿಯರು ಹರುಷದಿ ೩

ಹದಿನಾರು ಸಾವಿರ ಚದುರೆಯರು
ಹರುಷದಿ ಅದ್ಭುತವಾಗಿ
ಬೆಳಗೋಹಸೆ ಮೇಲೆ
ಅದ್ಭುತ ಬೆಳಗೊ ಹಸೆಮೇಲೆ
ಮುದದಿ ಪಾಂಡವರ ಕರೆದರು ೪

ವೀರ ರಾಮೇಶನ ತಂಗಿಯರು
ಪೋರ ಬುದ್ಧಿಯಬಿಟ್ಟು
ನಾರಿಯರು ಬನ್ನಿರಿ ಹಸೆ ಮ್ಯಾಲೆ
ಹಸೆ ಮ್ಯಾಲೆ ಹರುಷದಿ
ನೂರು ನಾರಿಯರು ಕರೆದರು ೫

## ೨೪೬

ದಯವಿರಲಿ ವ್ಯಾಸ ದಯವಿರಲಿ
ಕೈವಲ್ಯಪತಿ ನಮಗೆ ಕರುಣೆ ಮಾಡೊ ಪೂರ್ಣ ಪ

ಚಲ್ವರಾಯರ ಮನೆಯ ಕುಲದೈವ ವ್ಯಾಸನು
ಬಲರಾಮ ಪಾದವ ತೊಳೆದನು ಪೂರ್ಣ
ಬಲರಾಮ ಪಾದ ತೊಳೆದು ಪ್ರಾರ್ಥಿಸಿದನು
ಹಲವು ಪದಾರ್ಥ ಕೈಕೊಳ್ಳೊ ಪೂರ್ಣ ೧

ತಂದೆ ವ್ಯಾಸ ಮುನಿಗೆ ಗಂಧ ಅಕ್ಷತೆ ಪುಷ್ಪ
ಚಂದದ ತುಳಸಿಜಲದಿಂದ ಪೂರ್ಣ
ಚಂದದ ತುಳಸಿಜಲದಿಂದ ಬಲರಾಮನು
ಗೋವಿಂದ ಗರ್ಪಿಸಿದ ಹರುಷದಿ ಪೂರ್ಣ ೨

ಸತ್ಯವತಿಯ ಮಗನ ಮುತ್ತು ರತ್ನದ ವಸ್ತ್ರ
ಲಕ್ಷ ಸೂರ್ರ್ಯರ ಬೆಳಕಿಲೆ ಪೂರ್ಣ
ಲಕ್ಷ ಸೂರ್ರ್ಯರ ಬೆಳಕಿಲೆ ಉಚಿತವ
ಅರ್ಥಿಲೆ ರಾಮೇಶ ಕೈಕೊಳ್ಳೊ ಪೂರ್ಣ ೩

## ೨೪೭

ದೇವಿವರಲಕ್ಷ್ಮಿ ಭಕ್ತರ ಕಾಯ್ವಿ
ಕರುಣದಿ ವರವ ನೀಡಿ ಪ.

ಸಿಂಧುಶಯನನ ದಯೆ
ಎಂದೆಂದು ಬಿಡದಂತೆ
ಚಂದದಿ ಕರುಣಿಸೆ ಇಂದಿರೆ ನಮಗೆ ೧

ಮಂದಗಮನೆಯರು ತಂದ
ಮಂದಾರ ಮಲ್ಲಿಗೆ
ಗಂಧ ಕುಂಕುಮದಿಂದ ಚಂದಾಗಿ ಅರ್ಚಿಸೆದೇವಿ ೨

ಮಿತ್ರ ವಿಂದಾದಿಗಳಿಂದ
ಮತ್ತೊಮ್ಮೆ ಲಕುಮಿಯೆ
ಮುತ್ತು ರತ್ನದ ವಸ್ತ ವಸ್ತ್ರ ವೀಳ್ಯವ ಕೊಳ್ಳದೇವಿ ೩

ನಗಧರ ರಾಮೇಶನು
ಅಗಲದಂತೆ ನಮ್ಮ
ಮುಗಿದೇವ ಕರಗಳ ನಗೆಮುಖದ ಗೌರಿ ನೀ ದೇವಿ ೪

## ೨೪೮

ಕಾಳಿ ಮೊದಲಾದವರು ಭಾಳೆ ವಸ್ತಗಳಿಟ್ಟು
ವ್ಯಾಳಾಶಯನನ ಮಡದಿಯರು ಪ.

ಬಂದು ಶ್ರೀ ಪ್ರದ್ಯುಮ್ನ ಗಂಧಹಚ್ಚಿ ಐವರಿಗೆ
ಅಂದದಲಿ ಬುಕ್ಕಿಟ್ಟು ಸೂರಾಡಿ
ಮಂದಾರಮಲ್ಲಿಗೆ ತಂದು ಕೊರಳಿಗೆ ಹಾಕಿ
ಆನಂದ ಬಟ್ಟನು ನೋಡ ಕೆಲದಿ ೧

ಅಚ್ಯುತನ ಮಡದಿಯರು ಹಚ್ಚಿ ಅರಿಷಿಣ ಕುಂಕುಮ
ಮಚ್ಚನೇತ್ರಿಯರು ದ್ರೌಪತಿಗೆ
ಅಚ್ಚಾದ ಸುಭದ್ರೆಗೆ ಹಚ್ಚಿ ಅರಿಷಿಣ ಕುಂಕುಮ
ಅಚ್ಚ ಮಲ್ಲಿಗೆಯನ್ನೆ ಮುಡಿಸಿ ೨

ಶಂಬರಾರಿಪಿತನ ಗಂಭೀರ ತಂಗಿಯರಿಗೆ
ತಾಂಬೂಲ ಅಡಿಕೆಯನೆ ಕೊಟ್ಟು

ಸಂಭ್ರಮದಿ ರಮಿ ಅರಸು ಅಂಬರಗಳ ಉಡಿಸಿ
ಮೈತುಂಬ ವಸ್ತಗಳ ಇಡಿಸಿ ೩

## ೨೪೯

ಮಚ್ಛನೇತ್ರಿಯರಿಗೆ ಉಚಿತವನೆ
ಅಚ್ಯುತ ಕೊಟ್ಟನೆಂದು
ಉಚ್ಛವದಿ ಕೋಲ
ಹೊಯ್ದೇವ ಕೋಲ ಪ.

ಮುತ್ತು ಮಾಣಿಕದ ವಸ್ತ ಮತ್ತೆ ಕುದುರೆಯ ಸಾಲು
ಛತ್ರ ಚಾಮರ ರಥಗಳು ಕೋಲ
ಛತ್ರ ಚಾಮರ ರಥ ಉಚಿತವ
ಅರ್ಥಿಲೆ ದ್ರೌಪತಿಗೆ ಹರಿಕೊಟ್ಟ ಕೋಲ ೧

ಸಾರಾವಳಿಯ ಸೀರೆ ಥೋರ ಮುತ್ತಿನ ಸರ
ಹಾರಭಾರಗಳು ಹಿಡಿದೇಜಿ
ಹಾರಭಾರಗಳು ಹಿಡಿದೇಜಿ ಉಚಿತವ
ನಾರಿ ಕುಂತೆಮ್ಮಗೆ ಹರಿ ಕೊಟ್ಟ ಕೋಲ ೨

ದುಂಡು ಮುತ್ತಿನ ವಸ್ತ ತಂಡ ತಂಡದ ಜವಳಿ
ಪಂಡಿತರಿಗೆಲ್ಲ ಉಚಿತವ
ಪಂಡಿತರಿಗೆಲ್ಲ ಉಚಿತವ ಸಭೆಯೊಳು
ಪುಂಡರಿಕಾಕ್ಷ ಇವು ಕೊಟ್ಟ ಕೋಲ ೩

ಲೆಕ್ಕ ವಿಲ್ಲದೆ ವಸ್ತ ಅಚ್ಚ ಬೆಳಕಿನ ಸೀರೆ
ಸಂಖ್ಯವಿಲ್ಲದಲೆ ರಥಗಳು
ಸಂಖ್ಯ ವಿಲ್ಲದಲೆ ರಥಗಳ ಪಾಂಡವರ
ಮಿಕ್ಕ ಮಡದಿಯರಿಗೆ ಇವು ಕೊಟ್ಟ ಕೋಲ ೪

ಅರ್ಥಿ ನೋಡಬಂದ ಜನಕೆ ಮುತ್ತು ರತ್ನದ ವಸ್ತ
ಚಿತ್ತಜನ್ಯೆಯ ಇವುಕೊಟ್ಟ ಕೋಲ
ಚಿತ್ತಜನ್ಯೆಯ್ಯ ಇವುಕೊಟ್ಟ ರಮಿ ಅರಸು
ವಿಸ್ತರಿಸಿ ಹೇಳಲೊಶವಲ್ಲ ೫

## ೨೫೦

ಅರ್ಥಿವಿನೋದವ ಮಾಡುತ
ಸ್ವಸ್ಥದಲೆ ಕುಳಿತರು ಎಲ್ಲ
ಚಿತ್ತ ಜನ್ಯೆಯನ ಸಹಿತಾಗಿ
ಸಹಿತಾಗಿ ಶಚಿವಾಣಿ
ಮುತ್ತಿನಾರತಿಯ ಬೆಳಗಿರೆ ೧

ರಂಗ ರುಕ್ಮಿಣಿ ಭಾಮೆಯರಿಗೆ
ಶೃಂಗಾರದ ಲೈವರಿಗೆ
ಅಂಗನೆಸುಭದ್ರೆ ದ್ರೌಪತಿ
ದ್ರೌಪತಿಗೆ ವಾಣಿಯರು
ಮಂಗಳಾರತಿಯ ಬೆಳಗಿರೆ ೨

ಉಲ್ಹಾಸದಲಿ ಅಮರರು
ಚಲ್ವ ರಮಿ ಅರಸಗೆ
ಮಲ್ಲಿಗೆ ಸೂರ್‍ಯಾಡಿ ಐವರು
ಐವರು ಎನುತಲಿ
ಎಲ್ಲರೂ ಹರುಷ ಬಡುವರು ೩

## ೨೫೧

ತಂಬೂರಿ ಮಾಡಿಸಿ ತರಲಿಲ್ಲವಮ್ಮ
ನಮ್ಮ ರಂಭೆ ದ್ರೌಪತಿ ಕೋಪ ಘನವಾಯಿತಮ್ಮ ಪ.

ಮೂಡಲಗಿರಿವಾಸ ನಾಡು ನಾಡಿನ ಜವಳಿ
ಬೇಡಿದ ಪರಿಯು ತರಿಸಿದನಮ್ಮ

ಬೇಡಿದ ಪರಿ ತರಿಸಿದನು ಧರ್ಮನ
ನೋಡ ಬಂದವರಿಗೆ ಉಡುಗೊರೆ ಕೆಲದಿ ೧

ಚಂದದ ಜವಳಿ ಕಂದರಿಗೊಸ್ತವು
ಇಂದಿರಾರಮಣ ತರಿಸಿದನಮ್ಮ
ಇಂದಿರಾರಮಣ ತರಿಸಿದನಮ್ಮ ಧರ್ಮನ
ಬಂದ ಜನಕೆಲ್ಲ ಉಡುಗೊರೆ ಕೆಲದಿ ೨

ಲೆಕ್ಕವಿಲ್ಲದ ಜವಳಿ ಮಕ್ಕಳಿಗೊಸ್ತವು
ಲಕ್ಕುಮಿರಮಣ ತರಿಸಿದನಮ್ಮ
ಲಕ್ಕುಮಿರಮಣ ತರಿಸಿದನಮ್ಮ ಧರ್ಮನ
ಮಿಕ್ಕ ಜನಕೆಲ್ಲ ಉಡುಗೊರೆ ಕೆಲದಿ ೩

ಏಸು ರತ್ನದ ಹೇರು ವಾಸುದೇವನು ತರಿಸಿ
ರಾಶಿ ಸುರುವಿದ ಸಭೆಯೊಳು ಕೆಲದಿ
ರಾಶಿ ಸುರುವಿದ ಸಭೆಯೊಳು ಧರ್ಮನ
ಆಸು ಜನಕೆಲ್ಲ ಉಡುಗೊರೆ ಕೆಲದಿ ೪

ಫುಲ್ಲನಾಭನು ದ್ರವ್ಯ ಚಲ್ಲಿದ ಸಭೆಯೊಳು
ಎಲ್ಲ ನಾರಿಯರು ಬಳಕೊಳ್ಳಿರಮ್ಮ
ಎಲ್ಲ ನಾರಿಯರು ಬಳಕೊಳ್ಳಿರಮ್ಮ ಎನುತಲೆ
ಚಲ್ವ ರಾಮೇಶ ಸಿಗುತಿಹನಮ್ಮ ೫

## ೨೫೨

ರಂಗನಮ್ಮನೆಗೆ ತಾ ಬಂದ
ಮತ್ತೇನು ತಂದ ಪ.

ಜಗದೋದ್ಧಾರ ಸಭೆಗೆ ಬಂದ
ನಗುವ ಪರಿಯ ಹೇಳಿದ್ದು ತಂದ

ಬಗೆ ಬಗೆ ವಸ್ತ್ರ ಕೊಳ್ಳಿರೆಂದ
ಪಗಡಿ ಧರ್ಮಗೆ ತರಲಿಲ್ಲೆಂದ ೧

ವಾಣಿ ಮಾವ ಮನೆಗೆ ಬಂದ
ಜಾಣತನವ ಹೇಳಿದ್ದು ತಂದ
ಮಾಣಿಕ ಮುತ್ತು ಕೊಳ್ಳಿರೆಂದ
ಕ್ವಾಣನ ಧರ್ಮಗೆ. ತರಲಿಲ್ಲೆಂದ ೨

ಕೃಷ್ಣರಾಯಸಭೆಗೆ ಬಂದ
ಎಷ್ಟು ಜಂಬ ಹೇಳಿದ್ದು ತಂದ
ಪಟ್ಟಾವಳಿ ಕೊಳ್ಳಿರೆಂದ
ಹುಟ್ಟು ಭೀಮಗೆತರಲಿಲ್ಲೆಂದ ೩

ನಳಿನಾಕ್ಷ ಸಭೆಯೊಳು ಬಂದ
ಹೊಳೆವೊ ಎಷ್ಟು ಹೇಳಿದ್ದು ತಂದ
ಝಳಿಸೋವಸ್ತ್ರ ಕೊಳ್ಳಿರೆಂದ
ಬಳೆಯ ಪಾರ್ಥಗೆ ತರಲಿಲ್ಲೆಂದ ೪

ರಾಜ್ಯ ಲಕ್ಷಣ ನಿನಗಿಲ್ಲೆಂದ
ಮಾಜುದಾ ಕುಲ ಧರ್ಮ ಕುಂದ
ತೇಜಿ ಮುಂದೆ ಓಡಿದ್ದು ಚಂದ
ಸೋಜಿಗವಲ್ಲ ನಕುಲನೆಂದ ೫

ಸುಮನಸರು ನಗುವೊರೆಂದ
ಭ್ರಮೆಯ ಕಳೆದ್ಯೊ ಸಹದೇವ ಎಂದ
ಅಮಿತ ದನವ ಕಾಯ್ದ್ಯೊ ಛಂದ
ರಮಿಯ ಅರಸು ನಗುವ ನೆಂದ ೬

ಅಂದ ಮಾತಿಗೆ ಬಲರಾಮ ಹೀಗೆಂದ
ಚಂದ ವಾಯಿತು ಕುಶಲವೆಂದ

ನಿಂದ್ಯವ ನೀ ಮಾಡಿಕೊ ಎಂದ
ಇಂದಿರೇಶಗೆ ತಿಳಿಸಿರೆಂದ ೭

## ೨೫೩

ಕೊಟ್ಟ ಉಡುಗೊರೆ
ಉತ್ಕೃಷ್ಟ ಗೋಪಾಲ
ಧಿಟ್ಟ ಪಾಂಡವರಿಗೆ ಉಚಿತವ ಕೆಲದಿ ಪ.

ಏಸವೊ ಮಾಣಿಕದೊಸ್ತ ದೆಸೆಗೆಲ್ಲ ಬೆಳಗುವ ವಸ್ತ
ಹೊಸ ಮುತ್ತಿನ ರಥ ಹಿಡಿದೇಜಿ ಕೆಲದಿ
ಹೊಸ ಮುತ್ತಿನ ರಥ ಹಿಡಿದೇಜಿ ಶೂರಪಾಲಿ
ಅಶ್ವತ್ಥ ನರಸಿಂಹಗೆ ಹರಿ ಕೊಟ್ಟ ಕೆಲದಿ ೧

ಪಟ್ಟಾವಳಿಯ ಸೀರೆ ಧಿಟ್ಟಾದ ಪಲ್ಲಕ್ಕಿ
ಬಟಮುತ್ತಿನ ರಥ ಹಿಡಿದೇಜಿ
ಬಟಮುತ್ತಿನ ರಥ ಹಿಡಿದೇಜಿ ಶೂರಪಾಲಿ
ಕೃಷ್ಣಾ ಭಾಗೀರಥಿಗೆ ಹರಿಕೊಟ್ಟ ಕೆಲದಿ ೨

ಏಸವೊ ಮಾಣಿಕದೊಸ್ತ ಹಸಿರು ಪಟ್ಟಾವಳಿವಸ್ತ್ರ
ಕುಶಲದ ಪುಸ್ತಕವ ನಡುವಿಟ್ಟು ಕೆಲದಿ
ಕುಶಲದ ಪುಸ್ತಕವ ನಡುವಿಟ್ಟು ಶ್ರೀಕೃಷ್ಣ
ಋಷಿಗಳಿಗುಚಿತವ ಹರಿ ಕೊಟ್ಟ ಕೆಲದಿ ೩

ಸಾರಾವಳಿ ಸೀರೆ ಥೋರ ಮುತ್ತಿನ ಸರ
ಹಾರ ಭಾರಗಳು ನಡುವಿಟ್ಟು ಕೆಲದಿ
ಹಾರ ಭಾರಗಳು ನಡುವಿಟ್ಟು ಉಚಿತವ
ನಾರಿ ಕುಂತೆಮ್ಮಗೆ ಹರಿಕೊಟ್ಟ ಕೆಲದಿ ೪

ಲೆಕ್ಕವಿಲ್ಲದೆ ವಸ್ತ್ರ ಸಂಖೆವಿಲ್ಲದ ರಥ
ಆಕ್ಷಆನೆಗಳು ರಥಗಳು ಕೆಲದಿ
ಅಕ್ಷ ಅನೆ ರಥಗಳು ಬಿಲ್ಲು ಬಾಣ
ಮುಖ್ಯ ಧರ್ಮನಿಗೆ ಹರಿ ಕೊಟ್ಟ ಕೆಲದಿ ೫

ಮಿತಿಯಿಲ್ಲದೆ ಬಾಣ ಬಿಲ್ಲುಗಳು ರಥ ಕುದುರೆಗಳು
ಅತಿಶಯ ಬೆಳಗುವ ಆಭರಣ ಕೆಲದಿ
ಅತಿಶಯ ಬೆಳಗುವ ಆಭರಣ ಪಟ್ಟಾವಳಿ
ಕುಂತಿಸುತ ಭೀಮ ರಾಯಗೆ ಹರಿಕೊಟ್ಟ ಕೆಲದಿ ೬

ಮದ ಸೊಕ್ಕಿದಾನೆಗಳು ರಥ ಬಿಲ್ಲುಗಳು ಬಾಣ
ಅದ್ಭುತ ಬೆಳಗುವ ಆಭರಣವ ಕೆಲದಿ
ಅದ್ಭುತವಾಗಿ ಬೆಳಗುವ ಪೀತಾಂಬರ
ಚದುರ ಪಾರ್ಥಗೆ ಹರಿಕೊಟ್ಟ ಕೆಲದಿ ೭

ಆನೆ ಹಯ ರಥಗಳು ಏನೆಂಬೊ ಬಿಲ್ಲಾಳು
ನಾನಾ ರತ್ನಗಳು ಆಭರಣವೆ ಕೆಲದಿ
ನಾನಾ ರತ್ನ ಆಭರಣವೆ ನಕುಲಗೆ
ಮಾನದ ವಸ್ತ್ರಗಳು ಹರಿಕೊಟ್ಟ ಕೆಲದಿ ೮

ಉತ್ತಮ ಕುದುರೆಗಳು ಹತ್ತುವ ರಥ ಕೋಟಿ
ಮತ್ತೆ ಬಿಲ್ಲುಗಳು ಆಭರಣ ಕೆಲದಿ
ಮತ್ತೆ ಬಿಲ್ಲು ಆಭರಣವಸ್ತ್ರ ಗಳ ಸಹದೇವಗೆ
ಅರ್ಥಿಲೆ ರಾಮೇಶ ಇವು ಕೊಟ್ಟ ಕೆಲದಿ ೯

## ೨೫೪

ರಂಗರಾಯರ ಮುಂದೆ
ಇವರ ಕೊಂಗ ಬುದ್ಧಿ
ಕೋಲ ಹೊಯ್ಸಿ
ಹಂಗಿನ ಮುಯ್ಯ ಕಳೆದೆವ
ಇವರ ತಂಗಿಯರ ಮಾರಿ ಭಂಗಿಸಿ ನಾವು ಪ.

ಅಪ್ಪ ಅರಸು ಆಗೊ ಇವರ
ತಪ್ಪಿನ ಮಾತಿಲೆ ಸೋಲಿಸಿ
ನಿಮ್ಮಪ್ಪ ನಿಮ್ಮರಸನೆಂಬೊ
ಚಪ್ಪಾಳೆಯನಿಕ್ಕಿಸಿ ನಾವು ೧

ಒಡ ಹುಟ್ಟಿದಣ್ಣನ ದ್ರೌಪತಿ
ಒಡಗೂಡುತಲಿ ತಾ ಇಡುವರೆ
ಈ ಆಣೆ ನಮಗೆ
ನುಡಿದ ಆ ನುಡಿಗೆ ನಾಚಿಸಿ ಇವರನು ೨

ಹುಟ್ಟು ಹೊಂದೊದೆಂಬೋದಿವರ
ಬಿಟ್ಟು ಕಡೆಗೆ ಮಾಡಿಸಿನಾವು
ಶ್ರೀ ಕೃಷ್ಣನಂಘ್ರಿ ಕಮಲವನ್ನು
ಎಷ್ಟು ದಯದಿ ತೋರಿಸಿ ೩

ಅಷ್ಟ ಮದದ ತಮವು ಎಂಬೊ
ಕುಟ್ಟಿ ಹಿಟ್ಟು ಮಾಡಿಸಿ ನಾವು
ಸಿಟ್ಟು ಕೋಪವೆಂಬೊ ಬಣವಿ ಒಟ್ಟಿ
ಕೆಂಡ ಹೇರಿಸಿ ನಾವು ೪

ಸತ್ವರಜ ತಮವು ಎಂಬೊ
ಕತ್ತಲೆಯ ಅಡಗಿಸಿ ನಾವು
ಮತ್ತೆ ಜ್ಞಾನ ಸೂರ್ಯನ
ಪ್ರಶಸ್ತ ಉದಯ ಮಾಡಿಸಿ ೫

ನೀತಿ ತಪ್ಪಿದ ಬಾಲೆಯರ
ಭೂತ ಹೊರಗೆ ಹೊರಡಿಸಿನಾವು
ಮಾತ್ರಗಳೆಂಬೊ ಇವರ
ಗಾತ್ರ ಬಿಟ್ಟು ದೂರ ಇಡಿಸಿ ೬

ಸಂಚಿತ ಗಾಮಿಯು ಇವರ
ಕಿಂಚಿತುಳಿಯದಲೆ ಹಾರಿಸಿ ನಾವು
ಪಂಚ ಪಾಂಡವರ ಮಡದಿ
ಪಾಂಚಾಲಿಯ ನಾಚಿಸಿ ೭

ದಶೇಂದ್ರಿಯಗಳೆಂಬೊ ಕುದುರೆಗಳ
ದಶ ದಿಕ್ಕಿಗೆ ಓಡಿಸಿ ನಾವು
ಮುಸುಕು ಹಾಕಿದ ಅಂಗವನು
ಕೊಸರಿ ಕೊಸರಿ ಝೂಡಿಸಿ ೮

ನಿಂದ್ಯವಾದ ಪಟಲು ವಿದ್ಯೆ
ಚಿಂದಿ ಚಿಂದಿ ಮಾಡಿಸಿ ನಾವು
ತಂದೆ ರಾಮೇಶನ ಪಾದಕೆ
ತಂದು ಇವರ ಹೊಂದಿಸಿ ೯

## ೨೫೫

ಜಯಪತ್ರವ ತಾರೆ ಜಾಣೆ
ಮುಂದಕೆ ಬಾರೆ
ವೈಭವದಿ ಆಣೆಯಿಟ್ಟು
ಓಡಿದ್ಯಾತಕೆ ನೀರೆ ಪ

ಬಿಂಕ ಬಿಡಿಸಿಕೊಂಡೆವೆಂದು
ದ್ರೌಪತಿ ಶಂಕಿಸಿಕೊಂಡೆ ನೀರೆ
ಪಂಕಜಾಕ್ಷಿ ರುಕ್ಮಿಣಿ ಮುಂದೆ
ಕಿಂಕರಳೆನ್ನು ಬಾರೆ ನೀರೆ ೧

ಸೋಗೆಗಣ್ಣಿನ ಭದ್ರೆ ನೀನು
ಆಣೆ ಇಟ್ಟ ಬಗೆಯೆ ನಮಗೆ

ನಾಗವೇಣಿ ರುಕ್ಮಿಣಿ ಮುಂದೆ
ಮೂಗಿನ ಗೆರೆಯ ತೆಗಿಯೆ ೨

ಇಟ್ಟ ಆಣೆತಪ್ಪಿಗೆ
ಕೈಯ ಕಟ್ಟಿಕೊಂಡು ಬಾರೆ
ಕೊಟ್ಟು ಬಿರುದು ಸೋತೆವೆಂದು
ಅಟ್ಟಾಸದಲಿ ಸಾರೆ ೩

ಪಂಥ ಕಳೆದುಕೊಂಡಿರೆಂದು
ಎಂಥ ನಗುತಾರಲ್ಲ
ಇಂಥ ಮಾನ ಭಂಗವಾಗಿ ನಿಂತಿರ್ಯಾತಕೆ ಇಲ್ಲೆ
ನೀವು ಕುಳಿತಿರ್ಯಾತಕೆ ಇಲ್ಲೆ ೪

ಸೋತೆವಮ್ಮ ನಿಮಗೆ
ರಮಿನಾಥನರಸಿಗೆ ಎಂದು
ರುಕ್ಮಿಣಿಗೆ ನೀತಿಲೆಜಯಪತ್ರ
ಕೊಟ್ಟು ದ್ರೌಪತಿ ಎರಗಿದಳು ೫

## ೨೫೬

ಮುದ್ದು ಪಾಂಡವರನ್ನ ಗೆದ್ದು ಕೈಚಪ್ಪರಿಸಿ
ಗತ್ತಿಲೆಕಾಳಿ ರುಕ್ಮಿಣಿ ಹೊಯಿಸಿದಳು ಪ.

ಅಚ್ಯುತ ಪಾಂಡವರಿಗೆ ಹುಚ್ಚು ಹಿಡಿಸಿದನೆಂದು
ಉತ್ಸಾಹದಿಂದ ಭೇರಿ ಹೊಯ್ಸಿದಳು ೧

ಮಡದಿ ದ್ರೌಪತಿ ಭದ್ರಾ ಅಡಗಿದರು ಅಂಜಿ ನಮಗೆ
ಎಂದು ಬೆಡಗಿನ ಡಂಕಿ ರುಕ್ಮಿಣಿ ಹೊಯ್ಸಿದಳು ೨

ಕಾಂತೆ ದ್ರೌಪತಿ ಭದ್ರಾ ಭ್ರಾಂತರಾದರೆಂದು
ಕಾಂತೆಯರು ಕೈ ಹೊಯ್ದು ನಿಂತಾರೆಲ್ಲ ೩

ಪುಟ್ಟಸುಭದ್ರೆಯು ಧಿಟ್ಟ ದ್ರೌಪತಾದೇವಿ
ಬಿಟ್ಟಟ್ಟೆರು ಆಣಿ ಎಂದು ಘಟ್ಟನುಡಿದು ೪

ಧಿಟ್ಟೆರಿಬ್ಬರಗರವು ಕುಟ್ಟಿ ಚೂರ್ಣವ ಮಾಡಿ
ಬಿಟ್ಟರು ಆಣಿಯ ಎಂದು ಸ್ಪಷ್ಟ ನುಡಿದರು ೫

ತಪ್ಪು ಸತ್ಯಭಾಮೆ ತಪ್ಪು ತಪ್ಪು ರುಕ್ಮಿಣಿ ದೇವಿ ತಪ್ಪು
ತಪ್ಪು ತಪ್ಪು ಎಂದು ಕೈಯ ಒಪ್ಪಾಗಿ ಮುಗಿದರು ೬

ತಂದೆ ರಾಮೇಶನ ಮುಂದೆ ರುಕ್ಮಿಣಿದೇವಿ
ವಂದಿಸಿ ದೇವಿಯರೆಲ್ಲ ನುಡಿದರು ೭

## ೨೫೭

ಬಂದ ಜನರು ಬ್ಯಾಗ ಏಳಿರೀಗ
ಗೋವಿಂದ ತೆರಳಿದ
ದೇವ ದುಂದುಭಿಯಾದವು ಪ.

ಭೇರಿ ಬಡಿದವು ತುತ್ತೂರಿಗಳ್ಹಿಡಿದವು
ವಾರಿಜ ಗಂಟೆ ಮೊದಲಾಗಿ
ವಾರಿಜ ಗಂಟೆ ಮೊದಲಾಗಿ ಸಾರಿದವು
ಏರಿದನು ಕೃಷ್ಣ ರಥವೊಂದ ೧

ಜೇಷ್ಠ ಬಹುಳ ಉತ್ಕೃಷ್ಠ ಪಂಚಮಿತಿಥಿ
ಶ್ರೇಷ್ಠವಾಗಿದ್ದ ಬುಧವಾರ
ಶ್ರೇಷ್ಠವಾಗಿದ್ದ ಬುಧವಾ೭ರ ಈ ಕವನ
ಶ್ರೀ ಕೃಷ್ಣಗರ್ಪಿಸಿದೆ ಹರುಷದಿ ೨

ಭಾವ ಸಂವತ್ಸರದಿ ದೇವಾಧಿದೇವನ
ಪಾವನವಾದ ಚರಿತೆಯ
ಪಾವನವಾದ ಚರಿತೆಯ ರಚಿಸಿದೆ
ದೇವ ಮಧ್ವೇಶಕೊಳ್ಳೊ ೩

ಮುದ್ಗಲ್ಲ ವಾಸನ ಶುದ್ಧನಾಮದವರು
ಮುದ್ದು ಪಾದಗಳ ಸ್ಮರಿಸುತ
ಮುದ್ದು ಪಾದಗಳ ಸ್ಮರಿಸುತ ರಚಿಸಿದೆ
ಅಪದ್ಧ ನೋಡದಲೆ ಹರಿಕೊಳ್ಳೊ ೪

ಮೂಢಳು ನಾನೊಂದು ಬೇಡಿ ಬಯಸಿಕೊಂಬೆ
ಮಾಡಿದೆ ರಚನೆ ಮನ ಉಬ್ಬಿ
ಮಾಡಿದೆ ರಚನೆ ಮನ ಉಬ್ಬಿ ರಮಿಯರಸು
ಕೂಡಿಸೊ ನಿನ್ನವರ ಚರಣದಲಿ ೫

## ೨೫೮

ಕೃಷ್ಣ ತನ್ನ ರೂಪ ಇಟ್ಟ
ಉತ್ಕೃಷ್ಟ ಭಕ್ತರ ಮನೆ ಬಿಟ್ಟು ಹೋಗಲಾರದೆ ಪ.

ಮಿತಿಯಿಲ್ಲದೆ ರೂಪದಿಂದ ಕುಂತಿ ಸುತರ
ಭಕ್ತಿಗೆ ಲಕ್ಷ್ಮೀಪತಿ ಅಲ್ಲೆ ನಿಂತ
ಮಿತರೂಪ ದ್ವಾರಕೆಗೆ ಬಂದ
ಇಂಥ ಅತಿಶಯ ಶಕ್ತಿ ನೋಡುವದೆಂಥ ಚಂದ ೧

ಚೆಲ್ವನ ನೋಡುವರು ಜನರು
ಮನೆ ಒಲ್ಲದೆ ಜರಿದಾತನಲ್ಲೆ ಇದ್ದರು
ಫುಲ್ಲನಾಭನ ರೂಪ ಚಾರು ಇದಕೆಲ್ಲರೂ ನಗಲು
ಹೃದಯದಂಬರದಲ್ಲಿ ತುಂಬಿದರು ೨

ಧಿಟ್ಟ ಬೊಮ್ಮಾದಿಗಳೆ ಸಾಕ್ಷಿ
ಇದನಷ್ಟು ಬಲ್ಲಂಥ ಶಿವನೊಬ್ಬ ಸಾಕ್ಷಿ
ಅಷ್ಟ ದಿಕ್‌ಪಾಲಕರೆ ಸಾಕ್ಷಿ
ಮತ್ತಷ್ಟು ವೈಭವದ ಸುರರೆಲ್ಲ ಸಾಕ್ಷಿ ೩

ಭಕ್ತ ಪ್ರಲ್ಹಾದನೆ ಸಾಕ್ಷಿ
ಇಂಥ ಉತ್ತುಮನೆನಿಸುವ ಧ್ರುವನೊಬ್ಬ ಸಾಕ್ಷಿ
ಸತ್ಯ ಅಜಮಿಳನೊಬ್ಬ ಸಾಕ್ಷಿ
ನಮ್ಮ ಮಿತ್ರಿ ದ್ರೌಪತಾದೇವಿ ಅತ್ಯಂತ ಸಾಕ್ಷಿ ೪

ಪಂಡಿತ ಬಲಿಯೊಬ್ಬ ಸಾಕ್ಷಿ
ಜಲದಿ ಕಂಡ ಅಕ್ರೂರ ಅವನೊಬ್ಬ ಸಾಕ್ಷಿ
ಪುಂಡರೀಕನೊಬ್ಬ ಸಾಕ್ಷಿ
ರಮಿಗಂಡ ಭಕ್ತರ ಕಾದು ಕೊಂಡಿಹ ನಿಜ ೫

## ೨೫೯

ನಡೆರಂಗ ನಡೆ ಕೃಷ್ಣ ನಡೆ ಮನೆಗೆ
ಧೃಡ ಭಕ್ತರ ಕೂಡಿ ದ್ವಾರಕೆಗೆ ಪ.

ಬಂದ ಜನರಿಗೆಲ್ಲ ಗಂಧ ಕುಂಕುಮವನಿಟ್ಟು
ತಂದು ತಾಂಬೂಲ ಕೊಡುತಲೆ
ತಾಂಬೂಲ ಕೊಡುತಲೆ ರುಕ್ಮಿಣಿ
ಕುಂದವ ಮಾಡಿ ಬಗೆಯದೆ ೧

ಮಿತ್ರೆ ದ್ರೌಪತಿದೇವಿ ಮತ್ತೆ ಪಾದಕ್ಕೆರಗಿ
ಅತ್ಯಂತ ನಾವು ನುಡಿದೆವ
ಅತ್ಯಂತ ನಾವು ನುಡಿದ ಅಪರಾಧವ
ಚಿತ್ತದೊಳಿಡದೆ ಕರುಣಿಸು ೨

ಅರಗಿಳಿ ಮಾತಿನ ಹರದಿ ಸುಭದ್ರಾ ತಾನು
ಎರಗಿದಳು ಭಾವೆ ಚರಣಕ್ಕೆ
ಎರಗಿದಳು ಭಾವೆ ಚರಣಕ್ಕೆ ರುಕ್ಮಿಣಿಯ
ಪರಮ ಆಶೀರ್ವಾದ ಇರಲೆಂದು ೩

ಅತ್ತಿಗೆಯರೆಂದು ಅರ್ಥಿಲಾಡಿದ ಮಾತು
ಮತ್ತೊಂದು ನೀವು ತಿಳಿಯದೆ
ಮತ್ತೊಂದು ನೀವು ತಿಳಿಯದೆ ರಂಗನ
ಮಿತ್ರೆಯರೆ ನಿಮ್ಮ ದಯವಿರಲಿ ೪

ಬಂದು ಪಾಂಡವರೆಲ್ಲ ಇಂದಿರೇಶಗೆ ಎರಗಿ
ಚಂದಾಗಿ ತಾವು ಕೈ ಮುಗಿದು
ಚಂದಾಗಿ ತಾವು ಕೈ ಮುಗಿದು ನುಡಿದರು
ಕುಂದುಗಳೆಣಿಸದೆ ಸಲುಹೆಂದು ೫

ಭಾವ ಮೈದುನತನದಿ ನಾವೊಂದು ವಿನಯದಿ
ಯಾವ ತಪ್ಪುಗಳ ಎಣಿಸದೆ
ಯಾವ ತಪ್ಪುಗಳ ಎಣಿಸದೆ ಶ್ರೀ ಕೃಷ್ಣ
ದೇವ ನೀ ಮಾಡೊ ದಯವನೆ ೬

ತಂದೆ ರಾಮೇಶಗೆ ನಾವಂದ ಮಾತುಗಳೆಲ್ಲ
ಕುಂದವ ಮಾಡಿ ಬಗೆಯದೆ
ಕುಂದವ ಮಾಡಿ ಬಗೆಯದೆ ನಮ್ಮನೆಗೆ
ಬಂದು ಬಂದೊಮ್ಮೆ ಸಲುಹಯ್ಯ ೭

## ೨೬೦

ಬಲ್ಲಿದ ಗುರುಗಳಿಗೆ
ಎಲ್ಲ ಹಿರಿಯರಿಗೆ ಎರಗಿ
ಬಲ್ಲಷ್ಟು ತತ್ವ ರಚಿಸಿದೆ ಕೋಲ
ಬಲ್ಲಷ್ಟು ತತ್ವ ರಚಿಸಿದೆ
ಲಕ್ಷ್ಮಿವಲ್ಲಭನಿದಕೆ ಒಲಿಯಲಿ ಕೋಲ ೧

ಪತಿಗಳ ದಯದಿ ಮಾತು ಪತಿ ರಚಿಸಿದ
ಶ್ರೀಪತಿ ಗುಣನಿಧಿ ಕವನವ ಕೋಲ
ಶ್ರೀಪತಿ ಗುಣನಿಧಿ ಕವನವು ವಿಸ್ತರಕೆ
ಮಧ್ವ ಮತದ ಜನ
ತಿದ್ದಿ ಕೊಡಬಹುದು ಕೋಲ ೨

ರಾಮಕೃಷ್ಣ ದೈವರು ಪ್ರೇಮದ ನುಡಿಗಳು
ನೇಮ ನಿಷ್ಠೆಯಲೆ ಶ್ರವಣವೆ ಕೋಲ
ನೇಮ ನಿಷ್ಠಯಲಿ ಶ್ರವಣವ ಮಾಡಲು
ನಮ್ಮ ಕಾಮನ ಪಿತನು
ಕೈಹಿಡಿವ ಕೋಲ ೩

ಮುದ್ದುರಂಗನ ಕಥೆ
ಬುದ್ಧಿ ಸಾಲದೆ ಅಪದ್ಧವೆ ಇರಲಿ
ಅತಿದಯದಿ ಕೋಲ
ಅಪದ್ಧವೆ ಇರಲಿ ಅತಿದಯದಿ ಪಾಂಡುರಂಗ
ವಿದ್ವಜ್ಜನ ವಂದ್ಯ ಕೈಕೊಳ್ಳೊ ಕೋಲ ೪

ಅರಸಿ ರುಕ್ಮಿಣಿ ಭಾವೆಗೆ
ಸರಸಲ್ಲಾಡಿದ ಮಾತು
ಹರುಷ ಮನದಿಂದ ಶ್ರವಣವೆ ಕೋಲ
ಹರುಷ ಮನದಿಂದಶ್ರವಣ ಮಾಡಲು
ನಮ್ಮ ನರಸಿಂಹನಿದಕೆ ಒಲಿವನು ಕೋಲ ೫

ಹರದಿ ರುಕ್ಮಿಣಿ ಭಾಮೆ
ತಿರುಗಿಸಿದ ಮುಯ್ಯವ
ಆದರದಿಂದ ಕೇಳಿದವರಿಗೆ ಕೋಲ
ಆದರದಿಂದ ಕೇಳಿದವರಿಗೆ ಶ್ರೀಕೃಷ್ಣ
ಪರಮ ಪದವಿಯನೆ ಕೊಡುವನು ಕೋಲ ೬

ಮಚ್ಛ ನೇತ್ರಿಯರು ತಂದ
ಅಚ್ಛಾದ ಮುಯ್ಯವ
ಸ್ವಚ್ಛಮನದಿಂದ ಶ್ರವಣವಕೋಲ
ಸ್ವಚ್ಛಮನದಿಂದ ಶ್ರವಣವ ಮಾಡಲು
ನಮ್ಮ ಅಚ್ಯುತನಿದಕೆ ಒಲಿವನು ಕೋಲ ೭

ಮಂದಗಮನೆಯರು ತಂದ
ಚಂದದ ಮುಯ್ಯವ
ಆನಂದ ಮನದಿಂದ ಶ್ರವಣವ ಕೋಲ
ಆನಂದ ಮನದಿಂದ ಶ್ರವಣವ ಮಾಡಲು
ನಮ್ಮ ಅನಂತ ನಿದಕೆ ಒಲಿವನು ಕೋಲ ೮

ಕಾಂತೆ ರುಕ್ಮಿಣಿ ಭಾಮೆಗೆ
ಪಂಥಲಾಡಿದ ಮಾತು
ಸಂತೋಷದಿಂದ ಶ್ರವಣವ ಕೋಲ
ಸಂತೋಷದಿಂದ ಶ್ರವಣವ ಮಾಡಲು ಭಾಗ್ಯ
ಸಂತಾನ ಕೊಡುವ ರಮಿ ಅರಸು ಕೋಲ ೯

## ೨೬೧

ಆನಂದ ಭರಿತರಾಗಿ ಆಚಾರ್ಯರು
ಆನಂದ ಭರಿತರಾಗಿ
ಕುಂದಣ ರತ್ನ ದೊಸ್ತ
ಚಂದದ ವಸ್ತ್ರ
ನಮಗೆ ಅಂದಣವ ಕೊಟ್ಟರು ಪ.

ವ್ಯಾಲಾಶಯನನ ಕಥೆ
ಕೇಳುತ ಬೆಳತನಕ
ಭಾಳ ಹರುಷದಿಂದ
ಉಚಿತವ ಕೊಟ್ಟರು ೧

ಮುತ್ತು ಮಾಣಿಕದೊಸ್ತ
ಮತ್ತೆ ಕುದರಿಯ ಸಾಲು
ಛತ್ರ ಚಾಮರ ನಮಗೆ
ಅರ್ಥಿಲೆ ಕೊಟ್ಟರು ೨

ಬರಿಯ ಮಾಣಿಕ ದೊಸ್ತ
ಜರದ ಪಟ್ಟಾವಳಿ ವಸ್ತ್ರ
ಹಿರಿಯರಿಗೆ ಮುತ್ತಿನ
ಸರಗಳ ಕೊಟ್ಟರು ೩

ಅಚ್ಚ ಮುತ್ತಿನ ವಸ್ತ
ಹೆಚ್ಚಿನ ಜರತಾರಿ ವಸ್ತ್ರ
ಹೆಚ್ಚಿನ ಕುದುರೆ ನಮಗೆ
ಉಚ್ಚವದಿ ಕೊಟ್ಟರು ೪

ರಮಿಯರಸನ ಕಥೆ
ತಮ್ಮ ಮನ ಉಬ್ಬಿ ಕೇಳಿ
ಅಮ್ಮ ರತ್ನದ ಕವಚ
ನಮಗೆ ಕೊಟ್ಟರು ೫

## ೨೬೨

ಹಿಡಿರಂಗ ಜವಳಿ
ಕೊಡು ಉಡುಗೊರೆ
ಪಾಲ್ಗಡಲ ಶಯನ
ಭೂಪತಿ ಗುಡುಗೊರೆ ಪ.

ತಟಿತ್ತಾ ಸರಸವುಳ್ಳ
ಪಟ್ಟಾವಳಿ ಧೋತರ

ದಟ್ಟಿತ ವಾಗಿದ್ದ ಬಿಡಿಮುತ್ತು
ದಟ್ಟಿತವಾಗಿದ್ದ ಬಿಡಿ ಮುತ್ತು ಮುತ್ತಿನಕಂಠಿ
ಮಠದವರಿಗೆ ಕೊಟ್ಟ ಉಡುಗೊರೆ ೧

ಬಟ್ಟು ಗೋಲಂಚಿನ
ಧಿಟ್ಟಾದ ಧೋತರ
ಬಟ್ಟಿಗುಂಗುರ ಉಡದಾರ
ಬಟ್ಟಿಗುಂಗುರ ಉಡದಾರ ಶೂರಪಾಲಿ
ಕಟ್ಟಿಯವರಿಗೆ ಕೊಟ್ಟ ಉಡುಗೊರೆ ೨

ಹತ್ತು ಬಟ್ಟಿಗೆ ತಕ್ಕ
ಮುತ್ತಿನ ಉಂಗುರ
ಮತ್ತೆ ಎಲೆ ಅಡಕೆ ನಡುವಿಟ್ಟು
ಎಲೆ ಅಡಕೆ ನಡುವಿಟ್ಟು ಇವರ ಮನೆ
ಜೋಯಿಸರಿಗೆ ಕೊಟ್ಟ ಉಡುಗೊರೆ ೩

ಅಕ್ಕ ಕೊಲ್ಹಾಪುರ
ಮುಖ್ಯ ಪಂಢರಾಪುರ
ಚಿಕ್ಕ ಸಾತಾರೆ ಪುಣೆಯವ
ಚಿಕ್ಕ ಸಾತಾರೆ ಪುಣೆಯವ ಪೈಠಣ ಶಾಲು
ಮುಖ್ಯ ಗಲಗಲಿಯವರಿಗೆ ಉಡುಗೊರೆ ೪

ಕಂಕಣವಾಡಿ ಮುಂದೆ
ಡೊಂಕಾಗಿ ಹರಿದಾಳು
ವಂಶಿಯ ಜೋಡು ನಡುವಿಟ್ಟು
ವಂಶಿಯ ಜೋಡು ನಡುವಿಟ್ಟು ಗಲಗಲಿಯ
ಮುತ್ತೈದೆಯರಿಗೆಲ್ಲ ಉಡುಗೊರೆ ೫

ಅಧ್ಯಾಪಕ ಜನರೊಳು
ವಿದ್ವಾಂಸರಿಗೆಲ್ಲ
ಶುದ್ಧ ರತ್ನದಲಿ ರಚಿಸಿದ

ಶುದ್ಧ ರತ್ನದಲಿ ರಚಿಸಿದ ಉಂಗುರ
ವಿದ್ವಾಂಸರಿಗೆಲ್ಲ ಉಡುಗೊರೆ ೬

ನಾಲ್ಕು ಸಾವಿರ ಉಂಗುರ
ಅನೇಕ ಬಗೆ ಶಾಲು
ಈ ಕಾಲದಲೆ ತರಿಸೇವ
ಈ ಕಾಲದಲೆ ತರಿಸೇವ ರಮಿಯರಸು
ಕೊಟ್ಟ ಅನೇಕ ಜನರಿಗೆ ಉಡುಗೊರೆ ೭

# ಅನುಬಂಧಗಳು

೧. ಕಠಿಣ ಶಬ್ದಗಳ ಅರ್ಥ

೨. ಪೂರ್ವ ಕಥೆಗಳು ಮತ್ತು ಲಘು ಟಿಪ್ಪಣಿಗಳು

೩. ಅಂಕಿತನಾಮಸೂಚಿ

೪. ಒಡವೆಗಳು ಮತ್ತು ವಾದ್ಯ ಪರಿಕರಗಳು

೫. ಕೀರ್ತನೆಗಳ ಆಕಾರಾದಿ ಸೂಚಿ

# ಅನುಬಂಧ-೧

## ಕಠಿಣ ಶಬ್ದಗಳ ಅರ್ಥ

ಅಂಕ - ತೊಡೆ
ಅಂದಣ - ಪಲ್ಲಕ್ಕಿ, ಮೇಣೆ
ಅರ್ಕ - ಸೂರ್ಯ
ಅಕ್ಕಸ - ರೋಷ ಆಕ್ರೋಶ ಕನಿಕರದಿಂದಕೂಡಿದ
ಅಕ್ಕಜ - ಆಶ್ಚರ್ಯ ಹೊಂದು
ಅಕಳಂಕ - ನಿರ್ಮಲ
ಅಟ್ಟಳ - ಅಟ್ಟ, ಎತ್ತರದ ಮೇಲಿನ ಕೊಠಡಿ
ಅಟ್ಟಾಲ - ಉಪ್ಪರಿಗೆ, ಕೊತ್ತಳ
ಅಟ್ಟಾವಳಿ - ಮಹಡಿಗಳ ಸಾಲು
ಅಟ್ಟುಣ್ಣು - ಅಡಿಗೆ ಮಾಡಿಕೊಂಡು ಉಣ್ಣು
ಅನಸ್ತ - ಕೊನೆಯಿಲ್ಲದ, ನಾಶವಾಗದ
ಅನುಗಾಣೆ - ಸ್ವರೂಪ ತಿಳಿಯದಿರುವಿಕೆ
ಅನುಗಾಲ - ಯಾವಾಗಲೂ
ಅಪದ್ಧ - ಸೂಕ್ತವಲ್ಲದ
ಅಪರ್ಣ - ಪಾರ್ವತಿ
ಅಮ್ಮಿಳ್ಳ - ಮುಚ್ಚು
ಅರಿವು - ತಿಳಿಸು
ಅಲವರು - ಆಶೆಪಡು, ಹಂಬಲಿಸು
ಅಲವುತ - ಅಲ್ಲಾಡಿಸುತ
ಆತ-ಪ - ಕಾಂತಿ
ಆಪನೊಳು - ನೀರೊಳು
ಆರಣ - ವೇದಗಳಲ್ಲಿ ಒಂದು ಭಾಗ
ಇಳಾವರ್ತ - ಭೂಮಿಯನ್ನು ಸುತ್ತಿದ
ಉಂಬೊ - ಉಣ್ಣುವ
ಉಚ್ಛವದಿ - ಉತ್ಸವದಿ
ಉಡುರಾಜ - ಚಂದ್ರ
ಉನ್ಮತ್ತ - ಕೊಬ್ಬಿದ
ಉಪ್ಪರಿಗೆ - ಮಹಡಿ
ಉರವಣಿಗೆ - ಆತುರ, ಸಂಭ್ರಮ
ಎಳಿಗಾವು - ಕರು
ಒರಲಿ - ಅರಚುತ್ತ
ಒರಳ - ಪ್ರೀತಿ, ಕೂಗಾಟ, ಒರಳುಕಲ್ಲು
ಕಂಜನಾಭ - ಬ್ರಹ್ಮ

ಕಂತುನಯ್ಯ – ವಿಷ್ಣು
ಕಕ್ಕಸ ಕರ್ಕಶ – ಕಠಿಣ
ಕಕುಲಾತಿ – ಮೋಹ
ಕಜ್ಜಲ – ಕಾಡಿಗೆ
ಕಟ್ಟಾಣಿ – ಶ್ರೇಷ್ಠವಾದ
ಕದುಪು – ಕೆನ್ನೆ
ಕನಿ – ಮಿಂಚು ಪಕ್ವ ಪ್ರೌಢೆ
ಕಪೋತ – ಪಾರಿವಾಳ
ಕರಣೆ – ಊದುವ ಒಂದು ವಾದ್ಯ
ಕವತುಕ ಕೌತುಕ – ಕುತೂಹಲ
ಕಾಕು – ವ್ಯಂಗ್ಯ ಕೊಂಕು
ಕಾಣಿ – ಕಾಣಿಕೆ, ಚಿಕ್ಕನಾಣ್ಯ
ಕಾಲಲವ – ಅತ್ಯಲ್ಪ ವೇಳೆ
ಕಿಲ್ಬಿಷ – ಕೊಳೆ ಕಳಂಕ
ಕುಂಭಿ – ಆನೆ
ಕುಂಭಿಣಿ – ಹೆಣ್ಣಾನೆ
ಕುಮುದ – ಕೆಂದಾವರೆ
ಕೆಂಚಿ – ಚಲುವೆ, ಸುಂದರಿ, ಕೆಂಪಾದವಳು
ಕೆಲದಿ – ಗೆಳತಿ
ಕೈಪ – ಕಾವಿ ವಸ್ತ್ರ
ಕೊಂಗ – ಕಪಿ, ಒಂದು ಜಾತಿ ಕುದುರೆ
ಕೊಂಡೆಗಾರ – ಚಾಡಿಕೋರ
ಕೊಪ್ಪು – ಕಿವಿಯ ಮೇಲ್ಭಾಗದಲ್ಲಿ ಹಾಕುವ ಆಭರಣ
ಕೋವಳ – ಕೋಮಲತೆ
ಕ್ರತುಪತಿ – ವಿಷ್ಣು
ಕ್ಲುಪ್ತ – ಗೊತ್ತುಪಡಿಸಿದ ನಿಗದಿಯಾದ
ಖಂಡಿ – ಒಂದು ಬಗೆಯ ತೂಕ
ಖನಿ – ಗಣಿ
ಖಲ – ಕಣ ಯುದ್ಧ
ಖೇಳಿ ಕೇಳಿ – ಲೀಲೆ
ಗರುವ – ಗರ್ವ
ಗಾಂಡೀವಿ – ಅರ್ಜುನ
ಗಿಳಿಬೋದು – ಕಂಬದ ಮೇಲೆ ತೊಲೆ ನಿಲ್ಲಿಸಲು ಗಿಳಿಯಾಕೃತಿಯ ಮಾಡಿದ ಸಾಧನ
ಗುಜ್ಜಿ – ಕುಬ್ಜೆ, ಹುಡುಗಿ
ಗೊಡವೆ – ಸಂಪರ್ಕ, ಉಸಾಬರಿ
ಚಂದ್ರಗಾವಿ ಸೀರೆ – ಸಿಂಧೂರ ಬಣ್ಣದ ಸೀರೆ
ಚಂದ್ರಶಾಲೆ – ಪಡಸಾಲೆ, ಉಪ್ಪರಿಗೆ
ಚಟುಲ – ತ್ವರೆ, ಸುಂದರವಾದ
ಚರಿ – ಆಚರಣೆ, ಚರ್ಯೆ
ಚರಿಸು – ನಡೆ, ಸಂಚರಿಸು
ಚಳ – ಅಲುಗುವ
ಚಾರಿ – ಪಗಡೆಕಾಯಿ
ಚಾರುಗುಣ – ಉತ್ತಮಗುಣ
ಚಾರುವದನೆ – ಚಲುವಾದ ಮುಖದವಳು

ಚಾಲುವರಿ – ಅಂಗಲಾಚು ಬೇಡು
ಚಿಗಿಳು – ಚಿಮ್ಮು
ಚೂಡ – ಪೇಟ
ಜಟಿ – ಜಡೆಯುಳ್ಳವ ಋಷಿ
ಜತ್ತಾಗಿ – ಜತನದಿಂದ
ಜಮ್ಮ – ಇನಾಮು
ಜಗಲಿ – ಕಟ್ಟೆ
ಜರಿದು – ನಿಂದಿಸು, ತಿರಸ್ಕರಿಸು
ಜಳಕು – ಅಲುಗು
ಜಾಂಬೂನ – ಚಿನ್ನ ಹಾಕಿದ ಬಟ್ಟೆ, ಜರತಾರಿ ಶಾಲು ದಾಂಬರ
ಜಾತಿಗಾರ – ಅಭಿನಯಗಾರ
ಜಾರತನ – ವ್ಯಭಿಚಾರ
ಜಾಲಗಾರುತಿ – ಮೋಸಗಾರ್ತಿ, ಗರ್ವಿಷ್ಠೆ
ಜುಮ್ಮನೆ – ಕೂಡಲೆ
ಜೂಲು – ಪ್ರಾಣಿಗಳ ಮೈಮೇಲೆ ಅಲಂಕಾರಕ್ಕಾಗಿ ಹಾಕುವ ಹೊದಿಕೆ
ಡಂಕರ – ಚರ್ಮವಾದ್ಯಗಾರ
ಡಂಕಿ – ಚರ್ಮವಾದ್ಯ ಹಲಿಗೆ
ಢಕ್ಕಿ – ತಮಟೆ ಚರ್ಮವಾದ್ಯ
ತಂಬಟೆ – ಚರ್ಮವಾದ್ಯ
ತಟಿತ್ತು – ಮಿಂಚು
ತತಿ – ಗುಂಪು
ತರಗ – ಒಣಗಿದ, ಕುಂದಿದ
ತರಣಿ – ಸೂರ್ಯ ಡೋಣಿ
ತರುಳೆ – ಬಾಲೆ ಚಂಚಲೆ
ತಳಪು – ಹೊಳಪು ಕಾಂತಿ ಮಿನುಗು
ತಳ್ಳಿ – ಸಂಬಂಧ ನಿಂದೆ ಅಪವಾದ
ತಳ್ಳಿಕೋರ – ಚಾಡಿಕೋರ
ತಾಪತಿ – ರೇಷ್ಮೆ ಬಟ್ಟೆ
ತಾರಕ್ಕಿ – ನಕ್ಷತ್ರ ತಾರೆ
ತುರಗ – ಕುದುರೆ
ತುಷ್ಟ – ಸಂತೋಷಗೊಂಡ
ತ್ರುಟಿ – ಕ್ಷಣಮಾತ್ರ
ತೆತ್ತಿಸು – ಜೋಡಿಸು
ದರಾಧರ – ಮುಗುಳು ನಗು
ದವನ – ಸುವಾಸನೆಯ ಒಂದು ಗಿಡ
ದಿಂಡ – ಅಹಂಕಾರಿ
ದಿವ – ಸ್ವರ್ಗ ದಿನ ಆಕಾಶ
ದುಂದುಭಿ – ನಗಾರಿ
ಧುರ – ಯುದ್ಧ ಕೆಟ್ಟ
ದೆಶೆಗೇಡಿ – ಕಂಗೆಟ್ಟ
ಧಮಕು – ಧಿಮಾಕು, ಸೊಕ್ಕು, ಗರ್ವ
ನಗ – ಒಡವೆ, ಆಭರಣ, ಪರ್ವತ

ನಗೆ ಪಾಟಲು – ನಗೆಗೇಡು
ನದ – ದೊಡ್ಡ ಹೊಳೆ
ನಿಂದು – ನಿಂತು
ನಿರತ – ಆಸಕ್ತ, ತೊಡಗಿಸಿಕೊಂಡ
ನಿರುತಿ – ರಾಕ್ಷಸ
ನಿವಹ – ಗುಂಪು
ನಿವಾಳಿ – ದೃಷ್ಟಿದೋಷ ತೆಗೆ
ನೆಗಳು – ಪ್ರಸಿದ್ಧಿ ಪಡೆ
ನೊಸಲು – ಹಣೆ
ಪಂಕಜ ಮುಖಿ – ತಾವರೆ ಮೊಗದವಳು
ಪಟಲು – [illegible]ಗೆ ಚಾವಣಿ ತೆರೆ ಗುಂಪು
ಪನ್ನಿ – ಬಿಂಕ
ಪರಿಮೋದವ – ಅತ್ಯಾನಂದ
ಪರಿವೆ – ಅರಿವು, ಜ್ಞಾನ
ಪ್ರತಿ – ಸಮ ವಿರುದ್ಧ
ಪ್ರವಹಿ – ಹರಿ, ಮುಂದೆ ಸಾಗು
ಪ್ರವಾಳ – ಹವಳ, ಚಿಗುರು
ಪಾಟನ – ಒಡೆಯುವುದು, ಕೀಳುವುದು
ಪಾಟಸಿ – ಗಮನಿಸು ಸಂತೋಷಪಡು
ಪಾಟು – ಬೀಳುವಿಕೆ, ಪಾಡು
ಪಾತಕ – ದೋಷ
ಪಾರಿ – ಪಹರೆ, ಕಾವಲು
ಪುಂಡಗಾರ – ತಂಟೆಕೋರ, ತುಂಟ
ಪುನ್ನಾಗ – ಸುರಹೊನ್ನೆ, ಬಿಳಿಯಕಮಲ
ಪೂಗಿಫಲ – ಅಡಿಕೆ
ಪೆಂಡಿ – ಪಿಂಡಿ, ಕಟ್ಟು
ಪೊರೆ – ಕಾಪಾಡು
ಪೋರತನ – ಹುಡುಗು ಬುದ್ಧಿ, ಬಾಲ್ಯಾವಸ್ಥೆ
ಬಡಿವಾರ – ಬಡಾಯಿ
ಭಾವಕಿ – ಸುಂದರಿ
ಬಿನುಗು – ಅಲ್ಪವಾದ
ಬುಕ್ಕಿಟ್ಟು – ಸುಗಂಧದ ಪುಡಿ
ಬೂಟಕ – ಮೋಸ ಕಪಟ
ಭಂಡಗಾರ – ವಿದೂಷಕ
ಭೃತ್ಯ – ಸೇವಕ ಆಳು
ಮಡುಹು – ಸಂಹರಿಸು
ಮಣಿಗಣ – ಶ್ರೇಷ್ಠ ರತ್ನ
ಮದಕ – ಗರ್ವದ
ಮಧೂಕ – ಒಂದು ಜಾತಿಯ ಗಿಡ
ಮನಸಿಜನಯ್ಯ – ಮನ್ಮಥ
ಮನ್ನಾರಿ – ಮನೋಹರ, ಸುಂದರ
ಮಹಲ – ಭವನ
ಮಾಗಧ – ಹೊಗಳು ಭಟ್ಟ, ಸ್ತುತಿಪಾಠಕ
ಮಾಂಜು – ಅಡಗಿಟ್ಟುಕೊಳ್ಳು
ಮುಂಡಾಸು – ರುಮಾಲು
ಮುನಿಸು – ಸಿಟ್ಟು
ಮುನ್ನೆ – ಮೊದಲು, ಮುಂಚೆ
ಮುರುಕು – ತುಂಡಾದ, ಒಯ್ಯಾರದ
ಮುರಹರ – ಕೃಷ್ಣ

ಮೇಲುದು - ಮೇಲೆ ಹೊದೆವ ಬಟ್ಟೆ ಮತ್ತು ಅದರ ಸೆರಗು ಉತ್ತರೀಯ ಮುಂತಾದವು
ರದ್ದಿಲೆ - ಜೋರಾಗಿ, ಒರಟಾಗಿ
ರೌಸದಿ - ಅತಿ-ಗರ್ಜನೆ
ಲಾಲಿ - ಜೋಗುಳ
ಲಾವಳಿಗೆ - ಗುಂಪು, ಸಮೂಹ
ಲಾಳಿ - ಆಯುಧ
ಲೆಂಡ - ತುಂಟ, ಪುಂಡ
ಲೋಲ - ಆಸಕ್ತ, ಚಂಚಲ, ಲಂಪಟ
ವಂಕಿ - ತೋಳುಬಂದಿ, ಕೇಯೂರ
ವೃಂದಾರಕ - ದೇವತೆ, ಶ್ರೇಷ್ಠ
ವೃತ್ತಾಂತ - ಘಟನೆ, ಸಮಾಚಾರ
ವತ್ಸ - ಪುತ್ರ
ವನಜನಾಭ - ವಿಷ್ಣು
ವಯಿರ ವೈರ - ವಜ್ರ
ವರ - ಶ್ರೇಷ್ಠವಾದ
ವರಳೆ - ಹೆಣ್ಣು ಹಂಸ
ವಲ್ಲಿ - ಉತ್ತರೀಯ, ಬಳ್ಳಿ, ಧೋತರ
ವಸುಧಿ ಪಾಲಕ - ರಾಜ
ವ್ಯಜನ - ಬೀಸಣಿಗೆ
ವಾಂಛಿತ - ಅಪೇಕ್ಷಿಸಿದ
ವಾಕ್ಕು - ಮಾತು
ವಾಜಿ - ಕುದುರೆ
ವಾಯಸ - ಕಾಗೆ
ವಾರಿಜ - ತಾವರೆ
ವಾರಿಜನಾಭ - ವಿಷ್ಣು
ವಾರಿಜ ಭವ - ಬ್ರಹ್ಮ
ವಾರಿಜಮುಖಿ - ತಾವರೆ ಮೊಗದವಳು
ವಾಲೈಸು - ಉತ್ಸಾಹ, ಓಲು, ಬಾಗು, ತೂಗು
ವಾಲಗೈಸು - ನಾಗಸ್ವರ, ಊದಿಸು
ವ್ಯಾಲಾಶಯನ - ವಿಷ್ಣು
ವ್ರಾತ್ಯ - ಹೀನ
ವಿತಂಡ - ಒಣ ಹರಟೆ
ವಿಗಡ - ಪರಾಕ್ರಮಿ, ಶೂರ , ಕೆಟ್ಟ
ವಿತ್ತಪ - ಕುಬೇರ
ವಿಬುಧ - ಪಂಡಿತ
ವಿಭವ - ವೈಭವ, ಸಡಗರ
ವಿರಂಚಿ - ಬ್ರಹ್ಮ-ವಿಷ್ಣು, ಶಿವ
ವಿರಸ - ವಿರೋಧ, ಸತ್ವವಿಲ್ಲದ
ವಿರಾಜಿಸು - ಹೊಳಪುಳ್ಳದ್ದು
ವೀತದೋಷ - ದೋಷವಿಲ್ಲದ, ನಿರ್ದೋಷ
ವೇದಗೋಚರ - ದೇವರು
ಶಂಬರಾರಿಪಿತ - ವಿಷ್ಣು, ಮನ್ಮಥನ ತಂದೆ
ಶೃತ್ಯರ್ಥ - ವೇದಪ್ರಮಾಣ
ಶಾರ್ದೂಲ - ವ್ಯಾಘ್ರ
ಶ್ರೀದ ಶ್ರೀದ - ಕುಬೇರ

ಷಟ್‌ಶಾಸ್ತ್ರ - ಸಾಂಖ್ಯ ಯೋಗ ನ್ಯಾಯ ವೈಶೇಷಿಕ ಮೀಮಾಂಶೆ ವೇದಾಂತಗಳೆಂದು ಆರುಶಾಸ್ತ್ರಗಳು
ಸಕಲಾತಿ - ಕಸೂತಿ ಹಾಕಿದ ಬಟ್ಟೆ
ಸರಸಿಜ ಮುಖಿ - ತಾವರೆ ಮೊಗದವಳು
ಸರಿಯವರು - ಓರಗೆಯವರು
ಸಮ್ಮಿಶಿಡು - ಆಲೋಚಿಸು ಮುಗಿಸು
ಸಬಳ - ಈಟಿ
ಸಾಕಲ್ಯ - ಪರಿಪೂರ್ಣತೆ
ಸಾದಿನ - ಅರ್ವಾಚೀನ ಸವಾರಿ
ಸಾಮಿತ್ಯ - ಅರೆಪಾಲು
ಸಾಲೆವಲ್ಲಿ - ಬಟ್ಟೆ, ಸೀರೆ, ಧೋತರ
ಸುಕರ - ದಯಾಪರ, ಸುಂದರವಾದ
ಸುಕೃತ - ಪುಣ್ಯಕಾರ್ಯ
ಸುದತಿ - ಸುಂದರಿ
ಸುಪ್ಪಾಣಿ - ಶ್ರೇಷ್ಠ
ಸುಮನಸಾರ - ಮಕರಂದ
ಸುರತ - ರತಿ
ಸುರತರು - ಕಲ್ಪವೃಕ್ಷ
ಸ್ತುತ್ಯಾರ್ಹ - ಪ್ರಶಂಸೆಗೆ ಯೋಗ್ಯವಾದ
ಸುರೂಪಿ - ಚಲುವಿ
ಸೇಳ - ಒನಪು, ಒಯ್ಯಾರ
ಸೊಲ್ಲುಸೊಲ್ಲಿಗೆ - ಮಾತು ಮಾತಿಗೆ
ಸೋಗೆಗಣ್ಣು - ಕಾಡಿಗೆ ಹಚ್ಚಿದಕಣ್ಣು
ಸೋಸಿಲೆ - ಸೌಶೀಲ್ಯದಿಂದ
ಸೌಪರ್ಣ - ಗರುಡ
ಸ್ವರ್ಧುನಿ - ಗಂಗೆ
ಹಗರಣ - ಹರಟೆ, ಗೊಂದಲ
ಹದನದಿ - ಔಚಿತ್ಯ, ಸರಿಯಾದ ರೀತಿಯಲ್ಲಿ
ಹದ್ದುವಾಹನ - ಗರುಡವಾಹನ- ವಿಷ್ಣು
ಹಮ್ಮು - ಯೋಚಿಸು, ಗರ್ವ
ಹರಲ - ಹರಡು, ಹರಹು
ಹರದೆಯರು - ಮುತ್ತೈದೆಯರು
ಹಸ್ತಿಗಮನೆ - ಗಜಗಮನೆ
ಹಸೆ - ಶುಭಕಾರ್ಯಗಳಲ್ಲಿ ಹಾಕುವ ಪೀಠ
ಹಾಟಕಾಂಬರ - ಹೊನ್ನಹಾಕಿನೆಯ್ದ ಬಟ್ಟೆ
ಹುತಭುಕ್ತ - ಅಗ್ನಿ
ಹೆಗ್ಗಳ - ಹೆಚ್ಚಳ
ಹೆಗ್ಗಾಳೆ - ದೊಡ್ಡಕಹಳೆ
ಹೊಯ್ಯಿ - ಸುರಿ
ಹೊಲ್ಲ - ಹೀನ, ನಿಂದ್ಯ
ಹೋಕೆ - ಯುಕ್ತಿ, ಮೋಸ, ಕಪಟ

# ಅನುಬಂಧ-೨

## ಪೂರ್ವ ಕಥೆಗಳು ಮತ್ತು ಲಘು ಟಿಪ್ಪಣಿಗಳು

### ಕೀರ್ತನೆ ೧೦

**(ನು. ೬) ಮಾತೆಯ ಬಂಧನ ಕಡೆದ ಬಲು ಧೀರ :** ಇದು ಶ್ರೀ ಹರಿಯ ಎಂಟನೆಯ ಅವತಾರವಾದ ಕೃಷ್ಣಾವತಾರದ ಪ್ರಸಂಗವಾಗಿದೆ.

ತನ್ನ ಸೋದರಿ ದೇವಕಿಯಿಂದ ಜನಿಸಿದ ಎಂಟನೆಯ ಮಗನಿಂದ ತನ್ನ ಸಂಹಾರ ವಿದೆಯೆಂದು ತಿಳಿದ ಸೋದರಮಾವ ಕಂಸ, ವಸುದೇವ ದೇವಕಿಯರನ್ನು ತನ್ನ ಕಾವಲಿನಲ್ಲಿಡುವನು. ಅಲ್ಲಿಯೆ ಶ್ರೀಕೃಷ್ಣ ಜನಿಸಿ, ತಾಯಿಯ ಬಂಧನ ಕಳಚುವನು.

### ಕೀರ್ತನೆ ೧೦

**(ಸು. ೮) ತ್ರಿಪುರ ಸಂಹಾರಕ :** ತ್ರಿಪುರಗಳನ್ನು ಸಂಹಾರ ಮಾಡಿದವ ರುದ್ರ, ಶಿವನು ತ್ರಿಪುರ ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಇವರ ಪುರಗಳನ್ನು ಸಂಹಾರ ಮಾಡಿದ್ದು.

### ಕೀರ್ತನೆ ೧೩

**(ನು. ೧) ಅಚ್ಯುತನ ನಖತಾಕಿ ಬಿಚ್ಚಿ ಬ್ರಹ್ಮಾಂಡವು :** ತ್ರಿವಿಕ್ರಮಾವತಾರದಲ್ಲಿ ಶ್ರೀವಿಷ್ಣುವಿನ ಎಡಗಾಲಿನ ಅಂಗುಷ್ಠದ ಉಗುರು ಬ್ರಹ್ಮಾಂಡಕ್ಕೆ ತಾಕಿದಾಗ ಅವನ ಅಡಿಗಳಿಂದ ಗಂಗೋತ್ಪತ್ತಿಯಾಗುವದು

### ಕೀರ್ತನೆ ೨೦

**(ನು. ೨) ಆಪನೊಳು ಮನೆಕಟ್ಟಿ :** ಸಮುದ್ರದಲ್ಲಿ ಅರಮನೆ ನಿರ್ಮಿಸಿದ್ದ ಶ್ರೀಕೃಷ್ಣ ಅದೇ ದ್ವಾರಕೆ.

## ಕೀರ್ತನೆ ೩೦

**(ಅ.ಪ) ಶ್ರೀವತ್ಸ :** ಶ್ರೀವತ್ಸ ಎನ್ನುವುದು ಭೃಗು ಮಹರ್ಷಿಗಳು ವಿಷ್ಣುವಿನ ಎದೆ ಮೇಲೆ ಒದ್ದಾಗ ಉಂಟಾದ ಗುರುತು ಇದನ್ನು ಶ್ರೀ ವಿಷ್ಣು ಆಭರಣದಂತೆ ಧರಿಸಿದ

## ಕೀರ್ತನೆ ೩೭

**(ನು. ೨) ದುರ್ಗಾದೇವಿಯ ರಮಣ ಭಾರ್ಗವಿರಾಮಗೆ :** ಲಕ್ಷ್ಮಿದೇವಿಯ ರೂಪಗಳೇ – ಶ್ರೀ–ಭೂ–ದುರ್ಗಾ ಭಾರ್ಗವಿರಾಮ ಪರಶುರಮಾವತಾರ

## ಕೀರ್ತನೆ ೪೦

**(ಪಲ್ಲ) ಕರವೀರಪುರವ ಸೇರಿದಳು :** ಭೃಗು ಋಷಿಯು ಶ್ರೀ ವಿಷ್ಣುವಿನ ಎದೆಗೆ ಒದ್ದ ಪ್ರಕರಣದಿಂದಾಗಿ ಅಲ್ಲಿ ನೆಲೆಸಿದ್ದ ಲಕ್ಷ್ಮಿದೇವಿಯು ಕೋಪಿಸಿಕೊಂಡು ವೈಕುಂಠವನ್ನೇ ತೊರೆದು, ಭೂಲೋಕ ವಾಸಿಯಾಗಿ ಕೊಲ್ಹಾಪುರವನ್ನು ಸೇರುವಳು

## ಕೀರ್ತನೆ ೫೦

**(ನು. ೧) ವೇದ ತಂದಾತನ ಪಾದವ ಕಂಡು ಬಂದೆ :** ಹಯಗ್ರೀವನೆಂಬ ರಾಕ್ಷಸನು ವೇದಗಳನ್ನು ಅಪಹರಿಸಿ ಸಮುದ್ರದಲ್ಲಿ ಅಡಗಿದ್ದಾಗ ಹರಿಯು ಮತ್ಸ್ಯಾವತಾರ ತಾಳಿ ಅವನನ್ನು ಕೊಂದು ಆ ವೇದಗಳನ್ನೆಲ್ಲ ಮರಳಿ ತಂದನು. ದಶಾವತಾರದಲ್ಲಿ ಇದು ಮೊದಲನೆಯ ಅವತಾರ

## ಕೀರ್ತನೆ ೬೨

**(ನು. ೨) ಶಂಬರಾರಿ ಪಿತನ :** ದಕ್ಷಪುತ್ರನಾದ ಈತ ಪಾತಾಳ ವಾಸಿಯಾಗಿದ್ದ ಮಹಾ ಮಾಯಾವಿ. ಕೃಷ್ಣನ ಮಗನಾದ ಪ್ರದ್ಯುಮ್ನನಿಂದ ತಾನು ಹತನಾಗುವೆನೆಂದು ತಿಳಿದು ಆತನನ್ನು ಕೊಲ್ಲಲು ಪ್ರಯತ್ನಿಸಿ ತಾನು ಆತನಿಂದ ಹತನಾಗುತ್ತಾನೆ.

ಹೀಗಾಗಿ ಶಂಬರಾರಿ –>ಪ್ರದ್ಯುಮ್ನನ ತಂದೆ –>ಕೃಷ್ಣ

## ಕೀರ್ತನೆ ೬೬

**(ನು .೭) ಸತಿಯು ಸುಭದ್ರೆ ನೀನು ಯತಿಯ ಬೆನ್ನತ್ತಿದಾಗ :** ಅರ್ಜುನನು ಸನ್ಯಾಸಿ ವೇಷದಿಂದ ಸುಭದ್ರೆಯನ್ನು ಓಡಿಸಿಕೊಂಡು ಒಯ್ಯುವ ಸನ್ನಿವೇಶ

## ಕೀರ್ತನೆ ೬೮

**(ನು. ೬) ಪಲ್ಯಾದ ತುದಿಯಿಂದ ಎಲ್ಲಪದಾರ್ಥ ಮಾಡಿ ಬಲ್ಲಿದ ಮುನಿಗೆ ಉಣಿಸಿದಿ :** ಪಾಂಡವರು ವನವಾಸದಲ್ಲಿದ್ದಾಗ ನಡೆದ ದೂರ್ವಾಸಾತಿಥ್ಯದ ಪ್ರಕರಣ ಪ್ರಸಂಗವಿದು. ಎಲ್ಲರ ಭೋಜನಾ ನಂತರ ಆಗಮಿಸಿದ ದೂರ್ವಾಸ ಮುನಿಗಳಿಗೆ ದ್ರೌಪತಿಯು ಅಕ್ಷಯ ಪಾತ್ರೆಗೆ ಅಂಟಿದ ಚೂರನ್ನೇ ಭಕ್ತಿಯಿಂದ ಬಡಿಸಿ ತೃಪ್ತಿಪಡಿಸಿ ಪ್ರಸನ್ನಗೊಳಿಸಿದಳು

## ಕೀರ್ತನೆ ೬೮

**(ನು. ೯) ಅರಸನ ಮಡದಿ ಒಬ್ಬ ಅರಸನ ಮನೆಯಲ್ಲಿ ನಿರುತ ದಾಸಿಯೆಂದು ಇರುತಲೆ** : ಪಾಂಡವರು ಅಜ್ಞಾತವಾಸದಲ್ಲಿ ವೇಷ ಧರಿಸಿ ವಿರಾಟರಾಜನ ಅರಮನೆಯಲ್ಲಿದ್ದಾಗಿನ ಪ್ರಸಂಗ. ದ್ರೌಪತಿ ದಾಸಿಯಾಗಿ, ಧರ್ಮ ಕಂಕನಾಗಿ, ಭೀಮ ಬಾಣಸಿಗನಾಗಿ ಅರ್ಜುನ ಬೃಹನ್ನಳೆಯಾಗಿ, ನಕುಲಸಹದೇವರು ದನಗಾಹಿಗಳಾಗಿ ಅವನ ಸೇವೆಯಲ್ಲಿ ಅಜ್ಞಾತವಾಸವನ್ನು ಅನುಭವಿಸಿದರು

## ಕೀರ್ತನೆ ೭೧

**(ನು. ೧-೩) ನಾರಿಯರಿಬ್ಬರ ಬಿಟ್ಟು ನೀರೊಳಡಗಿದ ಹಾಗೂ ಬತ್ತಲಾಗಿ ಎನ್ನ ಹತ್ತಿಲೆ :** ವಿಷ್ಣುವಿನ ದಶಾವತಾರಗಳ ಬಣ್ಣನೆಯೇ ಹರಿದಾಸರಿಗೆ ಪ್ರಿಯವಾದದ್ದು. ಹೀಗಾಗಿ ಇಲ್ಲಿ ಅವನ ಅವತಾರಗಳನ್ನು ವರ್ಣಿಸುತ್ತ ವರಾಹಾವತಾರದಲ್ಲಿ ಶ್ರೀ-ದುರ್ಗಾ ಈರ್ವರನ್ನೂ ಬಿಟ್ಟು ನೀರೊಳಡಗಿದ್ದ ಭೂಮಿಯನ್ನು ಹೊರ ತೆಗೆದದ್ದು ಹಾಗೂ ಬೌದ್ಧ ಮತ್ತು ಕಲ್ಕಿ ಅವತಾರಗಳ ವರ್ಣನೆಯಿದೆ.

## ಕೀರ್ತನೆ ೭೩

**(ನು. ೨) ಗಂಡನ ಬಳಗವ ಕಂಡರೆ ನಿನಗಾಗದು** : ಪಾಂಡವರು ದ್ರೌಪದಿಯ ವಿವಾಹಾ ನಂತರ ಧೃತರಾಷ್ಟ್ರನ ಅರಮನೆಯಲ್ಲೇ ಇರಬೇಕಾಗುತ್ತದೆ. ನಂತರದ ಘಟನಾವಳಿಗಳಿಂದಾಗಿ ತ್ಯಜಿಸಬೇಕಾಗುವದು. ದುರ್ಯೋಧನಾದಿಗಳು ಗಂಡನ ಬಳಗದವರೇ ಆಗಿದ್ದು ದಾಯಾದಿ ಮತ್ಸರದಿಂದ ಹಗೆತನವುಂಟಾಗಿರುತ್ತದೆ.

**(ನು. ೮) ಗಂಡನ ಎದುರಿಗೆ ಗಂಡುಗಚ್ಚೆಯ ಕಟ್ಟಿ ಗಂಡಸಿನಂತೆ-ಧನುವೆತ್ತಿ** : ಸತ್ಯಭಾಮೆಯು ಪಾರಿಜಾತದ ಸಲುವಾಗಿ ಕೃಷ್ಣನ ಕೈಯ್ಯೊಳಗಿನ ಧನುಸ್ಸು ಕಸಿದು ದೇವತೆಗಳೊಡನೆ ಕಾದಿದವಳು

## ಕೀರ್ತನೆ ೭೪

**ವಾತನೊಡಗೂಡಿ ಜನಿಸಿ ಆತನ ಮದುವೆ ಮಾಡಿಕೊಂಡೆ** : ಭಾರತಿ-ದೇವಿಯ ಅವತಾರವೇ, ದ್ವಾಪರ ಯುಗದಲ್ಲಿ ಯಜ್ಞಕುಂಡದಿಂದ ಹೊರಬಂದ ದ್ರೌಪದಿ. ಈ ಜನ್ಮದಲ್ಲಿ ವಾಯುದೇವರ ಅವತಾರವಾದ ಭೀಮಸೇನನಿಗೆ ಹೆಂಡತಿಯಾಗುವಳು. ಜಗತ್ತು ನಾಮ-ರೂಪ-ಕರ್ಮಾತ್ಮಕವಾಗಿದ್ದು, ಒಂದೊಂದು ಪ್ರಕಾರಕ್ಕೂ ವಿಶಿಷ್ಟ ಅಭಿಮಾನಿ ದೇವತೆಯಿದೆ. ನಾಮಕ್ಕೆ ಭಾರತಿ, ರೂಪಕ್ಕೆ ರುದ್ರ, ಕರ್ಮಕ್ಕೆ ಆತ್ಮಪ್ರಾಣ-ವಾಯುದೇವರು, ಅಭಿಮಾನಿ ದೇವತೆಗಳು. ನಾಮ-ರೂಪಗಳಿಗೆ ಆತ್ಮನೇ ಮುಖ್ಯ ಆದುದರಿಂದ ವಾಯು ದೇವರೇ ಉಳಿದ ಇಬ್ಬರಿಗೂ ನಿಯಾಮಕ. ಹೀಗಾಗಿ ಭಾರತಿಯು ವಾಯುಪತ್ನಿ ಎನ್ನಿಸುತ್ತಾಳೆ.

## ಕೀರ್ತನೆ ೮೫

**(ನು. ೫) ವಸ್ತ್ರವಿಲ್ಲೆಂಬೊ ಎಚ್ಚರಿಕಿಲ್ಲೊ ರಂಗಯ್ಯ ತೇಜಿ ಹತ್ತೇನು ಎಂದು ಬರುವಿಯಲ್ಲೊ ಕೃಷ್ಣಯ್ಯ** : ಶ್ರೀ ಹರಿಯು ಶಿಷ್ಟರಕ್ಷಣೆಗಾಗಿ ಭೂಮಿಯ ಮೇಲೆ ಅನೇಕ ರೂಪಗಳಲ್ಲಿ ಅವತರಿಸಿರುವನು. ಭಾಗವತದ ಮೂರನೆಯ ಅಧ್ಯಾಯದಲ್ಲಿ ಹತ್ತು ಅವತಾರಗಳ ಪ್ರಸ್ತಾಪವಿದೆ. ಅವೇ-ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿಗಳು. ಇಲ್ಲಿ ಬುದ್ಧ ಕಲ್ಕಿ ಅವತಾರಗಳನ್ನು ನಿರ್ದೇಶಿಸಿದ್ದಾರೆ.

## ಕೀರ್ತನೆ ೮೬

**(ನು. ೪) ಹೆರಳು ಹಾಕಿಸಿಕೊಂಡು ತಿಳಿಯಲಿಲ್ಲವೊ ಬುದ್ಧಿ** : ಪಾಂಡವರು ತಮ್ಮ ಅಜ್ಞಾತವಾಸದ ಅವಧಿಯನ್ನು ವಿರಾಟರಾಜನ ಆಸ್ಥಾನದಲ್ಲಿ ಕಳೆಯುತ್ತಿರುವಾಗ, ಅರ್ಜುನ ಬೃಹನ್ನಳೆಯಾಗಿ, ನಾಟ್ಯಕಲಿಸುತ್ತ ಹೆರಳು ಹಾಕಿಸಿಕೊಳ್ಳುತ್ತ ವೈಯ್ಯಾರ–ವನಪಿನಿಂದ ಕಳೆದದ್ದನ್ನು ಸೂಚಿಸುತ್ತದೆ.

## ಕೀರ್ತನೆ ೮೭

**(ನು. ೫) ಕೊಡಲಿಯ ಪಿಡಕೊಂಡು... ಅಡವಿಗಟ್ಟಿದ ಮಹಾಮಹಿಮನೆ** : ಇಲ್ಲಿ ಪರಶುರಾಮ ಹಾಗೂ ರಾಮಾವತಾರಗಳ ಕಥಾ ಹಿನ್ನೆಲೆಯಿದೆ. ತಂದೆ ಜಮದಗ್ನಿಯ ಆಜ್ಞಾನುಸಾರ ತಾಯಿ ರೇಣುಕೆಯ ಶಿರಚ್ಛೇದನವು ಪರಶುರಾಮಾವತಾರದಲ್ಲಿ. ಅಪವಾದಕ್ಕಂಜಿ ಹೆಂಡತಿ ಸೀತೆಯನ್ನು ಕಾಡಿಗಟ್ಟುವ ಪ್ರಸಂಗ ರಾಮಾವತಾರದಲ್ಲಿ.

## ಕೀರ್ತನೆ ೮೭

**(ನು. ೨) ಗಂಧಮಾದನ ಗಿರಿ ತಂದು ನೋಡಿ ಗಿರಿ ನಿಂದಲ್ಲೆ ಹಿಂದಕ್ಕೆ ಒಗೆದ ಈಡಾಡಿ** : ವಾಯುದೇವರ ಅವತಾರತ್ರಯಗಳ ಕುರಿತಾಗಿದೆ. ಮಗುವಾಗಿರುವಾಗ ಸೂರ್ಯನನ್ನು ಹಣ್ಣೆಂದು ಬಗೆದು ಸೂರ್ಯ ಮಂಡಲಕ್ಕೆ ಹಾರಿದ ತ್ರೇತಾಯುಗದ ಹನುಮ ರಾಮಭಕ್ತ. ರಾಮ–ರಾವಣರ ಯುದ್ಧ ಸಂದರ್ಭದಲ್ಲಿ ಇಂದ್ರಜಿತ್ತಿನ ಬಾಣದಿಂದ ತತ್ತರಿಸಿದ ಪ್ರಜ್ಞೆ ತಪ್ಪಿ ಧರೆಗೆ ಉರುಳಿದ ಲಕ್ಷ್ಮಣನ ಉಪಚಾರಕ್ಕೆ ಸಂಜೀವನ ಪರ್ವತವನ್ನೇ ಹೊತ್ತು ತಂದು, ಪುನಃ ನಿಂತಲ್ಲೆ ಹಿಂದಕ್ಕೆ ಒಗೆದದ್ದು ಮುಂದೆ ದ್ವಾಪರಯುಗದಲ್ಲಿ ಭೀಮ, ಕಲಿಯುಗದಲ್ಲಿ ಮಧ್ವ, ಅವತಾರ ಪುರುಷನಾಗುತ್ತಾನೆ.

## ಕೀರ್ತನೆ ೯೧

**(ನು. ೨) ಮಗನ ಮಗನು ಬಲು ಕೊಂಡೆಗಾರನಾದ ಮಗಳ ಮಗ ನಿನ್ನ ಹಣೆಗಚ್ಚಿದ:** ಶ್ರೀಕೃಷ್ಣನ ಮಗ ಪ್ರದ್ಯುಮ್ನ, ಪ್ರದ್ಯುಮ್ನನ ಮಗ ಅನಿರುದ್ಧ. ಈ ಅನಿರುದ್ಧ ಬಾಣಾಸುರನ ಮಗಳಾದ ಉಷೆಯನ್ನು ಕದ್ದೊಯ್ದು ಮದುವೆಯಾಗುವನು.

ಗಂಗೆ-ಮಗಳು ಭೀಷ್ಮಗಂಗೆಯ ಮಗ ಭಾರತಯುದ್ಧದಲ್ಲಿ ಭೀಷ್ಮ ಶ್ರೀಕೃಷ್ಣನಿಗೆ ಬಾಣ ಹೊಡೆವ ಪ್ರಸಂಗ.

## ಕೀರ್ತನೆ ೯೩

**(ನು. ೨) ಹೊರಗಿಂದ ಬಂದಳು ತಿರುಗಲ ತಿಪ್ಪಿಯು ಹೆರವರಿಗುಪಕಾರಿ ಮನೆಗೆ ಮಾರಿ :** ತ್ರಿಪಥಗಾಮಿನಿಯಾಧ ಗಂಗೆಯು ಶಂತನು ರಾಜನನ್ನು ನಿರ್ಬಂಥ ಹೇರಿ-"ನನ್ನ ವಿರುದ್ಧ ನಡೆದಂದೇ ನಾನು ನಿನ್ನನು ತ್ಯಜಿಸಿ ಹೋಗುವೆ" ಎಂದು ಆಶ್ವಾಸನೆ ಪಡೆದಿದ್ದಳು. ನಿರ್ಬಂಥ ತ್ಯಜಿಸಿದ ಶಂತನು ರಾಜನನ್ನ ಬಿಟ್ಟು ಹೋದದ್ದಲ್ಲದೆ ಅವನಿಂದ ಪಡೆದ ಏಳೂ ಮಕ್ಕಳನ್ನು ಕೊಲ್ಲುತ್ತಾಳೆ.

**(ನು. ೨) ತಲೆ ಹೊಡಕ ಹಿರಿಯವ ಚಿಕ್ಕವ ಚಂಚಲ ಬಹು ಚಾಡಿಕೋರ ಇನ್ನೊಬ್ಬ :** ಹಿರಿಯವನೆಂದರೆ ಸೃಷ್ಟಿಗೆ ಮೊದಲು ತನ್ನ ನಾಭಿಯಿಂದ ಹೊರ ಬಂದ ಚತುರ್ಮುಖ ಬ್ರಹ್ಮ. ಅವನ ಒಂದು ತಲೆಯನ್ನು ಶಿವನು ತೆಗೆಯುವನು ಚಿಕ್ಕವ ಚಂಚಲ-ಮನ್ಮಥ

ಬಹು ಚಾಡಿಕೋರ - ಬ್ರಹ್ಮನ ಮಾನಸ - ಪುತ್ರನಾದ ನಾರದ.

**(ನು. ೪) ಇಂದ್ರ ಲೋಕಕ್ಕೆ ಹೋಗಿ ಸುರತರುತರುವಾಗ :** ಪಾರಿಜಾತದ ಪ್ರಸಂಗದಲ್ಲಿ ಸತ್ಯಭಾಮೆ ಹೋರಾಡುವಳು

## ಕೀರ್ತನೆ ೧೨೪

**(ನು. ೩) ಭಂಡಿಲಿದ್ದ ಅಸುರನ ಶಿರವ :** ಕಂಸನು ಕೃಷ್ಣನ ಸಂಹಾರಕ್ಕೆ ಶಕಟಾಸುರನನ್ನು ಕಳಿಸುವನು. ಈತ ಬಂಡಿಯ ರೂಪದಲ್ಲಿ ಬಾಲಕೃಷ್ಣನ ಕೊಲ್ಲ ಬಂದಾಗ ಆತ ಇವನನ್ನೇ ಸಂಹರಿಸುವನು.

**(ನು. ೪) ಮರಣ ತಪ್ಪಿಸಿ ಪಾರ್ಥನಿಗೆ :** ಇಂದ್ರ ಕರ್ಣನಿಗೆ ಶಕ್ತ್ಯಾಸ್ತ್ರವನ್ನು ವರವಾಗಿ ಕೊಟ್ಟಿದ್ದ. ಕೃಷ್ಣ ಇದರ ಪ್ರಯೋಗವನ್ನು ಘಟೋತ್ಕಜನ ಮೇಲೆ ಆಗುವಂತೆ ಉಪಾಯವಾಗಿ ಕರ್ಣನಿಗೆ ಬೋಧಿಸಿ, ಪಾರ್ಥನ ಪ್ರಾಣವನ್ನು ಕಾಯುವನು.

## ಕೀರ್ತನೆ ೧೪೨

**(ನು. ೩) ಬ್ರಮ್ಹಾಂಡ ಬಿಚ್ಚಿ ಪರಬೊಮ್ಮಗ ಮಗಳಾದಿ :** ತ್ರಿವಿಕ್ರಮಾವತಾರದಲ್ಲಿ ಬ್ರಹ್ಮಾಂಡ ಕಟಾಹಕ್ಕೆ ಪಾದ ತಗುಲಿ ಗಂಗೆಯು ಅವನ ಪಾದಗಳಿಂದ ಹೊರಬರುವಳು. ಹೀಗಾಗಿ ಗಂಗೆ ವಿಷ್ಣುವಿನ ಮಗಳು.

## ಕೀರ್ತನೆ ೧೮೬

**(ನು. ೧-೫) ಬೊಮ್ಮಕಂಡು ಕೋಪಿಸಿ ಶಾಪಝುಮ್ಮನೆ ಕೊಟ್ಟನು :** ಉಮಾ, ಶಚಿ, ಶಾಮಲೆ, ಉಷೆ ಇವರು ವೃದ್ಧರಾಗಿದ್ದ ಬ್ರಹ್ಮದೇವರನ್ನು ಕಂಡು ಅಪಹಾಸ್ಯ ಮಾಡಿದರು ಕೋಪಗೊಂಡ ಬ್ರಹ್ಮ ಇವರಿಗೆ ನರರೂಪವಾಗಲೆಂದು ಶಾಪ ಕೊಡುವನು. ಆಗ ನಾರದರು ಭಾರತಿದೇವಿಯಲ್ಲಿ ಒಂದಾಗಿರೆಂದು ಸೂಚಿಸುವರು. ಬ್ರಹ್ಮಾಂಡ ಪುರಾಣದಲ್ಲಿ ಹೇಳಿದಂತೆ ಭಾರತಿಯ ಮೊದಲ ಜನ್ಮ ಶಿವಬ್ರಾಹ್ಮಣನ ಮಗಳಾಗಿ ತ್ರೇತಾಯುಗದಲ್ಲಿ ಎರಡನೆಯ ಜನ್ಮ ಇಂದ್ರಸೇನೆಯಾಗಿ. ಮೌದ್ಗಲ್ಯ ಋಷಿ ಶಾಪವನ್ನು ತಳೆದು ದ್ವಾಪರಯುಗದಲ್ಲಿ ಯಜ್ಞಕುಂಡದಿಂದ ಹುಟ್ಟಿಬಂದು ದ್ರೌಪತಿಯಾದಳು.

## ಕೀರ್ತನೆ ೧೯೨

**(ನು. ೨) ಕಂಜನಾಭನು ಮನೆಯ ಎಂಜಲು ಬಳೆವವನ :** ಧರ್ಮರಾಯನು, ರಾಜಸೂಯಯಾಗದಲ್ಲಿ, ಬ್ರಾಹ್ಮಣರು ಊಟ ಮಾಡಿದ ಎಂಜಲು ಬಳೆಯುವ, ಕೆಲಸವನ್ನು ಶ್ರೀಕೃಷ್ಣನಿಗೆ ಒಪ್ಪಿಸಿದ್ದನು

## ಕೀರ್ತನೆ ೧೯೪

**(ನು. ೪) ನಿಜನಾರಿ ಕಳಕೊಂಡು :** ಶ್ರೀ ಹರಿಗೆ ತನ್ನ ಅನೇಕ ಅವತಾರಗಳಲ್ಲಿ ಪತ್ನಿಯಿಂದ ದೂರವಿರುವ ಪ್ರಸಂಗಗಳಿವೆ. ಅದರಲ್ಲೂ ರಾಮಾವತಾರದಲ್ಲಿ ಸೀತೆಯನ್ನು ಕಳೆದು ಕೊಳ್ಳುವ ಸಂದರ್ಭವಿದು.

## ಕೀರ್ತನೆ ೧೯೮

**(ನು. ೧) ಕುದುರೆ ರೂಪ ಕಂಡು :** ದಶಾವತಾರಗಳ ಸಂದರ್ಭ ಹಯವದನನಾಗುವ ಶ್ರೀ ಹರಿಯು ಭಕ್ತರನ್ನು ಸಲುಹಲೆಂದೇ ಈ ಅವತಾರಗಳನ್ನೆತ್ತಿದ್ದ. ಮಧು ಕೈಟಭರೆಂಬ

ದಾನವರನ್ನು ಸಂಹರಿಸಲು ಹಯವದನಾವತಾರಿಯಾಗುವನು. ಅಲ್ಲದೆ ಹಯಗ್ರೀವನೆಂಬ ರಾಕ್ಷಸ ವೇದಗಳನ್ನು ಒಯ್ಯಲು ವಿಷ್ಣುವು ಹಯಗ್ರೀವನಾಗಿಯೇ ಕಾಣಿಸಿಕೊಂಡು ಅವನನ್ನ ಸಂಹರಿಸಿ ವೇದಗಳನ್ನು ಬ್ರಹ್ಮನಿಗೆ ಕೊಟ್ಟ. ಹರಿದಾಸರು ಮತ್ಸ್ಯಾವತಾರದೊಂದಿಗೆ ಹಯಗ್ರೀವಾವತಾರವನ್ನು ಹೇಳುವುದು ವಾಡಿಕೆ.

## ಕೀರ್ತನೆ ೨೧೯

**(ನು. ೪) ನಮ್ಮಣ್ಣಗೆ ಬರೆದ ಓಲೆಯ :** ವಿದರ್ಭ ರಾಜನ ಮಗಳಾದ ರುಕ್ಮಿಣಿಯನ್ನು ಕೃಷ್ಣನಿಗೆ ಕೊಟ್ಟು ಮದುವೆ ಮಾಡುವ ಸಮ್ಮತಿ ಎಲ್ಲರಿಗಿದ್ದರೂ, ಸೋದರ ರುಕ್ಮಿ ಮಾತ್ರ ಇದನ್ನು ವಿರೋಧಿಸಿದ್ದ. ಅವನು ಶಿಶುಪಾಲನಿಗೆ ಕೊಡುವುದೆಂದೇ ಹಟ ಹಿಡಿದಿದ್ದ. ಆದರೆ ರುಕ್ಮಿಣಿಗೆ ಕೃಷ್ಣನನ್ನೇ ಒರಿಸುವ ಉತ್ಕಟೇಚ್ಛೆ ಇತ್ತು. ಹೀಗಾಗಿ ಕದ್ದು ಆತನಿಗೆ ಪ್ರೇಮದೋಲೆ ಬರೆಯುವಳು.ಇವಳ ಸಂಕೇತದಂತೆ ಬಂದಿದ್ದ ಕೃಷ್ಣ ಗೌರೀಪೂಜೆಯ ನೆಪದಿಂದ ಊರ ಹೊರ ಬಂದಾಗ, ಅವನ ರಥವನ್ನೇರಿ ಅವನೊಡನೆ ಹೋಗುವಳು.

## ಕೀರ್ತನೆ ೨೨೪

**(ನು. ೩) ಐವರನ ಠಕ್ಕಿಸಿ :** ದ್ರೌಪತಿಯ ಸ್ವಯಂವರ ಪ್ರಸಂಗದಲ್ಲಿ ಜಯದ್ರಥ ಅವಳನ್ನು ಪಡೆಯಲು ವಿಫಲನಾಗುವನು. ಹೀಗಾಗಿ ಅವಮಾನ ಹೊಂದಿದ ಇವನು ಸೇಡಿನ ಮನೋಭಾವನೆಯಲ್ಲೇ ಹೊಂಚು ಹಾಕುತ್ತಿದ್ದ. ಒಮ್ಮೆ ಪಾಂಡವರೈವರೂ ಬೇಟೆಗೆ ಹೋಗಿದ್ದಾಗ ಇವಳನ್ನು ಬಲಾತ್ಕರಿಸಲು ಪ್ರಯತ್ನಿಸಿ, ರಥದಲ್ಲಿ ಕುಳ್ಳಿರಿಸಿಕೊಂಡು ಹೋಗುತ್ತಿದ್ದ. ಆಗ ಕಾವಲಿಗಿದ್ದ ಧೌಮ್ಯ ಪ್ರತಿಬಂಧಿಸಿ ಜಯದ್ರಥನ ರಥಕ್ಕೆ ಜೋತು ಬಿದ್ದು ಅವಳನ್ನ ರಕ್ಷಿಸಲು ಪ್ರಯತ್ನಿಸಿದ. ಆಗ ದ್ರೌಪತಿಯು ಆರ್ತಳಾಗಿ ರಕ್ಷಿಸುವುದಕ್ಕೋಸ್ಕರ ಭೀಮ ಎಂದು ಕೂಗಿದಾಗ, ಭೀಮ ಬಂದು ದ್ರೌಪದಿಯನ್ನು ರಕ್ಷಿಸುವನು.

## ಕೀರ್ತನೆ ೨೨೫

**(ನು. ೧೦) ನೂರು ಮಂದಿ ಹರಿಯ ದಾರಿಯ ಕಟ್ಟಲು :** ಕಂಸನ ಆಣತಿಯಂತೆ ಅಕ್ರೂರ, ಕೃಷ್ಣನನ್ನು ಗೋಕುಲದಿಂದ ಮಥುರೆಗೆ ಕರೆದೊಯ್ಯುತ್ತಿರುವಾಗ ಗೋಪಿಕಾಸ್ತ್ರೀಯರು ಇವರ ದಾರಿಗಡ್ಡಬಂದು ಹೋಗಬೇಡೆಂದು ಬೇಡಿಕೊಂಡರೂ ಕೇಳದೇ ಈತ ರಥವೇರಿ ಹೋಗಿಯೇ ಬಿಡುವನು.

# ಜೋಗುಳದ ಕೀರ್ತನೆ

**(ನು. ೩) ಅಂದು ಅದಿತಿ-ಕಶ್ಯಪರು ತಪವಗೈಯಲು** : ಬಲಿಚಕ್ರವರ್ತಿಯ ಸೊಕ್ಕನ್ನು ಮುರಿಯುವುದಕ್ಕಾಗಿ ಅದಿತಿ-ಕಶ್ಯಪರಲ್ಲಿ ಶ್ರೀಹರಿಯು ವಾಮನ ರೂಪದಲ್ಲಿ ಅವತರಿಸುವನು

**(ನು. ೯) ಹತ್ಯವ ಮಾಡಿ ಅವಳನ** : ಕೃಷ್ಣನ ಬಾಲ್ಯವರ್ಣನೆಯಲ್ಲಿ ಆತನಿಗೊದಗಿದ ವಿಪತ್ತುಗಳೆಲ್ಲವನ್ನೂ ದೂರಮಾಡಿಕೊಂಡ ವರ್ಣನೆಯಿದೆ. ಕೂಸಿದ್ದಾಗ ಕೊಲ್ಲಲೋಸುಗವೇ ಪೂತನಿಯು ಕೃಷ್ಣನಿಗೆ ಮೊಲೆಕುಡಿಸುವಳು. ಅರಿತ ಕೃಷ್ಣ ಅವಳ ಹರಣವನ್ನೆ ಹೀರುವ

**(ನು. ೨೪) ಬಿಂಬ** : ಪರಮಾತ್ಮನು ಸರ್ವೋತ್ತಮನೂ ಸರ್ವಾತ್ಮಕನೂ ಆಗಿದ್ದು ಸಕಲಗುಣ ಪೂರ್ಣನೆಂದು ತಿಳಿದು ಸರ್ವಾಂತರ್ಯಾಮಿಯಾದ ಅವನನ್ನು ಆತ್ಮನೆಂದು ತಮ್ಮ ಹೃದಯ ಮಂದಿರದಲ್ಲಿ ಬಿಂಬವಾಗಿ ಪೂಜಿಸುವರು.

ಪ್ರೇರಕ ನಿಯಾಮಕ ಸಾಕ್ಷಿಕನಾಗಿರುವ ಬಿಂಬರೂಪಿ ಪರಮಾತ್ಮ

**(ನು. ४೧) ಮೂರು ಲೋಕ ದೊಡೆಯ** : ಭೂಲೋಕ, ಭುವರ್ಲೋಕ ಸ್ವರ್ಗಲೋಕಗಳ ಒಡೆಯ ನಾರಾಯಣ

**(ನು. ४೨) ಕತ್ತಲೆ ಕಡುಜಲ ವಟಪತ್ರದಿ ನಿದ್ರಿ** : ಪ್ರಳಯ ಕಾಲದಲ್ಲಿ ವಿಷ್ಣು ತನ್ನ ಸೃಷ್ಟಿಯೆಲ್ಲವನ್ನು ತಾನೇ ನುಂಗಿ ಮುಂದೆ ಸೃಷ್ಟಿ ಕಾಲದವರೆಗೂ ಅವರನ್ನು ತನ್ನ ಹೊಟ್ಟೆಯಲ್ಲಿ ಅಡಗಿಸಿ ಕೊಳ್ಳುವನು. ಆಗ ಬ್ರಹ್ಮಾಂಡವೆಲ್ಲ ನೀರಿನಿಂದ ತುಂಬಿ ಕೊಳ್ಳುತ್ತದೆ ಲಕ್ಷ್ಮೀದೇವಿಯ ರೂಪವಾದ ದುರ್ಗೆ ಕತ್ತಲೆಯಂತೆ ಆವರಿಸುತ್ತದೆ. ಇನ್ನೊಂದು ರೂಪವಾದ ಶ್ರೀ ನೀರಿನಂತೆ ತೋರಿಕೊಳ್ಳುತ್ತದೆ.

ಮೂರನೆಯ ರೂಪವಾದ ಭೂ ವಟಪತ್ರ ರೂಪಿಯಾಗಿ ಅವನನ್ನು ಸೇವಿಸುತ್ತಿರುತ್ತಾಳೆ. ಆ ಎಲೆಯಲ್ಲಿ ಬಾಲರೂಪಿ ವಿಷ್ಣು ತನ್ನ ಕಾಲ ಹೆಬ್ಬೆರಳನ್ನು ಚೀಪುತ್ತ ಮಲಗಿರುತ್ತಾನೆ.

**(ನು. ४३) ಹಾರುವ ಹದ್ದನೆ ಏರುವರೆ** : ಶ್ರೀ ಹರಿಯು ಪಕ್ಷಿವಾಹನ ಗರುಡನನ್ನ ಹತ್ತಿ ಹೋಗುವವನು

**(ನು. ४४) ತಂದು ವೇದವ ಬೊಮ್ಮಗಿತ್ತಿದೆ** : ಬ್ರಹ್ಮನು ನಿದ್ರೆಯಲ್ಲಿದ್ದಾಗ ಆತನ

ಬಾಯಿಗಳಿಂದ ಹೊರ ಬರುತ್ತಿದ್ದ ವೇದರಾಶಿಯನ್ನು ಹಯಗ್ರೀವನೆಂಬ ರಾಕ್ಷಸನು ಅಪಹರಿಸಿ ಪ್ರಳಯಜಲದಲ್ಲಿ ಅಡಗಿದ್ದಾಗ ಹರಿಯು ಮತ್ಸ್ಯರೂಪದಿಂದ ಬಂದು ಅವನನ್ನು ಕೊಂದು ವೇದಗಳನ್ನು ಮರಳಿ ತಂದು ಬ್ರಹ್ಮನಿಗೆ ಕೊಟ್ಟ.

ಇಲ್ಲಿ ದಶಾವತಾರಗಳಲ್ಲಿಯ ನಾಲ್ಕು ಅವತಾರಗಳು ಮತ್ಸ್ಯ ಕೂರ್ಮ ವರಾಹ ನರಸಿಂಹ ವರ್ಣನೆಯಿದೆ.

**(ನು. ೪೫) ಬಲಿಯಪಾತಾಳಕ್ಕೆ ಒತ್ತಿದಿ** : ಬಲಿ ಚಕ್ರವರ್ತಿ ನರ್ಮದಾತೀರದಲ್ಲಿ ಅಶ್ವಮೇಧಯಾಗ ಮಾಡುತ್ತಿದ್ದಾಗ, ಶ್ರೀ ಹರಿಯು ವಾಮನ ವಟುವಾಗಿ ಬಂದು ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಬೇಡುವನು.

'ತ್ರೀಣಿ ಪದಾ ವಿಚಕ್ರಮೇ ವಿಷ್ಣು' : ಎನ್ನುವಂತೆ ಭೂಮ್ಯಾಕಾಶನನ್ನ ತನ್ನಪಾದಗಳಿಂದ ಆಕ್ರಮಿಸಿ ಬಲಿಯನ್ನು ಪಾತಾಳಕ್ಕೆ ಮೆಟ್ಟುವನು. ಇಲ್ಲಿಯೂ ವಾಮನಾವತಾರ, ಪರಶುರಾಮಾವತಾರ; ರಾಮಾವತಾರ, ಕೃಷ್ಣ ಹಾಗೂ ಬೌದ್ಧ ಕಲ್ಕಿ ಅವತಾರಗಳ ಕುರಿತಾದ ಬಣ್ಣನೆಯಿದೆ.

ನು-೪೬ ರಿಂದ ೫೩ರ ವರೆಗೆ ಕೇಶವ ನಾಮವೆಂದು, ಕೇಶವಾದಿ ಚತುರ್ವಿಂಶತಿ ನಾಮಸ್ಮರಣೆಯಿದೆ.

# ಅನುಬಂಧ - ೩

## ೨೬೩

## (ಅ) ಜೋಗುಳದ ಕೀರ್ತನೆ

ಜೋ ಜೋ ಜೋ ಜೋ ಜೋ
ಶ್ರೀಕೃಷ್ಣ ಪರಮಾನಂದ
ಗೋಪಿಯಕಂದ ಮುಕುಂದ
ಜೋ ಜೋ ಜೋ ಜೋ ಜೋ ಪ.

ನೆನೆಅಕ್ಕಿ ನೆನೆಗಡಲೆ ಗೊನೆ ಬಾಳೆಹಣ್ಣು
ಘನವಾದ ಚಿಗುಳಿ ತಂಬಿಟ್ಟು
ಘನವಾದ ಚಿಗುಳಿ ತಂಬಿಟ್ಟು ತಂದಿದ್ದೆ
ಗಣಪತಿ ಮತಿಯ ಕರುಣಿಸು ಜೋ ಜೋ ೧

ಜರದಕುಪ್ಪುಸ ಸೀರೆ ಬರಿಯ ಮಾಣಿಕದೊಸ್ತ
ಹರದಿ ಶಾರದೆ ಕೈಕೊಳ್ಳಲಿ
ಹರದಿ ಶಾರದೆ ಕೈಕೊಂಡು ನಮಗಿನ್ನು
ತಡೆಯದೆ ಮತಿಯ ಕರುಣಿಸು ಜೋ ಜೋ ೨

ಅಂದು ಅದಿತಿ–ಕಶ್ಯಪರು ತಪವಗೈಯ್ಯಲು
ತಂದೆ ನಿನ್ನಂತಹ ಕಂದನು ಬೇಕೆನಲು
ಅಂದಿನ ವಚನದಿ ಬಂದೆಯ್ಯ ಕೇಳು
ಬಂಧನದಿಂದ ಗೋಕುಲಕೆ ದಯಾಳು ಜೋ ಜೋ ೩

ಭರದಿ ಮಾಯದಿ ನಿದ್ರೆ ಸರ್ವರಿಗೆ ಪುಟ್ಟಲು
ಹರಿಯ ವಾಸುದೇವ ಗೋಕುಲದಲ್ಲಿಟ್ಟು
ತಿರಗೊಂದು ಹೆಣ್ಣು ಕೂಸಿನ ಒಯ್ದಿಟ್ಟು
ಅರಿಯದಂತಿದ್ದ ಸೋಜಿಗವಿನ್ನೆಷ್ಟು ಜೋ ಜೋ ೪

ಮಿತ್ರಿ ಯಶೋದಾ ತನಗೆ ಪುತ್ರನಾದೆಂದು
ವಿಚಿತ್ರ ಆನಂದ ಬಟ್ಟಳು ಮನಕೆ ತಂದು
ಸುತ್ತಲಿದ್ದವರೆಲ್ಲ ಎಚ್ಚತ್ತಾಗಿ ಬಂದು
ಇಷ್ಟರೊಳಗೆ ನಂದ ಗೋಪಗೆ ಹೇಳಬಂದು ಜೋ ಜೋ ೫

ನಂದಗೋಪನು ಕೇಳಿ ಆನಂದಬಟ್ಟು
ಚಂದದಲೆ ವಿಪ್ರರ ಕರೆಸಿದರಷ್ಟು
ಕಂದನ ವದನದಿ ಮದವು ತಂದಿಟ್ಟು
ಸುಂದರ ನಾಭಿನಾಲವ ಛೇದಿಸಿಟ್ಟು ಜೋ ಜೋ ೬

ಗಂಗೋದಕ ಎರೆದು ತುಂಗ ವಿಕ್ರಮಗೆ
ರಂಗಗೆ ಜಾತಕರ್ಮವ ಮಾಡಿ
ಬ್ಯಾಗ ಮಂಗಳಾರುತಿಯ ಮಾಡುವರು
ಬಾಲಕಗೆ ಬಂಗಾರವಿಟ್ಟು ಗುಗ್ಗಳ ಕೊಟ್ಟರಾಗ ಜೋ ಜೋ ೭

ದಕ್ಷಿಣೆ ತಾಂಬೂಲ ಆ ಕ್ಷಣಕೆ ಕೊಟ್ಟು
ಲಕ್ಷ ಕೋಟಿ ದ್ರವ್ಯ ಸೂರಿ ಬಿಟ್ಟು
ಕುಕ್ಷಿಲೋಕನ ಫಣಿಗೆ ರಕ್ಷವನಿಟ್ಟು
ಲಕ್ಷಣವಂತಿ ಬಾಣಂತಿ ಸುಖವೆಷ್ಟು ಜೋ ಜೋ ೮

ಹತ್ತೂದಿನದಿ ಪೂಜೆ ನಿತ್ಯ ಉಚ್ಛವದಿ
ಅರ್ಥಿಯಿಂದಲಿ ಗೋಪ ಇರಲಿ ತನುಮನದಿ
ಮತ್ತ ಅಸುರಿಸ್ತನ ಕೊಟ್ಟಳಾದರದಿ
ಹತ್ಯವ ಮಾಡಿ ಅವಳನ ಹರಿಯೇನೀ ಹರದಿ ಜೋ ಜೋ ೯

ಹನ್ನೊಂದನೆ ದಿನದಲ್ಲಿ ಚನ್ನ ಬಲರಾಮ
ನಿನ್ನ ಪೂಜೆಯ ಮಾಡಿದನು ಗುಣಧಾಮ
ಕನಿ ಯಶೋದಾದೇವಿಯ ಮನಕ್ಷೇಮ
ಉನ್ನತವಾಗಿ ಉದಯಿಸಿದ ಅತಿಸೋಮ ಜೋ ಜೋ ೧೦

ಹತ್ತೊಂದು ರಾತ್ರಿಲೆ ಮರುದಿನಯಜ್ಞ
ಅರ್ಥಿನಾಮಕರಣ ಮಾಡಿಸಿ ಸುಜನ
ಮುತ್ತಿನ ನಾಮವ ಇಟ್ಟಾರು
ಗರ್ಗ ಮತ್ತೆ ರಾಮಕೃಷ್ಣ ಅನಲಿ ಸೌಭಾಗ್ಯ ಜೋ ಜೋ ೧೧

ಅತಿ–ಬ್ಯಾಗ ವಿಶ್ವಕರ್ಮನ ಕರೆಸಿದಳು
ರತ್ನ ಮಾಣಿಕ ಮುತ್ತುಗಳ ತೆತ್ತಿಸಿದಳು
ಮತಿ–ಯಿಂದ ದಶರೂಪಗಳ ರಚಿಸಿಹಳು
ಮನ್ಮಥನ ಪಿತನು ಪವಡಿಸುವ ತೊಟ್ಟಿಲೊಳು ಜೋ ಜೋ ೧೨

ಶೃತಿ–ತತಿ–ಮಯವಾದ ರತ್ನದ ಕಾಲು
ದೇವತೆಗಳೆ ತುಂಬಿದ್ದ ಜತೆಯಾದ ಕೀಲು
ಚತುರನ ಕುಶಲಕ್ಕೆ ಆದಳು ಲೋಲು
ಅತಿ–ನೂತನದ ಉಡುಗೊರೆ ಕೊಡಿಸಿದರು ಜೋ ಜೋ ೧೩

ಚಿತ್ರ ವಿಚಿತ್ರದ ಮಂಟಪದೊಳು
ರತ್ನದ ತೊಟ್ಟಿಲ ಕಟ್ಟಿದರು
ಸುತ್ತು ಬಾಳೆಕಂಬ ಜ್ಯೋತಿಗಳು
ಬೇಗ ಮುತ್ತೈದೆಯರೆಲ್ಲರು ಬಂದರು ಜೋ ಜೋ ೧೪

ಮುತ್ತಿನ ಝಲ್ಲೆ ಕುತಣಿ ಲೇಸು ಹಾಸಿ
ಅತ್ತಿ ಹೂವಿನ ವಲ್ಲಿ ಮತ್ತೊಂದು ಇರಿಸಿ
ಉತ್ತಮ ಪಟ್ಟಾವಳೆ ಸುತ್ತ ವಿಸ್ತರಿಸಿ
ಪುತ್ರರು ಕೋಟಿ ಮಲಗಲೆಂದು ಹರಸಿ ಜೋ ಜೋ ೧೫

ಅಚ್ಯುತಾನಂತ ಗೋವಿಂದ ನೀನೆಂದು
ಉತ್ಸವದಾರುತಿ ಕೇಳಿದಾರೆಂದು
ಮಚ್ಛನೇತ್ರಿಯರೆಲ್ಲ ಬಾಗಿಣ ತಂದು
ಸಚ್ಚಿದಾನಂದನ ನೋಡಬೇಕೆಂದು ಜೋ ಜೋ ೧೬

ವಾಣಿ ಭಾರತಿ–ಸೌಪರ್ಣಿ ಪಾರ್ವತಿಯು
ವೇಣಾಕ್ಷಿದೇವಿ ವಾರುಣಿ ಶಚಿ ರತಿಯು
ಪ್ರಾಣೇಶನವತಾರ ಕೇಳಿ ಕೀರುತಿಯು
ಜಾಣೆಯರು ಬಂದರು ಮಾಡುತಾರುತಿಯು ಜೋ ಜೋ ೧೭

ಪುಟ್ಟ ಕೂಸಿನ ತೊಟ್ಟಿಲು ಪೂಜೆಯೆಂದು
ಅಷ್ಟು ಮುತ್ತೈದೆಯರ ಕರೆಸಿದರಿಂದು
ಶ್ರೇಷ್ಠದ್ವಿಜರು ಬಂಧುಗಳೆಲ್ಲ ಬಂದು
ಅಷ್ಟ ಸೌಭಾಗ್ಯದ ಆರುತಿ ಬೆಳಗಿದರು ಜೋ ಜೋ ೧೮

ಹಾಲ್ಗಡಗ ಗೆಜ್ಜೆ ನೀಲದೊಡ್ಯಾಣವು
ಸಾಲು ಬೆರಳಿಗೆ ಸರಪಳಿ ಉಂಗುರವು
ಮೇಲಾದ ಅರಳೆಲೆ ಅಸಲಿ ಗುಂಡು ಬಿಂದಲಿಯು
ಬಾಲಗೆ ಇಟ್ಟರು ಬಾಲಸುಂದರಿಯರು ಜೋ ಜೋ ೧೯

ಹಸುರಂಗಿ ಕುಂಚಿಗೆ ಮಿಸುನಿ ಟೊಪ್ಪಿಗೆಯು
ಬಿಸಜಾಕ್ಷಿ ಇಟ್ಟಳು ನೊಸಲ ಕಸ್ತೂರಿಯು
ಏಸವೊ ಮಾಣಿಕ ರತ್ನ ವಸ್ತ ಪರಿಪರಿಯು
ಶಿಶುವಿಗಿಟ್ಟು ಗೋಪಿ ಆದಳು ಸುಖಿಯು ಜೋ ಜೋ ೨೦

ಮಚ್ಛನೇತ್ರಿಯು ತಾ ಹಚ್ಚಿ ಕಾಡಿಗೆಯು
ಅಚ್ಚ ಮಲ್ಲಿಗಿ ಜಾಜಿ ಸಂಪಿಗೆಯ ಮುಡಿಯು
ಬಿಟ್ಟ ಬಾಯೊಳಗೆ ವೀಳ್ಯವನು ಇಟ್ಟು
ಕನ್ನಡಿಯಲಿ ಸ್ವಚ್ಛನೋಡಿ ಮೆಲ್ಲನಿಟ್ಟಳು ಅಡಿಯು ಜೋ ಜೋ ೨೧

ಹಸಿಯ ಬಾಣಂತಿ ತಾ ಹೊಸ ಸೀರೆಯುಟ್ಟು
ಕುಶಲದ ಮುತ್ತು ರತ್ನದ ವಸ್ತವಿಟ್ಟು
ಶಿಶುವಿಗಿಟ್ಟು ಗೋಪಿ ಹರುಷಬಟ್ಟು
ಹಸೆ ಮೇಲೆ ಬಂದುಕುಳಿತ–ಸೊಬಗೆಷ್ಟು ಜೋ ಜೋ ೨೨

ಮಡಲಿಗೆ ಮುತ್ತಿನ ಉಡಿಯ ತುಂಬಿದರು
ಪಿಡಿಯವ್ವ ಕಂದನ ಎಂದು ನುಡಿದರು
ಸಡಗರದಿಂದ ಆರುತಿಯ ಮಾಡಿದರು
ನಡೆದು ಬಂದ ಗೋಪಿಯ ಬೆಡಗು ನೋಡಿದರು ಜೋ ಜೋ ೨೩

ಎಂಭತ್ತು ಕೋಟಿ ದೇವತೆಗಳು
ತುಂಬಿಹರು ಕುಂಭಗಳಷ್ಟು
ಅಂಬುಜಾಕ್ಷನ ಪೂಜೆ ಮಾಡಬೇಕೆಂದು
ಬಿಂಬವ ಧೇನಿಸಿ ಮನದಲ್ಲೆ ತಂದು ಜೋ ಜೋ ೨೪

ಸ್ವರ್ಗಗಂಗೆಯ ತುಂಬಿ ರುಕ್ಮಪಾತ್ರೆಯಲಿ
ಅನರ್ಘ್ಯ ಮುತ್ತುರತ್ನ ಸರಗಳ ಕಟ್ಟಿರಲಿ
ಜಗ್ಗನೆ ರಂಗವಾಲಿಗಳಿದ್ದಲ್ಲಿ
ಶೀಘ್ರದಿ ತಂದು ಇಟ್ಟರು ಗರ್ದಿಯಲ್ಲಿ ಜೋ ಜೋ ೨೫

ಖಂಡುಗ ಉಸುಳೆ ಮಾಡಿ ಹಂಡೆ ತುಂಬಿಟ್ಟು
ಗುಂಡಪ್ಪಗ ಬ್ಯಾಗ ಮುತ್ತುಸರ ಕಟ್ಟಿಟ್ಟು
ದುಂಡು ಅಪ್ಪ ಉಸುಳೆ ತಂದಿಟ್ಟು
ಪುಂಡರಿಕಾಕ್ಷನ ಕರೆಸಿದರಷ್ಟು ಜೋ ಜೋ ೨೬

ಅಷ್ಟುನಾರಿಯರು ಕೊಡ ಹಿಡಿದಾರು ಬಾಗಿ
ದಿಟ್ಟ ಪಾರ್ವತಿ ಮೆಟ್ಟು ಕಾಯ್ದಳು ಹೋಗಿ
ಶ್ರೇಷ್ಠ ಕುಟುಂಬ ಯಾರದೆಂದು ಕೂಗಿ
ಮೆಟ್ಟುಯಾರದೆಂದು ನೋಡಿ ಹರುಷಾಗಿ ಜೋ ಜೋ ೨೭

ಒಡೆಯ ಎನ್ನರಸ ಈ ಮೃಡನು ತಾನೆಂದು
ಕಡು ಬ್ಯಾಗ ಪಾರ್ವತಿ ನುಡಿದಳು ಬಂದು
ಬಿಡು ಬಿಡು ನಂದಗೋಪನ ಕುಟುಂಬವೆಂದು
ಹಿಡಿದವರು ಹೆಸರ್ಹೇಳಿ ನಡೆದರು ಹಿಂಗೆಂದು
ಜೋ ಜೋ ೨೮

ಗಂಧ ಕುಂಕುಮ ತಾಂಬೂಲ ದಕ್ಷಿಣೆಯು
ಅಂದದರಿಷಿಣ ಬಾಳೆಹಣ್ಣು ಕೊಬ್ಬರಿಯು
ಚಂದದ ಶುಂಠಿಸಕ್ಕರೆ ಖರ್ಜುರಿಯು
ತಂದು ಇಟ್ಟರು ಕುಂದಣದಾರುತಿಯು ಜೋ ಜೋ ೨೯

ಆಲಸ್ಯವಿಲ್ಲದೆ ಗೋಪಿ ಜಲಾಶಯ ಸ್ಮರಿಸಿ
ಕಲಶಗಳ ತುಂಬಿಹಳು ಸುರರ ಸತ್ಕರಿಸಿ
ಫಲ ಪುಷ್ಪದೀಪ ಧೂಪಗಳುಪಚರಿಸಿ
ಬಲು ಸೊಗಸಿಲೆ ವಸ್ತ್ರ ಒಗೆದಳು ಅರಸಿ ಜೋ ಜೋ ೩೦

ನಿಲವುಗನ್ನಡಿ ಮಧ್ಯ ಹೊಳೆವ ತೊಟ್ಟಿಲದಿ
ನಲಿನಿ ಯಶೋದೆ ಪೂಜೆಯ ಮಾಡಿ ತಾನು
ಹಲವು ಬಗೆಯಲಿ ಉಪಚರಿಸಲಮರರು
ಜಲಜನಾಭನೆ ಕೈಕೊಳ್ಳಯ್ಯ ನೀನು ಜೋ ಜೋ ೩೧

ಬಟ್ಟಲೋಚನೆ ಹಾಲು ಅಷ್ಟು ಫಲಗಳು
ಕೊಟ್ಟು ನೈವೇದ್ಯ ಸಂತುಷ್ಟರಾದರು
ಘಟ್ಟಿಸಿ ಭೇರಿ ತುತ್ತೂರಿ ವಾದ್ಯಗಳು
ಅಷ್ಟ ಸೌಭಾಗ್ಯದಾರುತಿ ಮಾಡಿದರು ಜೋ ಜೋ ೩೨

ಕೂಸಿನ ಕೊಳ್ಳಿರಿ ದೋಷರಹಿತನ
ವಾಸುದೇವನ ತನ್ನಿ ವಾಸಗಾರನ
ಕೇಶವನ ಕೊಳ್ಳಿರಿ ಉಲ್ಲಾಸಭರಿತನ
ಶ್ರೀಶನ ತನ್ನಿ ಸರ್ವೇಶ ಸುಂದರನ ಜೋ ಜೋ ೩೩

ಮಾರನಯ್ಯನ ತಾರೆಂದು ಭಾರತಿಯು
ವಾರಿಜಾಕ್ಷನ ಕೊಳ್ಳಿರೆಂದು ಸರಸ್ವತಿಯು
ಸೂರ್ಯ ಮೇರು ಸುತ್ತ ಎಂತಪ್ಪ ಹರಿಯು
ಮೂರೆರಡು ಬಾರಿಎತ್ತಿ ಮಲಗಿಸ ಸತಿಯು ಜೋ ಜೊ ೩೪

ಜನನರಹಿತ ನೆಂಬೋದೊಂದು ನಾಮ
ಮುನಿಗಳ ಮನಕೆ ನಿಲುಕದೊಂದು ನಾಮ
ಘನ ಮೇಘಶಾಮ ಸುಂದರನೆಂಬೊ ನಾಮ
ದಿನ ಮಣಿ ತೇಜ ಅಧಿಕನೆಂಬೊ ನಾಮ ಜೋ ಜೋ ೩೫

ಅಚ್ಯುತಾನಂತ ನೆಂಬುದು ಒಂದು ನಾಮ
ಕುಕ್ಷಿಲೋಕನೆಂಬುದು ಒಂದು ನಾಮ
ಪಕ್ಷಿ ವಾಹನನೆಂಬುದು ಒಂದು ನಾಮ
ಲಕ್ಷ ಕೋಟಿ ಅನಂತ ಅಕ್ಷಯನಾಮ ಜೋ ಜೋ ೩೬

ಕೂಸಿಗೆ ಹೆಸರು ಇಡುವುದೇನೆಂದು
ವಸುದೇವನರಸಿ ಕೇಳಿದಳು ಹೀಗೆಂದು
ಆಸಮಯದಿ ಗರ್ಗ ಮನಸಿಗೆ ತಂದು
ಸಾಸಿರನಾಮ ಅನಂತ ಇಡಿರೆ ಹೀಗೆಂದು ಜೋ ಜೋ ೩೭

ಸೋದರತ್ತೆ ಕುಂತಿ ಸೊಗಸಿಲೆ ಬಂದು
ಮಾಧವ ಅಂತ್ಹೆಸರಿಟ್ಟಳು ಬಂದು
ಆದರದಿ ಗೋಪ ಉಡುಗೊರೆ ಕೊಟ್ಟತಂದು
ವಿನೋದದಿ ಗೋಪಿ ಗುದ್ದಿದಳು ಒಂದೊಂದು
ಜೋ ಜೋ ೩೮
ಜಗವ ಸೃಷ್ಟಿಸಿದಂಥ ನಗಧರ ಬಂದು
ಖಗವಾಹನ ಅವತರಿಸಿದನೆಂದು
ಮಗುವಲ್ಲ ನಂದಗೋಪಗ ಹೇಳಬಂದು
ಸುಗುಣನ ಗರ್ಗ ತೊಟ್ಟಿಲ ಹಿಡಿರೆಂದು ಜೋ ಜೋ ೩೯

ನಾಗವೇಣಿಯರು ರಜ್ಜು ಹಿಡಿದು ಕರದಲಿ
ಆಗಮ ಯೋಗ್ಯನ ತೂಗಿ ಪಾಡುತಲಿ
ವಾಗೀಶ ಪಿತ ಮಲಗೆಂದು ನೋಡುತಲಿ
ಅಂಬರದಿ ಸುರರು ಶಿರವ ತೂಗುತಲಿ ಜೋ ಜೋ ೪೦

ಸೂರ್ಯರಶ್ಮಿ ರಜ್ಜು ತಾರತಮ್ಯದಲಿ
ಸಾರ ಪಂಚಭೇದ ಸರ ಮುತ್ತಿನ ಝಲ್ಲಿ
ಆರು ಶಾಸ್ತ್ರವೆಂಬೊ ಆಗಮ ತೊಟ್ಟಿಲಲಿ
ಮೂರು ಲೋಕದೊಡೆಯ ಮಲಗಯ್ಯ ಇಲ್ಲಿ ಜೋ ಜೋ ೪೧

ಕತ್ತಲೆಕಡು ಜಲವಟಪತ್ರದಿ ನಿದ್ರಿ
ಹತ್ತುವುದೇನಯ್ಯ ವ್ಯರ್ಥಮಲಗಿದ್ದಿ
ಅತ್ಯಂತ-ಮೃದುತರ ಹಾಸಿಗೆಯಲಿ
ಸ್ವಸ್ಥಾಗಿ ಮಲಗಯ್ಯ ಮಾಡೋ ಸುಖ ನಿದ್ರಿ ಜೋ ಜೋ ೪೨

ನೀರೊಳು ಮನೆಯ ಕಟ್ಟುವರೇನು ಕೇಳೊ
ಹಾರುವ ಹದ್ದನೆ ಏರುವರೆ ನೀ ತಾಳೊ
ಘೋರೆಂಬೊ ಸರ್ಪನ ಹಾಸಿಕೆ ಯಾಕೆ ಹೇಳೊ
ಮೂರೂ ಅಂಜಿಕೆ ಬಿಟ್ಟು ಮಲಗೋದಯಾಳೊ ಜೋ ಜೋ ೪೩

ತಂದುವೇದವ ಬೊಮ್ಮಗಿತ್ತವನೆ
ಮಂದರಗಿರಿಯ ಪೊತ್ತವನೆ
ಸುಂದರ ಭೂಮಿಯ ಎತ್ತಿದವನೆ
ಕಂದಗೊಲಿದ ಮುಕುಂದನೆ ಹರಿಯೆ ಜೋ ಜೋ ೪೪

ಬಲಿಯ ಪಾತಾಳಕ್ಕೆ ಒತ್ತಿದಿ
ಛಲದಿಂದ ಕೊಡಲಿಯ ಎತ್ತಿದಿ
ಲಲನೆ ತಂದ ಕೀರ್ತಿ ಬಿತ್ತಿದಿ
ಚಲುವರಾಮ ಕೃಷ್ಣ ಬೌದ್ಧ ಕಲ್ಕಿ ಸುಂದರನೆ ಜೋ ಜೋ ೪೫

ಕೇಶವ ಶ್ರೀರಮಣ ನಿದ್ರೆಯ ಮಾಡೊ
ಶ್ರೀಶ ಲಕ್ಷ್ಮಿನಾರಾಯಣ ನಿದ್ರೆಯ ಮಾಡೊ
ಈಶ ಕಮಲೇಶ ಮಾಧವ ನಿದ್ರೆಯ ಮಾಡೊ
ಕೂಸು ನಿದ್ರೆಯ ಮಾಡಲೆಂದಳು ಗೋಪಿ ಜೋ ಜೋ ೪೬

ವಿಮಲ ಪದ್ಮರಮಣ ಗೋವಿಂದ ಮಲಗೊ
ಅಮಿತ ಪದ್ಮಿನಿ ರಮಣ ವಿಷ್ಣು ನೀ ಮಲಗೊ
ಕಮಲಾಲಯ ರಮಣ ಮಧುಸೂದನ ಮಲಗೊ
ಸುಮನಸರೊಡೆಯ ಮಲಗೆಂದಳು ಗೋಪಿ
ಜೋ ಜೋ ೪೭

ಹಸುಳೆ ರಮಾರಮಣ ತ್ರಿವಿಕ್ರಮ ಮಲಗೊ
ಋಷಿಕಪಿ ರಮಣ ವಾಮನನೀ ಮಲಗೊ
ಬಿಸಜಾಕ್ಷ ಧನಪತಿ ಶ್ರೀಧರ ಮಲಗೊ
ಕುಸುಮನಾಭನೆ ಮಲಗೆಂದಳು ಗೋಪಿ ಜೋ ಜೋ ೪೮

ಬುದ್ಧಿ ರಮಣ ಹೃಷೀಕೇಶ ಮಲಗೊ
ಪದ್ಮನಾಭ ಯಜ್ಞ ರಮಣ ನೀ ಮಲಗೊ
ಮುದ್ದು ಇಂದಿರೆ ರಮಣ ದಾಮೋದರ ಮಲಗೊ
ರುದ್ರಾದಿ ವಂದ್ಯಗೆ ಮಲಗೆಂದಳು ಗೋಪಿ ಜೋ ಜೋ ೪೯

ಹರದಿ ರಮಣ ಸಂಕರ್ಷಣ ಮಲಗೊ
ಹರಿಣಿ ಪತಿ ವಾಸುದೇವ ನೀ ಮಲಗೊ
ಸ್ಮರಣಸತ್ಯ ರಮಣ ಪ್ರದ್ಯುಮ್ನ ಮಲಗೊ
ಕರುಣಾಪೂರ್ಣ ಮಲಗೆಂದಳು ಗೋಪಿ ಜೋ ಜೋ ೫೦

ನಿತ್ಯದೇವಿ ರಮಣ ಅನಿರುದ್ಧ ಮಲಗೊ
ಪುರುಷೋತ್ತಮ ನಂದನಾಧಿಕ ರಮಣ ನೀ ಮಲಗೊ
ಮತ್ತೆ ಪ್ರಾಜ್ಞಪತಿ ಅಧೋಕ್ಷಜ ಮಲಗೊ
ಸತ್ಯ ಸಂಕಲ್ಪ ಮಲಗೆಂದಳು ಗೋಪಿ ಜೋ ಜೋ ೫೧

ನರಸಿಂಹ ಸಖಿರಮಣ ಸರಸಾಗಿ ಮಲಗೊ
ಅರಸು ಸುಯುಗ ರಮಣ ಅಚ್ಯುತ ಮಲಗೊ
ವರ್ಷಕಾಲದಲೆ ಜನಾರ್ದನ ಮಲಗೊ
ಕ್ಷರ-ಕ್ಷರೋತ್ತಮ ಮಲಗೆಂದಳು ಗೋಪಿ ಜೋ ಜೋ ೫೨

ಸುಲಕ್ಷಣಪತಿ ರಮಣ ಉಪೇಂದ್ರ ನೀ ಮಲಗೊ
ಸುಲಭ ಸುಯುಗ ಶ್ರೀರಮಣ ಹರಿಯೆ ನೀ ಮಲಗೊ
ಚೆಲ್ವೆ ಸುಶೀಲೆ ಸುದತಿ ರಮಣ ಕೃಷ್ಣ ಮಲಗೊ
ಲಲನೆಯರ ಸಹಿತ ಮಲಗೆಂದಳು ಗೋಪಿ ಜೋ ಜೋ ೫೩

ಸೃಷ್ಟಿಕರ್ತಗೆ ದೃಷ್ಟಿ ನೆಟ್ಟೀತೆಂದು
ಥಟ್ಟನೆ ಗುಂಡಪ್ಪನ ಇಟ್ಟಳು ತಂದು
ಬಟ್ಟುಮುತ್ತುದುರುತ ಗೋಪಿ ತಾ ಬಂದು
ತೊಟ್ಟಿಲು ತೂಗಿದಳು ಕೃಷ್ಣ ಮಲಗೆಂದು ಜೋ ಜೋ ೫೪

ಚಿಂತಾಮಣಿಯ ತೊಟ್ಟಿಲು ಪೂಜೆಯೆಂದು
ಅಂತ–ರಿಕ್ಷದಲಿ ಅಮರರು ಬಂದು
ನಿಂತು ಮಲ್ಲಿಗೆ ಮಳೆಗರೆದರು ಅಂದು
ಸಂತೋಷವಾಯಿತು ಜಗಕೆಲ್ಲ ಇಂದು ಜೋ ಜೋ ೫೫

ರಾಶಿದ್ರವ್ಯಗಳ ಸೂರೆ ಬಿಟ್ಟು
ಕೂಸಿಗಾಶೀರ್ವಾದ ವಿಪ್ರರು ಕೊಟ್ಟು
ಆ ಸಮಯದಿ ನಂದ ಹರುಷಬಟ್ಟು
ಏಸು ಜನ್ಮದ ಪುಣ್ಯ ಫಲಿಸಿತಿನ್ನೆಷ್ಟು ಜೋ ಜೋ ೫೬

ಯತಿ–ಗಳಂತರ್ಯಾಮಿ ಮಧ್ವಮುನಿರಾಯ
ಯಥಾಮತಿ–ರಚನೆ ತೊಟ್ಟಿಲ ಪೂಜೆಯ
ಮತಿ–ಹೀನಳಾದ ಎನ್ನ ಮತಿಯಿಂದ ಜೀಯ
ಅತಿ–ಪ್ರೀತಿಯಿಂದ ಕೈಕೊಳ್ಳೊ ಕೃಷ್ಣಯ್ಯ ಜೋ ಜೋ ೫೭

ಬಂದ ಮುತ್ತೈದೆಯರಿಗೆ ಅರಿಷಿಣ ಕುಂಕುಮ ಕೊಟ್ಟು
ತಂದ ಬಾಗಿಣಗಳ ತುಂಬಿ ಮುಂದಿಟ್ಟು
ತಂದೆ ರಾಮೇಶಗೆ ರಕ್ಷವನಿಟ್ಟು
ಆನಂದಬಟ್ಟರು ಗೋಕುಲದವರಷ್ಟು ಜೋ ಜೋ ೫೮

# ೨೬೪

## (ಆ) ಸೇತು ಬಂಧನದ ಕೀರ್ತನೆ

ಸರ್ವರಮಣಿಯರೆಲ್ಲ ಕುಳಿತು ಕೇಳಿರಿ
ರಾಮ–ಕೃಷ್ಣ ಭಕ್ತರ ಷರತ್ತು ಪ

ರಾಮ ಹೆಚ್ಚು ಎನ್ನುವ ಮಾರುತಿ
ಕೃಷ್ಣ ಹೆಚ್ಚು ಅನ್ನುವ ಪಾರ್ಥ ಅಪಲ್ಲ

ಕ್ಷೇತ್ರ ಯಾತ್ರೆಗಳ ಮಾಡುತ
ವೇಗದಿ ಹೊರಟಿದ್ದನು ಕುಂತಿಸುತ
ಧರಿತ್ರಿಯೊಳಗೆ ಎನ್ನ ಸಮಾನ ವೀರರು
ಯಾರೂ ಇಲ್ಲ ಎಂದು ನೆನೆಯುತ್ತ
ನಡು ಮಾರ್ಗದಲಿ ಕಡಲದಂಡೆಯಲಿ
ಕುಳಿತಿದ್ದ ಆ ವಾಯುಸುತ
ಬಿಡದೆ ಜಾನಕಿ ಪತಿಯನು
ಸತತದಿ ಒಂದೇ ಭಾವದಿ ನೆನೆಯುತ
ರಾಮಶಬ್ದ ಕೇಳಿ ಅರ್ಜುನಗೆ
ಆಯಿತು ಮನದೊಳಗೆ ಭೀತ
ರಾಮಧ್ಯಾನದೊಳು ಪರವಶನಾಗಿದ್ದ
ಮಾರುತ ಎದುರಿಗೆ ನಿಂತ
ಪುಂಡತನದಿ ಗಾಂಡೀವಿಯು ನೋಡಿ
ಮರ್ಕಟ ಎಂದೆನುತಲಿ ನಕ್ಕ
ಕಂಡ ಮಾರುತಿ–ಕಣ್ಣುಗಳ ತೆರೆದು
ಬಾಲಕ ಬಿಡು ನಿನ್ನೀ ಸೊಕ್ಕ
ಬಾಲಕನೆನ್ನುವಿ ಸೈರಿಸೊ ಮರ್ಕಟ
ನಾನು ತಿಳಿಯೊ ಕೃಷ್ಣನ ಭಕ್ತ
ಲಾಲಿಸು ಹದಿನಾಲ್ಕು ಲೋಕದೊಳಗೆ
ನರವೀರನೆಂದು ನಾ ಪ್ರಖ್ಯಾತ
ಅಂದ ಮಾತು ಕೇಳಿ ಪವಮಾನ
ಇಂದ್ರಸುತ–ನಿಗೇನು ದರಕಾರ

ಕಂದ ನಿನ್ನ ತಲೆಮ್ಯಾಲೆ ಮಾಸ ಹಾರಿಲ್ಲ
ಬ್ಯಾಡ ಬಿಡೊ ಉನ್ಮತ್ತ
ನಡೆನಡೆ ಮೂರ್ಖನೆ ಯದುಕುಲ ಕೃಷ್ಣನ
ಹೊಗಳ ಬ್ಯಾಡೊ ಪೌರುಷವನ್ನು
ಬಿಡದೆ ಅವನ ಚರಿತವ
ಪೇಳುವೆ ಕೇಳೊ ಮೌನದಿಂದಲಿ ನೀನು
ಆಸೆ ಬುರುಕನಾಗಿ ಮೀಸಲು ಮುರಿಯದ
ಹಾಲು ಬೆಣ್ಣೆ ಕದ್ದು ತಿಂದಾತ
ಏಸು ಸ್ತ್ರೀಯರ ಸಂಗ ಮಾಡಿದರು
ಬ್ರಹ್ಮಚಾರಿಯೆ ಎನ್ನವನೀತ
ಮಾವ ಕಡಿಯಲು ಬಂದರೆ
ಮಾಯದಿ ಗಗನದಿ ಹಾರಿ ಹೋದಾತ
ಆವ ಕಾಲದೊಳು ಅಡವಿಯಲಿ
ದನಗಳ ಕಾಯುವಂಥ ದೂತ
ಅರಿವು ಇಲ್ಲದೆ ಗೊಲ್ಲರ ಕೂಡಿ
ದರೋಡೆಖೋರ ಎನಿಸಿದಾತ
ಶಿರವು ನಡುಗುತ್ತಿದ್ದ ಮುದುಕಿಗೆ
ಹದಿನಾರು ವರ್ಷದ ಸ್ತ್ರೀಯ ಮಾಡಿದಾತ

ಒಂದು ಹೆಣ್ಣಿಗೆ ಐವರುಗಂಡರನ
ಮದುವೆ ಮಾಡಿ ಕೂಡಿಸಿದಾತ
ಸಂಧಿಯ ಸಾಧಿಸಿ ತನ್ನ ತಂಗಿಯ
ಸನ್ಯಾಸಿ ಸಂಗಡ ಕೊಟ್ಟಾತ

ಕೆಂಪು ಕಣ್ಣುಗಳ ಗುಡ್ಡಿ
ಹೂಂಕರಿಸಿ ಹೊಡೆದನೊ ಮಡ್ಡು
ಅರ್ಜುನ ಕಚ್ಚುತ ದವಡೆ
ಹನುಮಂತನ ದಿಟ್ಟಿಸಿ ನೋಡಿ ೧

ಮಂಗನ ಸಂಗ ತರವಲ್ಲವೆಂದು
ಹಿರಿಯರು ಹೇಳಿದ್ದು ಯಥಾರ್ಥ
ಬಂಗ ಬಿಟ್ಟು ಎನ್ನ ಸ್ವಾಮಿ
ಕೃಪೆಗೆ ನುಡಿದಿಯಲ್ಲೊ ಅಪವಿತ್ರ

ನಿನ್ನ ಸ್ವಾಮಿ ಏನು ಮಾಡಿದನು
ಪೇಳೋ ಮರ್ಕಟ ಪರಾಕ್ರಮ
ತನ್ನ ಹೆಂಡತಿಯ ದೈತ್ಯರೊಳಿರಿಸಿ
ಕುಳಿತುಕೊಂಡು ಮೂಲ್ಯಾಗ ಸುಮ್ಮ

ಏಕಪತ್ನಿ ವ್ರತಸ್ಥನೆಂದು
ಆ ಹಿತ ಸತಿಗೆ ಯಾಕೆ ವಚನವಕೊಟ್ಟ
ಕಾಕುತನದಿ ಸುಗ್ರೀವ ಅನುಜಗೆ
ಹೊಡೆದ ಬಾಣದಿಂದಲಿ ಪೆಟ್ಟ

ಬಾಯಿ ಬಿಡತೆ ರಾಮ ಎಂದ
ತಂದೆಯ ಪ್ರಾಣವನ್ನು ರಕ್ಷಿಸದಾತ
ನ್ಯಾಯವರಿಯದೆ ಮನೆ ಮಾರು ಬಿಟ್ಟು
ಮೌನವ ಆಚರಿಸುವನೀತ

ತನ್ನ ಮಕ್ಕಳ ಗುರುತು ಇಲ್ಲದೆ
ಸೋತು ಬಂದನು ಓಡುತ
ಮನ್ನಿಸಿ ಮಡದಿಯ ಪಾದಕೆಬಿದ್ದು
ತಾಯಿ ಏಳಬೇಕೆಂದೆನುತ

ವೀರರಾದರೆ ಶರಗಳಿಂದ
ಸೇತುವೆಯ ಕಟ್ಟಲಿಲ್ಯಾಕೆ ಹೇಳು
ವೀರರೆ ನೀವು ಮರ್ಕಟಗಳಿರ
ಹಾರಾಡುತೆ ವೃಕ್ಷಂಗಳೊಳು
ಬಡಿವಾರ ಮಾತು ಹೇಳಬ್ಯಾಡೊ
ಬಿಡು ರಾಮಚಂದ್ರನ ಚರಿತ್ರೆ
ಪೊಡವಿಯೊಳಗೆ ಗೋಪಾಲನಾಥ
ಗೋಪಾಲಕೃಷ್ಣನೆ ಮಿಗಿಲೆನುತ

ತಿಳಿಯದೆ ಮಾತಿನ ಸಾರ
ಕೋತಿಗಳಿಗೆ ಅವರವಿಚಾರ
ವನದೊಳಗೆ ಇರುತಿ–ನಿರಂತ–ರ
ಮಾನವರದೇನು ದರಕಾರ ೨

ನುಡಿದ ಮಾತಿಗೆ ರೌದ್ರರೂಪದಿ
ಮಾರುತಿ ಹೂಂಕರಿಸುತ ಆಗ
ಜಡವಾದ ದೇಹಕೆ
ಶರಗಳು ಎನ್ನ ಕಿರಿಬೆರಳುಗಳು ತಿಳಿ

ಈಗ ಅವಮಾನ ಗೊಳಿಸಿದೆ
ಎನ್ನ ಶರಗಳಿಗೆ
ಏಳು ಮರ್ಕಟ
ತ್ವರಿತದಲಿ

ಪವಮಾನ ಈಗ ಸೇತುವೆ
ಕಟ್ಟುವೆ ತೋರೋ ಬಲವನು
ಎದುರಿನಲಿ ಮುರಿದರೆ ಅಗ್ನಿಗೆ
ಪ್ರಾಣವ ನೀಡುವೆ ಇಡುವುದಿಲ್ಲ ದೇಹ

ಮುರಿಯದಿದ್ದರೆ ಚಿರಂಜೀವಿ
ನೀನು ಅಭಯ ಪೇಳೊ
ಈ ಸಮಯದಲಿ ಸೇತ–ವಾಹನನ
ನುಡಿಗಳಾಲಿಸಿ ಮಾರುತಿ–ನಗುತೆ–ಹಾಸ್ಯದಲಿ
ಸೇತುವೆ ಮುರಿಯದಿದ್ದರೆ
ನಿನ್ನ ದೂತ–ನಾಗುವೆ ರಥದಲ್ಲಿ
ಈರ್ವರೂ ಪ್ರತಿಜ್ಞೆಗೈದು
ಅರ್ಜುನ ಕುಳಿತನೊ ಮುಂದೆ

ಸೇತುವೆ ಕಟ್ಟುತೆ
ಸಂದು ಸಂದು
ಸಡಿಲಾಗದಂತೆ
ಬಿಗಿ ಬಿಗಿದು ೩

ದಿಟ್ಟತನದಿ ಜೈರಾಮನೆಂದು
ಹಾರಿದನು ಆಂಜನೇಯ
ಝೇಂಕಾರ ಖಟ್ ಖಡಲ್
ಎಂದು ಶತಕೋಟಿ ಸಿಡಿಲು
ಸಿಡಿದ ಸಪ್ಪಳದ ಹಾಹಾಕಾರ
ಛಟ ಛಟ ಕೆಂಗಿಡಿ ಹಾರಲು
ಸುರರು ಗೈಯುತಲೆ ಹಾಹಾಕಾರ
ಪುಟಿದು ಗಗನಕ್ಕೆ ಜಿಗಿದು ನಿಂತನು

ತನ್ನ ಶಕ್ತಿಯಿಂದಲಿ ಜೋರ
ಖಡ ಸಪ್ಪಳವಾಗಿ
ಸೇತುವೆ ಒಡೆದು ಬಿತ್ತು
ಅರ್ಧ ಭಾಗ

ಕಡಲೊಳಗಿನ ಮೀನು
ಮೊಸಳೆಗಳು ಮಡಿದವು
ಅರ್ಧ ಕ್ಷಣದೊಳಗೆ
ಬ್ರಹ್ಮಾಂಡವೆ ಸ್ಫೋಟವಾಗುವಂತೆ

ಪಾರ್ಥಗೆ ಆಯಿತು ಭೀಕರ
ಬ್ರಹ್ಮಚರ್ಯದ ಸತ್ವವ ಅರಿತು
ನಯ ಹಚ್ಚಿ ನಿಂತನು ಪೂರ
ಕೊಟ್ಟ ವಚನವ ಪೂರ್ಣ ಮಾಳ್ಪೆನೆಂದು
ಥಟ್ಟನೆ ನಡೆದನು ತಾನಾಗ

ಕಾಷ್ಠದಿಂದ ಅಗ್ನಿ ನಿರ್ಮಿಸಿ
ನಿಂತ ಕಿರೀಟಿಗೆ ಕರ ಮುಗಿದಾಗ
ಸೃಷ್ಟಿಕರ್ತ ಗೋಪಾಲಕೃಷ್ಣನೆ ಕೊನೆಯ ದರ್ಶನ ಇಂದೆನಗೆ

ಅಷ್ಟರಲ್ಲಿ ಅಚ್ಯುತನು
ವೃದ್ಧನ ವೇಷದಿಂದ
ಬಂದನು ನಡುಗುತ
ದೇಹ ಕೈಕಾಲು

ಬಿಡದೆ ಹೊದ್ದಿಹ
ತಲೆ ಮೇಲೆ ಶಾಲು
ಬಗಲಲಿ ಸುದರ್ಶನ ಚೀಲ
ಭಕ್ತರಿಗೆ ಮೆಚ್ಚಿಕೇವಲ ೪
ದೀನವಾಣಿಲೆ ಕೂಗುತ-ಜರಠನು
ಬಾಲಕ ಪೇಳೊ ಎನಗಿಲ್ಲಿ
ಜ್ಞಾನವಿಲ್ಲದೆ ಮರ್ಕಟ ಮಾತಿಗೆ
ಪ್ರಾಣಕೊಡುವಿಯಲ್ಲೊ

ಅಗ್ನಿಯಲ್ಲಿ ಮರ್ಕಟನೆನ್ನುವಿ
ಜರಠನೆ ಕೇಳೊ ವೀರ
ರಾಮದೂತನು ನಾನು
ಮೂರ್ಖತನದಿ
ಮೈ ಸೊಕ್ಕಿನಿಂದ
ಪಂಥವನು ತೊಟ್ಟು
ತಾ ನಿಂತಿಹನು
ಸಾಧು ಮಾತುಗಳನ್ನಾಡ ಬ್ಯಾಡೊ ಬಲ್ಲೆನೊ
ಮಾತಿನ ಉತ್ತರವಾದವು
ಯಾತಕೊ ತೋರೊ
ಬಲವನು ಎದುರಿನಲಿ
ನಮ್ಮ ಪಂಥ ಪೂರಾ

ವಾನರೇಂದ್ರ ದಿಟ್ಟಿಸಿ ನೋಡುತ
ವೃದ್ಧನ ಶಾಂತ ಮೂರ್ತಿಯ
ಚಿತ್ತ ಬಾಲಕ ಏಳೊ ಏಳು
ಸೇತುವೆ ಕಟ್ಟು ತ್ವರಿತ

ಪಾರ್ಥಸಿದ್ಧನಾಗಿ ತಾ ನಿಂತ
ತಕ್ಷಣ ಫಲ್ಗುಣ
ಶ್ರೀ ಧ್ಯಾನದಿ
ಸೇತುವೆ ಕಟ್ಟುತೆ
ತನ್ನೊಳು ೫

ಪಕ್ಷಿವಾಹನನ ಮಾಯದಿಂದಲಿ
ಚಕ್ರವಿಟ್ಟನೊ ಮಧ್ಯದೊಳು
ಗಡದಿಬಾರೊ ರಘುರಾಮ ದೂತನೆ
ತೋರೊ ಬಲವನು ಎದುರಿನಲಿ
ಕಡಲಶಯನನ ಕಾಪಟ್ಯವ ಅರಿಯದೆ
ಹನುಮನಿಂತ ಮೇಲ ಬದಿಯಲ್ಲಿ
ಉಡ್ಡಣ ಮಾಡಿದ ಗಗನ ಮಂಡಲಕೆ
ಜೈ ರಾಮವೆಂದು ಕಪಿವೀರ

ಜಡತ ವಜ್ರದೇಹಕ್ಕೆ
ಸೇತು ಮೇಲಿಂದ ಉರುಳಿ
ಬಿದ್ದ ತಪ್ಪಿ ಎಚ್ಚರ
ಅನುತಾಪದಿ ಮಮ ರಾಮಚಂದ್ರನೆ ಮುನಿಸಿದೆಯ
ಎನಗೀ ಹೊತ್ತು
ಅನುನಯದಿಂದಲಿ ಕರಗಳ
ಪಿಡಿವೆನೊ ಕಂದನ
ಪೊರೆ ಕರುಣಾ ಭರಿತ

ರಾಮರಾಮ ಜಯರಾಮ
ರಾಮ ಶ್ರೀರಾಮ ರಾಮ
ಬಾರೊ ತ್ವರಿತ ಶ್ಯಾಮಲಾಂಗ
ಕರುಣಾಕರ ಮೂರ್ತಿಯೆ

ಹನುಮನ ದನಿಯನು
ಆಲಿಸುತ ಅಕ್ಕರೆಯಿಂದಲಿ
ಕರಗಳಿಂದ ಎತ್ತಿಕೊಂಡನೊ
ಹರಿ ಆಗ ಭಕ್ತಿಗೆ ಮೆಚ್ಚಿ

ರಾಮಚಂದ್ರನ ರೂಪವ
ತೋರಿದ ತಾನಾಗ
ಕುಣಿ ಕುಣಿದು ಭಜನ
ಪಾಡುತ ಪ್ರಭುರಾಮಚಂದ್ರನ

ಸುತ್ತ ಮುತ್ತ
ತಿಳಿಯದೊ ಲೀಲೆ
ಸೀತಾನಾಥ ವೃದ್ಧ
ಮಾಯವಾದನೊ ತ್ವರಿತ ೬

ಅಕ್ಕರೆಯಿಂದಲಿ ಮಾರುತಿರಾಯನ
ಕುಂತಿ ಕುಮಾರನು ಆಲಿಸುತ
ಧಾರುಣಿಯೊಳಗೆ ಭಾಪು ಭಾಪು
ಧನಂಜಯನೆ ಸೋತನೊ

ಈ ಹೊತ್ತು ದ್ವಾಪರಯುಗದ
ಯಾದವರಾಯನ ವೀರದೂತನೆ
ಪ್ರಿಯ ಬಂಧು ಕೋಪಿಸಬೇಡ
ನಿನ್ನ ರಥ ಧ್ವಜದ ಮೇಲೆ
ಕುಳಿತು ಕೊಳ್ಳುವೆನೊ ನಾ ಬಂದು

ಪಾರ್ಥನ ಮುದದಿ ಆಲಂಗಿಸುತ
ಶ್ರೀ ರಾಮೇಶನ ಸ್ಮರಿಸುತ
ಶ್ರೀ ರಾಮನಾಮ ಜಪಿಸುತ
ಹನುಮನೇರಿದ ಗಿರಿಯನು ಮತ್ತೆ
ಪಾರ್ಥನುನಡೆದ ಯಾತ್ರೆ ಮಾಡುತ ೭

# ಅನುಬಂಧ–೪

## ಒಡವೆಗಳು ಮತ್ತು ವಾದ್ಯ ಪರಿಕರಗಳು

**(ಅ) ಒಡವೆಗಳು**

ಅಂದುಗೆ
ಅರಳೆಲೆ
ಉಂಗುರ
ಒಡ್ಯಾಣ
ಕಂಕಣ
ಕುಂಡಲ
ಕಡಗ
ಕಟಿಗಂಟೆ
ಕಡ್ಡಿಬಳೆ
ಕಾಲಂದುಗೆ
ಕಿರುಗೆಜ್ಜೆ
ಕೊಪ್ಪು
ಗೆಜ್ಜೆ
ಗೊಂಡ್ಯ
ಗೊಂಡೆಯಕಂಠಿ
ಝುಲ್ಲಿ
ತಾಯತ
ತೋಳಬಂದಿ
ದೋರೆ
ಪಂಚರತ್ನ
ಪಂಜರದ ವಾಲೆ
ಪದ್ಮ
ಬಂಗಾರದ ಮಣಿ
ಬಟುಮುತ್ತು
ಬಿಂದಲಿ
ಬುಗುಡಿ
ಭಾಪುರಿ
ಮುಕುಟ
ಮುತ್ತಿನಕುಚ್ಚು
ಮುತ್ತಿನಸರ
ಮುರಿಗೆವಂಕಿ
ರಾಗಟೆ
ರುಳಿ
ವಂಕಿ
ವಾಲೆ
ವೈಜಯಂತಿ ಹಾರ
ಸರಿಗೆ
ಸರಪಳಿ
ಹಾರ

ಹೊನ್ನುಂಗುರ

ಹೊನ್ನೋಲೆ

**(ಆ)–ವಾದ್ಯ ಪರಿಕರಗಳು**

ಕಂಸಾಳೆ

ಕರಣೆ

ಕಾಳಿ

ಕೊಳಲು

ಗಂಟೆ

ಜಾಂಗಟೆ

ಡಂಕ

ತಂಬಟೆ

ತಂಬೂರಿ

ತಾಳಮದ್ದಳೆ

ತುತ್ತೂರಿ

ದುಂದುಭಿ

ನಾಗಸ್ವರ

ಭೇರಿ

ಶಂಖ

ಹೆಗ್ಗಾಳೆ

# ಅನುಬಂಧ–೫

## ಕೀರ್ತನೆಗಳ 'ಅ'ಕಾರಾದಿ

| ೧ | ೨ | ೩ |
|---|---|---|
| ೧೫೯. | ಪಾರ್ಥನರಸಿಯರು ಪ್ರಾರ್ಥಿಸಿ | ೧೧ |
| ೧೬೦. | ಪಾಲಿಸೆ ಸರಸ್ವತಿ ಪಾಲಿಸೆ | ೯ |
| ೧೬೧. | ಪ್ರೀತಿಯ ಮಾಡ ನೀತಿಯ ಶುಕವಾಣಿ | ೧೦೨ |
| ೧೬೨. | ಬಂಟರಾಗಿ ಬಾಗಿಲಕಾಯೋರು ಹರಿಯ | ೨೧ |
| ೧೬೩. | ಬಂದ ಜನರು ಬ್ಯಾಗ ಏಳಿರೀಗ | ೨೫೭ |
| ೧೬೪. | ಬಂದರೆ ಭಾಗ್ಯಲಕ್ಷ್ಮಿಯರು | ೧೩೩ |
| ೧೬೫. | ಬಂದಾರೆ ಅತ್ತಿಗೆಯರ ಚಂದ ನೋಡಿರೆ | ೬೫ |
| ೧೬೬. | ಬಂದು ನಮ್ಮ ಮನೆಗೆ ನಿಂದಿಸಿಲ್ಲಿಗೆ | ೨೨೦ |
| ೧೬೭. | ಬಂದೆನವ್ವ ಭಾವಕಿಯ ರನ್ನೆ | ೫೫ |
| ೧೬೮. | ಬರತಾರಂತ್ಹೇಳೆ ಹರಿಪಾದ ದರ್ಶನಕೆ | ೪೨ |
| ೧೬೮A. | ಬರತಾರಂತ್ಹೆಳೆ ಬಾಲೆ ಕರೆಯಲು | ೪೬ |
| ೧೬೯. | ಬರುವ ಸಂದಣಿ ಭಾಳೆ ಭಾಳವೆ | ೧೭೫ |
| ೧೭೦. | ಬಲು ಬಲು ಬೆರಗಾದ ಬಲರಾಮನು | ೧೫೯ |
| ೧೭೧. | ಬಲ್ಲಿದ ಗುರುಗಳಿಗೆ ಎಲ್ಲ | ೨೬೦ |
| ೧೭೨. | ಬಲ್ಲೆ ಬಲ್ಲೆ ನಿಮ್ಮೆಲ್ಲರ ಗುಣವನು | ೮೮ |
| ೧೭೩. | ಬಾಗುವ ತೆಂಗಿನಮರ ನೋಡ | ೧೫೩ |
| ೧೭೪. | ಬಾರೆ ರುಕ್ಮಿಣಿ ನಿನ್ನ ಮುಖತೋರೆ | ೬೦ |
| ೧೭೫. | ಬಾರೆ ವೈಯಾರಿ ದೊಡ್ಡಮಾರಿ | ೨೨೮ |
| ೧೭೬. | ಬಾರೆ ಸಖಿ ವಾರಿಜಮುಖಿ | ೬೬ |
| ೧೭೭. | ಬಾರೋಬಾರೋ ಕೃಷ್ಣ ಬಾರೋ | ೨೪೦ |
| ೧೭೮. | ಬಾ ವೆಂಕಟರಮಣ ಭಾಗ್ಯದ ನಿಧಿಯೆ | ೧೪೮ |
| ೧೭೯. | ಬ್ಯಾಡಾ ಬ್ಯಾಡಿರೆಂದ ಅವರೊಳು | ೬೪ |
| ೧೮೦. | ಬಿಂಕವ್ಯಾತಕೆ ನಮ್ಮಕೂಡ | ೭೪ |
| ೧೮೧. | ಬಿಟ್ಟು ಬರಲಾರಳಮ್ಮಯ್ಯ | ೬೨ |
| ೧೮೨. | ಬಿಟ್ಟು ಹೋಗುವರೇನೋ | ೨೦೯ |
| ೧೮೩. | ಬಿನ್ನಹ ಮಾಡುವೆನು ಅತ್ತಿಗೆಯರ | ೧೨ |
| ೧೮೪. | ಬೊಮ್ಮಗೆ ಶರಣೆಂದೆವಮ್ಮ | ೧೪೩ |

| ೧ | ೨ | ೩ |
|---|---|---|
| ೨೩೯. | ಸಜ್ಜನ ಬಾಲೆಯರ ಲಜ್ಜೆಗೈಸಿದಿ | ೨೩೧ |
| ೨೪೦. | ಸರ್ಪಶಯನನೆಂಬೋ ದಿವ್ಯ | ೬೯ |
| ೨೪೧. | ಸಾಕುಬಿಡು ಭಾವೆ ಸಾಕುಬಿಡು | ೮೨ |
| ೨೪೨. | ಸಾಕೋ ಪಾರ್ಥ ನಿನಗ್ಯಾಕೊ | ೮೪ |
| ೨೪೩. | ಸಾಕೋ ರಂಗ ಅರಸುತನ ಯಾಕೊ | ೯೧ |
| ೨೪೪. | ಸ್ವಾಮಿ ಬಂದನು ಸತ್ಯಭಾಮೆ | ೧೫೮ |
| ೨೪೫. | ಸುಂದರಿಯರೆಲ್ಲರು ಇಂದಿರೇಶನ | ೨೧೩ |
| ೨೪೬. | ಸುಗುಣಿಯರಿಬ್ಬರು ಬಂದು ಹಗರಣವ | ೫೨ |
| ೨೪೭. | ಸುರ ನಾರಿಯರ ಮಹಿಮೆ ಪರಿಪರಿ | ೧೮೫ |
| ೨೪೮. | ಸುಲಭದಿಂದ ಪಾಂಡವರ ಗೆಲಿದು | ೧೨೨ |
| ೨೪೯. | ಸುವ್ವಿ ಸತ್ಯಭಾಮೆ ಸುವ್ವಿ | ೯೯ |
| ೨೫೦. | ಸುಳ್ಳಿಗೆ ನಗರೇನೋ ರಂಗಯ್ಯ | ೯೬ |
| ೨೫೧. | ಸೈಯೆ ಸೈಯೆ ಸೈಯೆ | ೭೭ |
| ೨೫೨. | ಸೊಂಡಿಲಾ ನಗರದ ಭೂಪನ | ೧೭೪ |
| ೨೫೩. | ಸೋಬಾನವೆನ್ನಿರೆ ಶ್ರೀದೇವಿ ಅರಸಗೆ | ೧೦೧ |
| ೨೫೪. | ಹನುಮನ ಬಲಗೊಂಬೆ ಹರುಷದಲೆ | ೧೪೪ |
| ೨೫೫. | ಹರಿಯು ಉಂಬೊ ಹರುಷವಮ್ಮ | ೧೦೦ |
| ೨೫೬. | ಹಸ್ತಿನಾಪುರದಾಗ ಹಸ್ತಿಮೊದಲಾದ | ೬ |
| ~~೨೫೭.~~ | ~~ಹಿಂಡು ನಾರಿಯರೆಲ್ಲ ಕೂಡಿ~~ | ~~೧೫೭~~ |
| ೨೫೮. | ಹಿಡಿಯೊ ರಂಗಯ್ಯಾ ಉಡುಗೊರೆ | ೧೦೮ |
| ೨೫೯. | ಹಿಡಿರಂಗ ಜವಳಿ ಕೊಡು | ೨೬೨ |
| ೨೬೦. | ಹಿಡಿಸುವೆ ಹುಚ್ಚನೆ ಹಿಡಿಸುವೆ | ೨೨೧ |
| ೨೬೧. | ಹಿರಿಯ ಅತ್ತಿಗೆಯರ ಗರವು | ೭೫ |
| ೨೬೨. | ಹೋಗಿಬರತೇವ ಸಾಗರನ ಮಗಳೆ | ೧೧೦ |

## ಏಕೈಕ ಆಕರದ ಕೀರ್ತನೆಗಳು

೧. ಜೋ ಜೋ ಜೋ ಜೋ (ಜೋಗುಳದ ಪದ)
೨. ಸರ್ವರಮಣಿಯರೆಲ್ಲ ಕುಳಿತುಕೇಳಿರಿ

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ
ದಾಸಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ ಜೆ.ಸಿ. ರಸ್ತೆ
ಬೆಂಗಳೂರು